# ತುಮಕೂರು  ವಿಶ್ವವಿದ್ಯಾನಿಲಯ



## "ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಐತಿಹಾಸಿಕ ಪ್ರವಾಸೋದ್ಯಮದ ಒಂದು ಅಧ್ಯಯನ"

ಇತಿಹಾಸ ಮತ್ತು ಪುರಾತತ್ವ ಅಧ್ಯಯನ ಹಾಗೂ ಸಂಶೋಧನಾ ವಿಭಾಗದಲ್ಲಿ ಪಿಹೆಚ್.ಡಿ ಪದವಿಗಾಗಿ ಈ ಮಹಾಪ್ರಬಂಧವನ್ನು ತುಮಕೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಲಾಗಿದೆ.

ಸಂಶೋಧನಾರ್ಥಿ

ಸೂರ್ಯನಾರಾಯಣ. ಎನ್

ನೋಂದಣಿ ಸಂಖ್ಯೆ : 15HS011

ಸಂಶೋಧನಾ ಮಾರ್ಗದರ್ಶಕರು

ಡಾ. ಪ್ರಿಯಾ ಠಾಕೂರ್

ಸಹಾಯಕ ಪ್ರಾಧ್ಯಾಪಕರು

ಇತಿಹಾಸ ಮತ್ತು ಪುರಾತತ್ವ ಅಧ್ಯಯನ ಹಾಗೂ ಸಂಶೋಧನಾ ವಿಭಾಗ

**2021**

## ಮಾರ್ಗದರ್ಶಕರ ದೃಢೀಕರಣ ಪತ್ರ

ಸೂರ್ಯನಾರಾಯಣ್ ಎನ್ ಸಂಶೋಧನಾರ್ಥಿ ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ "ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಐತಿಹಾಸಿಕ ಪ್ರವಾಸೋದ್ಯಮದ ಒಂದು ಅಧ್ಯಯನ" ಎಂಬ ವಿಷಯ ಕುರಿತು ಮಹಾಪ್ರಬಂಧವನ್ನು ಇತಿಹಾಸ ಮತ್ತು ಪುರಾತತ್ವ ಅಧ್ಯಯನ ಮತ್ತು ಸಂಶೋಧನಾ ವಿಭಾಗದಲ್ಲಿ ಪಿಹೆಚ್.ಡಿ ಪದವಿಗಾಗಿ ತುಮಕೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದಾರೆ.

ಈ ಮಹಾಪ್ರಬಂಧವನ್ನು ಭಾಗಶಃವಾಗಿಯಾಗಲಿ ಪೂರ್ಣವಾಗಿಯಾಗಲಿ ಈ ವಿಶ್ವವಿದ್ಯಾನಿಲಯದ ಅಥವಾ ಬೇರೆ ಯಾವ ವಿಶ್ವವಿದ್ಯಾಲಯಗಳ ಪದವಿ ಡಿಪ್ಲೊಮೊ ಅಥವಾ ತತ್ಸಮಾನ ಪದವಿಗಳಿಗಾಗಿ ಈ ಹಿಂದೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಮಾರ್ಗದರ್ಶಕರು.

(ಡಾ. ಪ್ರಿಯಾ ಠಾಕೂರ್)

ಸ್ಥಳ: ತುಮಕೂರು

ದಿನಾಂಕ:

# ಕೃತಿ ಚೌರ್ಯ ಪ್ರಮಾಣ ಪತ್ರ

ಸೂರ್ಯನಾರಾಯಣ್ ಎನ್ (ನೊಂದಣಿ ಸಂಖ್ಯೆ 15HS011) "ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಐತಿಹಾಸಿಕ ಪ್ರವಾಸೋದ್ಯಮದ ಒಂದು ಅಧ್ಯಯನ" ಎಂಬ ವಿಷಯದ ಕುರಿತು ಡಾ. ಪ್ರಿಯಾ ಠಾಕೂರ್ ಸಹಾಯಕ ಪ್ರಾಧ್ಯಾಪಕರು, ಇತಿಹಾಸ ಮತ್ತು ಪುರಾತತ್ವ ಅಧ್ಯಯನ ಹಾಗೂ ಸಂಶೋಧನಾ ವಿಭಾಗ, ತುಮಕೂರು ವಿಶ್ವವಿದ್ಯಾನಿಲಯ ರವರ ಮಾರ್ಗದರ್ಶನದಲ್ಲಿ ಸಂಶೋಧನೆಯನ್ನು ಪೂರ್ಣಗೊಳಿಸಲಾಗಿದ್ದು ಸಂಶೋಧನಾ ಮಹಾಪ್ರಬಂಧವನ್ನು ತುಮಕೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದು ಸದರಿ ಸಂಶೋಧನಾ ಮಹಾಪ್ರಬಂಧದಲ್ಲಿ ಯಾವುದೇ ಕೃತಿಚೌರ್ಯ ಆಗಿರುವುದಿಲ್ಲವೆಂದು ಹಾಗೂ ಈ ಮಹಾಪ್ರಬಂಧವು ನನ್ನ ಸ್ವಂತ ಅಧ್ಯಯನದ ಸಂಶೋಧನೆಯಿಂದ ಕೂಡಿದ್ದಾಗಿದೆ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಸಂಶೋಧನಾರ್ಥಿ

ಸೂರ್ಯನಾರಾಯಣ್ ಎನ್

ಸ್ಥಳ: ತುಮಕೂರು

# ಘೋಷಣಾ ಪತ್ರ

ಸೂರ್ಯನಾರಾಯಣ್ ಎನ್ ಸಂಶೋಧನಾರ್ಥಿ ಆದ ನಾನು ಡಾ. ಪ್ರಿಯಾ ಠಾಕೂರ್ ಸಹಾಯಕ ಪ್ರಾಧ್ಯಾಪಕರು, ಇತಿಹಾಸ ಮತ್ತು ಪುರಾತತ್ವ ಅಧ್ಯಯನ ಮತ್ತು ಸಂಶೋಧನಾ ವಿಭಾಗ ತುಮಕೂರು ವಿಶ್ವವಿದ್ಯಾಲಯ, ಇವರ ಮಾರ್ಗದರ್ಶನದಲ್ಲಿ "ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಐತಿಹಾಸಿಕ ಪ್ರವಾಸೋದ್ಯಮದ ಒಂದು ಅಧ್ಯಯನ" ಎಂಬ ವಿಷಯವನ್ನು ಕುರಿತು ಮಹಾಪ್ರಬಂಧವನ್ನು ಸಿದ್ಧಪಡಿಸಿ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ಹಾಗೂ ಸಂಶೋಧನಾ ವಿಭಾಗದಲ್ಲಿ ಪಿಹೆಚ್.ಡಿ ಪದವಿಗಾಗಿ ತುಮಕೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ.

ಈ ಮಹಾಪ್ರಬಂಧವನ್ನು ಭಾಗಶಃವಾಗಿಯಾಗಲಿ ಪೂರ್ಣವಾಗಿಯಾಗಲಿ ಈ ವಿಶ್ವವಿದ್ಯಾಲಯದ ಅಥವಾ ಬೇರೆ ಯಾವ ವಿಶ್ವವಿದ್ಯಾನಿಲಯಗಳ ಪದವಿ ಡಿಪ್ಲೋಮೋ ಅಥವಾ ತತ್ಸಮಾನ ಪದವಿಗಾಗಿ ಈ ಹಿಂದೆ ಸಲ್ಲಿಸಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಮಾರ್ಗದರ್ಶಕರು.

(ಡಾ. ಪ್ರಿಯಾ ಠಾಕೂರ್)

ಸ್ಥಳ: ತುಮಕೂರು

ದಿನಾಂಕ:

# ಕೃತಜ್ಞತೆಗಳು

ಪ್ರಥಮವಾಗಿ ನನ್ನ ಸಂಶೋಧನಾರ್ಥಿಯಾಗಿ ಆಯ್ಕೆಮಾಡಿಕೊಂಡು ಸಂಶೋಧನಾ ವಿಷಯಕ್ಕೆ ಸಂಬಂಧಿಸಿದಂತೆ ಇದರ ವಸ್ತು ವಿಷಯದ ಆಯ್ಕೆಯಿಂದ ಹಿಡಿದು ಈ ಮಹಾಪ್ರಬಂಧದ ರಚನೆಯ ಅಂತಿಮ ಹಂತದವರೆಗೆ ತಮ್ಮ ಅತ್ಯಮೂಲ್ಯವಾದ ಸಮಯವನ್ನು ನನಗಾಗಿ ಮುಡುಪಾಗಿಸಿ ಕಾಲಕಾಲಕ್ಕೆ ನನ್ನನ್ನು ತಿದ್ದಿ ತಮ್ಮ ಅಮೂಲ್ಯ ಸಲಹೆ ಮತ್ತು ಸೂಚನೆಗಳನ್ನು ನೀಡುತ್ತಾ ಸರ್ವರೀತಿಯಲ್ಲೂ ಸಹಕರಿಸಿದ ನನ್ನ ಸಂಶೋಧನಾ ಮಾರ್ಗದರ್ಶಕರಾದ ಡಾ. ಪ್ರಿಯಾ ಠಾಕೂರ್, ಸಹಾಯಕ ಪ್ರಾಧ್ಯಾಪಕರು, ಇತಿಹಾಸ ಮತ್ತು ಪುರಾತತ್ವ ವಿಭಾಗ ಹಾಗೂ ಸಂಶೋಧನಾ ವಿಭಾಗ, ತುಮಕೂರು ವಿಶ್ವವಿದ್ಯಾಲಯ, ತುಮಕೂರು ಅವರಿಗೆ ನನ್ನ ತುಂಬು ಹೃದಯದ ಕೃತಜ್ಞತೆಗಳನ್ನು ಅರ್ಪಿಸುತ್ತಿದ್ದೇನೆ.

ನನ್ನ ಸಂಶೋಧನೆಗೆ ಸಹಕಾರ ನೀಡಿದ ತುಮಕೂರು ವಿಶ್ವವಿದ್ಯಾಲಯದ ಕುಲಪತಿಗಳು ಮತ್ತು ಕುಲಸಚಿವರಿಗೆ ಅನಂತ ನಮಸ್ಕಾರ ಹೇಳಲು ಬಯಸುತ್ತೇನೆ.

ಸಂಶೋಧನೆಯ ಅಧ್ಯಯನದ ಸಂದರ್ಭದಲ್ಲಿ ಸಹಕಾರ ನೀಡಿದ ಹಿರಿಯ ಪ್ರಾಧ್ಯಾಪಕರಾದ ಪ್ರೊ. ಯು.ಎಸ್.ಮೂರ್ತಿ, ಪ್ರೊ. ಎಲ್.ಪಿ. ರಾಜು, ಪ್ರೊ.ಎಂ. ಕೊಟ್ರೇಶ್, ಡಾ. ಚಿಕ್ಕಣ್ಣ ಮತ್ತು ಶ್ರೀನಿವಾಸ್ ಹಾಗೂ ಎಲ್ಲಾ ಬೋಧಕ ಮತ್ತು ಬೋಧಕೇತರ ವರ್ಗದವರನ್ನು ಸ್ಮರಿಸುವೆ.

ನನ್ನ ಪ್ರತೀ ಸಂಶೋಧನಾ ಕಾರ್ಯದಲ್ಲಿ ಯಶಸ್ಸು ಬಯಸುವ ಪ್ರೀತಿಯ ತಂದೆ ನಾಗರಾಜು ಮತ್ತು ತಾಯಿ ಭಾಗ್ಯಮ್ಮ ರವರಿಗೆ ನನ್ನ ಕೃತಜ್ಞತೆಗಳು. ಬದುಕಿನ ಪ್ರತೀ ಹೆಜ್ಜೆಯಲ್ಲೂ ನನಗೆ ತಪ್ಪನ್ನು ತಿದ್ದಿ ನನ್ನ ಭವಿಷ್ಯ ನೀಡಿದ ಅಣ್ಣ ವಿಶ್ವನಾಥ್ (ಪೋಲೀಸ್ ಸಬ್ ಇನ್ಸ್‌ಪೆಕ್ಟರ್) ಹಾಗೂ ನನ್ನ ತಮ್ಮನಾದ ಚಂದ್ರಶೇಖರ್ (ವಕೀಲರು) ಅನಂತ ಪ್ರಣಾಮಗಳು.

ನನಗೆ ಸಂಶೋಧನೆಯನ್ನು ಹೇಳಿಕೊಟ್ಟ ಮೊದಲ ಗುರು ಗಂಗರಾಜ್ ನಾಯ್ಕ್ ಸರ್ ರವರಿಗೆ ನನ್ನ ಪ್ರಣಾಮಗಳು, ಸಂಶೋಧನೆಯ ಸಂದರ್ಭದಲ್ಲಿ ನನಗೆ ಸಹಾಯ ಮಾಡಿದ ಹಿರಿಯ ಸಂಶೋಧಕರು ಡಾ. ಶಿವಕುಮಾರ್, ಡಾ. ಬಿ.ಆರ್. ಚಂದ್ರಶೇಖರಯ್ಯ, ಡಾ. ಕುಲಾಯಪ್ಪ ಹಾಗೂ ಸೈಯ್ಯದ್ ನಿಯಮದ್ ಪಾಷ ನನಗೆ ಸಂಶೋಧನೆಯ ಹಂತದಲ್ಲಿ ಸಹಾಯ ಮಾಡಿದ ಎಲ್ಲರಿಗೂ ನನ್ನ ನಮಸ್ಕಾರಗಳು.

ನನ್ನ ಸಂಶೋಧನೆಯ ಸಂದರ್ಭದಲ್ಲಿ ಕ್ಷೇತ್ರಕಾರ್ಯಕ್ಕೆ ಸಹಕಾರ ನೀಡಿದ ಛಾಯಾಗ್ರಾಹಕ ಪ್ರಕಾಶ್ ಜಿ. ಹಾಗೂ ಲಕ್ಷ್ಮೀನಾರಾಯಣ ಟಿ.ಎನ್ ಇವರಿಗೆ ನನ್ನ ನಮಸ್ಕಾರಗಳು.

ನನ್ನ ಸಂಶೋಧನಾ ಸಂದರ್ಭದಲ್ಲಿ ಮಾಹಿತಿಗಳನ್ನು ಕಲೆಹಾಕಲು ಹಾಗೂ ಒದಗಿಸಿಕೊಟ್ಟ ಎಲ್ಲಾ ಕರ್ನಾಟಕ ರಾಜ್ಯಪತ್ರಾಗಾರ ಇಲಾಖೆ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ತಾಲ್ಲೂಕು ಕಛೇರಿಗಳಿಗೆ ಹಾಗೂ ಗ್ರಂಥಾಲಯಗಳಿಗೆ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ನನ್ನ ಸಂಶೋಧನೆಯ ಮಹಾಪ್ರಬಂದಕ್ಕೆ ಡಿ.ಟಿ.ಪಿಯನ್ನು ಒದಗಿಸಿದ ಕಾವ್ಯ ಜಿ. ಸೋಮಸುಂದರ್‌ರವರು ಜವಾಬ್ದಾರಿಯನ್ನು ವಹಿಸಿಕೊಂಡು ಸರಿಯಾದ ಸಮಯದಲ್ಲಿ ಟೈಪಿಂಗ್ ಮಾಡಿ ಒದಗಿಸಿಕೊಟ್ಟಿರುತ್ತಾರೆ ಹಾಗೂ ಈ ಮಹಾಪ್ರಬಂಧವನ್ನು ಅಂದವಾಗಿ ಮುದ್ರಿಸಿಕೊಟ್ಟ ಮಹೇಶ್. ಕೆ ರವರಿಗೂ ನನ್ನ ತುಂಬು ಹೃದಯದ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

ಕೊನೆಯದಾಗಿ ನನ್ನ ಸಂಶೋಧನಾ ಕಾರ್ಯಕ್ಕೆ ಪ್ರೋತ್ಸಾಹ ನೀಡಿದ ನನ್ನ ಎಲ್ಲಾ ಸ್ನೇಹಿತರು ಹಾಗೂ ಸಂಶೋಧನಾರ್ಥಿಗಳು ಹಾಗೂ ಪ್ರತ್ಯೇಕವಾಗಿ ಪರೋಕ್ಷವಾಗಿ ಸಹಕರಿಸಿದ ಎಲ್ಲರಿಗೂ ನನ್ನ ತುಂಬು ಹೃದಯದ ಕೃತಜ್ಞತೆಗಳನ್ನು ಸಲ್ಲಿಸುತ್ತಿದ್ದೇನೆ.

ಸೂರ್ಯನಾರಾಯಣ. ಎನ್

# ಪರಿವಿಡಿ

# ಅಧ್ಯಾಯ – 1

## ಪೀಠಿಕೆ

### 1.1 ಪೀಠಿಕೆ

ಭೌಗೋಳಿಕ ಸಂವೃದ್ಧಿಯ ಸಹಕಾರದೊಂದಿಗೆ ಮಾನವನ ಸಾಮಾಜೀಕರಣವು ಜೊತೆಗೂಡಿ ನಾಗರೀಕತೆಯು ಆರಂಭವಾಯಿತು. ನಾಗರೀಕತೆಯು ಬೆಳೆದು ಬಂದಂತಹ ಹಾದಿಯು ಇತಿಹಾಸ ಕಟ್ಟುವಲ್ಲಿ ಪ್ರಧಾನ ಪಾತ್ರವಹಿಸಿವೆ. ಇಂದಿನ ಮಾನವನ ಭರಾಟೆಯ ಸಂಬಂಧ ಕಾಲಾನುಕ್ರಮಣಿಕೆಯ ಸನ್ನಿವೇಶವು ಪ್ರವಾಸವಾಗಿ ಬೆಳೆದಿದೆ. ಬಹುಮುಖ ಆಯಾಮವನ್ನು ಒಳಗೊಂಡಂತಹ ಇಂದಿನ ಆಸಕ್ತಿಗಳನ್ನು ಪೂರ್ಣಗೊಳಿಸಲು ಐತಿಹಾಸಿಕ ದಾಖಲೆಗಳು, ಸನ್ನಿವೇಶಗಳು ಪ್ರಸ್ತುತವಾಗಿವೆ. ಪ್ರಧಾನವಾದಂತಹ ಐತಿಹಾಸಿಕ ಸ್ಥಳಗಳು ಇಂದು ಆಕರ್ಷಣೀಯವಾಗಿ ಪ್ರವಾಸ ಮತ್ತು ಪ್ರವಾಸೋದ್ಯಮದ ಸ್ಪಷ್ಟತೆಯನ್ನು ಹೊಂದಿವೆ. ಹಲವು ಐತಿಹಾಸಿಕ ಸ್ಥಳಗಳು ಪ್ರವಾಸಿ ಉದ್ಯಮದ ಹೃದಯಕ್ಕೆ ಹತ್ತಿರವಾಗಿದೆ. ಇತಿಹಾಸ ಮತ್ತು ಪ್ರವಾಸೋದ್ಯಮವು ಒಂದಕ್ಕೊಂದು ಪರಸ್ಪರ ವೈಯಕ್ತಿಕ ಬೆಳವಣಿಗೆಗೆ ಪೂರಕವಾಗಿದೆ. ಪ್ರವಾಸವು ಇತಿಹಾಸದ ಅರ್ಧ ಭಾಗವಾಗಿದೆ. ಪ್ರಸ್ತುತ ಪ್ರವಾಸೋದ್ಯಮವು ವೈವಿಧ್ಯಮಯ ಕ್ಷೇತ್ರಗಳನ್ನು ಒಳಗೊಂಡಿದೆ.

ಆಧುನಿಕ ಮಾನವನು ತನ್ನ ಪೂರ್ವ ಆಲೋಚನೆಯಲ್ಲಿ ಬದಲಾವಣೆಯನ್ನು ಕಾಣುವ ಮೂಲಕ ಪ್ರವಾಸ ಸ್ಥಳಗಳು ಜಾಗತೀಕವಾಗಿ ಗಮನಿಸುವಂತಹದ್ದಾಗಿವೆ. ತಂತ್ರಜ್ಞಾನದ ಬೆಳವಣಿಗೆ, ಅಂದರೆ ಸಂಪರ್ಕವಾಗಿ ಸಂವಹನವು ಪ್ರವಾಸ ಉದ್ಯಮದ ಬೆಳವಣಿಗೆಯಲ್ಲಿ ಮಹತ್ವವಾಗಿವೆ[1]. ಪ್ರಪಂಚವು ಇಂದು ತನ್ನ ಆರ್ಥಿಕ ಆದಾಯ ಗಳಿಕೆಯಲ್ಲಿ ಪ್ರವಾಸೋದ್ಯಮವನ್ನು ಅವಲಂಬಿಸಿದೆ. ದೋಷಮುಕ್ತವಾದಂತಹ ಪ್ರವಾಸ ಉದ್ಯಮವು ಉದ್ಯೋಗ ನಿರ್ಮಾಣದಲ್ಲಿ ನಿರ್ವಹಿಸುವ ಪಾತ್ರ ಮಹತ್ವವಾಗಿದೆ.

"ಅನಾದಿಕಾಲದಿಂದಲೂ ಮಾನವರು ಪ್ರಾಮಾಣಿಕರಾಗಿದ್ದಾರೆ". ಇತಿಹಾಸ ಪೂರ್ವ ಕಾಲದಿಂದ ಅಲೆಮಾರಿಗಳಾಗಿ ಆಹಾರ ಮತ್ತು ಪ್ರಾಣಿಗಳ ಭೇಟೆಯನ್ನು ಹುಡುಕಲು ಭೂಮಿಯಮೇಲೆ ತಿರುಗಾಡಿದಾಗ ಚಲನೆಯನ್ನು ಮಾಡಿದ್ದಾನೆ[2]. ವಾಸದ ನೆಲೆಗಳ ಸ್ಥಾಪನೆಯ ನಂತರ ಕೃಷಿಯನ್ನು ಪ್ರಾರಂಭಿಸಿದಾಗಿಯೂ ಸಹ ವಿಜಯ, ಪರಿಶೋಧನೆ ಮತ್ತು ಸಾಹಸಕ್ಕಾಗಿ ಜನರು ಪ್ರಯಾಣ ಮುಂದುವರಿಸಿದರು. ಜ್ಞಾನವನ್ನು ತಿಳಿದುಕೊಳ್ಳುವ ಅನ್ವೇಷಣೆಗಾಗಿ, ಸಂಪತ್ತಿನ ನಿರೀಕ್ಷೆಯು ಪರಿಶೋಧನೆ ಮತ್ತು ಸಾಹಸವು ಪ್ರಯಾಣವನ್ನು ಉತ್ತೇಜಿಸಿತ್ತು. ಪ್ರಬಲ

ಆಡಳಿತಗಾರರು ವಿಜಯಕ್ಕಾಗಿ ತಮ್ಮ ಭೌಗೋಳಿಕ ಗಡಿಗಳನ್ನು ದಾಟಿದರು. ಧಾರ್ಮಿಕ ನಂಬಿಕೆಗಳು ಇತರೆ ಪ್ರವಾಸದ ಪರಿಹಾರದ ಮಾರ್ಗವಾಗಿತ್ತು, ಪವಿತ್ರ ಯಾತ್ರಾ ಸ್ಥಳಗಳು ಮತ್ತು ಆಧ್ಯಾತ್ಮಿಕ ಪ್ರಚೋದನೆಯಲ್ಲಿ ಮುಂದುವರೆಯಿತು. ಪವಿತ್ರ ಪುರುಷರು ಮತ್ತು ದಾರ್ಶನಿಕರು ಪ್ರತಿಕೂಲ ಪರಿಸ್ಥಿತಿಯಲ್ಲಿದ್ದರೂ ದೂರದ ಪ್ರಯಾಣದ ಅಪಾಯದಲ್ಲೂ ಸಹಕಾರವನ್ನು ಜ್ಞಾನ ಮತ್ತು ಪರಿಪೂರ್ಣತೆಗಾಗಿ ಹುಡುಕಿದರು.

ಪ್ರವಾಸೋದ್ಯಮವು ಮನರಂಜನೆಗಾಗಿ ಪ್ರಯಾಣವಾಗಿ, ವಿರಾಮದ ಅಥವಾ ವ್ಯವಹಾರದ ದೃಷ್ಟಿಕೋನದಲ್ಲಿ ಬೆಳೆದು ಬಂದಿದೆ. ಜಾಗತೀಕ ಮಟ್ಟದಲ್ಲಿ ಪ್ರವಾಸೋದ್ಯಮ ಎಂಬ ಪದವು 'ಪ್ರವಾಸಿ ತನ್ನ ಸ್ಥಳದಿಂದ ಹೊರಗಿನ ಪರಿಸರದಲ್ಲಿ 24 ಗಂಟೆಗಳಿಗೂ ಹೆಚ್ಚು ಸಮಯ ಮತ್ತೊಂದು ಸ್ಥಳದಲ್ಲಿ ತಂಗುವುದನ್ನು, ಪ್ರವಾಸ ಎನ್ನಲಾಗುತ್ತದೆ[3]. ಪ್ರವಾಸೋದ್ಯಮವು ಅತಿ ವೇಗವಾಗಿ ಬೆಳೆಯುತ್ತಿರುವ ಉದ್ಯಮವಾಗಿದ್ದು, ವಿಶ್ವ ಆರ್ಥಿಕತೆಯ ಮೇಲೆ ಪ್ರಭಾವಿತವಾಗಿದೆ. ಇತರೆ ಉದ್ಯಮಗಳು ಅಗತ್ಯಯುತವಾದ ಶಾಶ್ವತ ಆಸ್ತಿಯನ್ನು ಆದಾಯಗಳಿಕೆಯೊಂದಿಗೆ ಬೆಳೆದು ತಾನೆ ತಾನಾಗಿ ಬೆಳೆಯುವ ಮುಖಾಂತರ ಆದಾಯದ ಗಳಿಕೆಯು ಹೆಚ್ಚಾಗುತ್ತದೆ. ಪ್ರವಾಸೋದ್ಯಮವು ಉದ್ಯೋಗವನ್ನು ಕಲ್ಪಿಸುವ ಮುಖಾಂತರ ಅದೊಂದು ವೇಗವಾಗಿ ಬೆಳೆಯುತ್ತಿರುವ ಉದ್ಯಮವಾಗಿದೆ.

"ಪ್ರವಾಸೋದ್ಯಮದ ಮಹತ್ವವನ್ನು ಅರ್ಥೈಸಿದರೆ, ವ್ಯವಹಾರದ ಆರಂಭವು ದೂರ ಪ್ರಯಾಣವಾಗಿತ್ತು, ತೈಲ ಬಳಕೆಯು ಪ್ರವಾಸವನ್ನು ಒಂದು ಮಹತ್ವದ ಮಾರ್ಗಕ್ಕೆ ತೆಗೆದುಕೊಂಡು ಹೋಯಿತು. ಪ್ರವಾಸೋದ್ಯಮವು ಸಾಮಾಜಿಕ, ಆರ್ಥಿಕ ಪ್ರಕ್ರಿಯೆಯಲ್ಲಿ, ಸೃಜನಾತ್ಮಕ ಕೆಲಸದೊಂದಿಗೆ ಆದಾಯದ ಪ್ರಮಾಣವನ್ನು ಹೆಚ್ಚಿಸಿತು. ಕಳೆದ ಆರು ದಶಕಗಳಿಂದ ಜಾಗತಿಕ ಪ್ರವಾಸವು ಮಹತ್ವಯುತವಾದಂತಹ ಸ್ಥಾನಮಾನವನ್ನು ಸಾಧಿಸಿವೆ.

ಪ್ರಸ್ತುತ ಸಂಶೋಧನೆಯು **"ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪ್ರವಾಸೋದ್ಯಮ ಒಂದು ಐತಿಹಾಸಿಕ ಅಧ್ಯಯನ"** ಪ್ರಾಥಮಿಕ ತನಿಖೆಯ ಜೊತೆಗೆ ಪ್ರಸ್ತುತ ನೆಲೆಗಳಲ್ಲಿ ಐತಿಹಾಸಿಕ ಪ್ರವಾಸೋದ್ಯಮವನ್ನು ಅಧ್ಯಯನ ಮಾಡುವುದರ ಮೂಲಕ ಐತಿಹಾಸಿಕ ಪ್ರವಾಸಿ ಸ್ಥಳ ಮತ್ತು ಕಾರ್ಯಯೋಜಿತ, ಭವಿಷ್ಯ ನಿರ್ಧಾರಕಗಳನ್ನು ಒಳಗೊಂಡಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ನಗರದಿಂದಲೂ ಸುತ್ತುವರಿದಿದ್ದು ಒಂದು ನಗರ ವೃತ್ತದಂತೆ ಬೆಳೆಯುತ್ತಿದೆ. ಗ್ರಾಮಾಂತರ ಪ್ರದೇಶದ ಶ್ರೇಷ್ಠತೆಯು ಆಂತರಿಕ ಐತಿಹಾಸಿಕ ಪ್ರೇಕ್ಷಣಿಯ ಸ್ಥಳಗಳ ದೃಷ್ಟಿಕೋನದಲ್ಲಿ ಭವಿಷ್ಯ ನಿರ್ಧಾರಕಗಳು ಸಾಕ್ಷಿಯಾಗಿವೆ. ನಾಲ್ಕು

ತಾಲ್ಲೂಕುಗಳಾದ ನೆಲಮಂಗಲ, ದೊಡ್ಡಬಳ್ಳಾಪುರ, ದೇವನಹಳ್ಳಿ ಮತ್ತು ಹೊಸಕೋಟೆಗಳಂತಹ ತಾಲ್ಲೂಕುಗಳು ಪ್ರಧಾನವಾಗಿ ಭೌಗೋಳಿಕ ವಲಯವಾಗಿ ಪ್ರವಾಸೋದ್ಯಮ ಬೆಳವಣಿಗೆಗೆ ಪೂರಕವಾಗುವಂತಿದೆ. ಗ್ರಾಮಾಂತರ ಪ್ರದೇಶಗಳಲ್ಲಿ ಐತಿಹಾಸಿಕ ಸ್ಥಳಗಳನ್ನು ಗುರುತಿಸಿಕೊಂಡು ರಾಜ್ಯಕ್ಕೆ ಐತಿಹಾಸಿಕ ಪ್ರಾಮುಖ್ಯತೆಯನ್ನು ಪ್ರವಾಸೋದ್ಯಮದ ಮೂಲಕ ಕೊಡುಗೆ ನೀಡುವುದು.

## 1. 2 ಸಂಶೋಧನಾ ಸಮಸ್ಯೆ

ಪ್ರಸ್ತುತ ಅಧ್ಯಯನವು **"ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪ್ರವಾಸೋದ್ಯಮ ಒಂದು ಐತಿಹಾಸಿಕ ಅಧ್ಯಯನ"** ಪ್ರವಾಸೋದ್ಯಮ ಮತ್ತು ಐತಿಹಾಸಿಕ ಸ್ಥಳಗಳೊಂದಿಗೆ ಇರುವ ಸಂಬಂಧದ ತನಿಖೆಯನ್ನು ಪ್ರವಾಸ ಉದ್ಯಮದ ಬೆಳವಣಿಗೆ, ಜಿಲ್ಲೆಯ ಐತಿಹಾಸಿಕ ಪ್ರವಾಸಿ ತಾಣಗಳನ್ನು ವಿಶೇಷವಾಗಿಸುವುದು. ಸ್ಥಳೀಯ ಕಾರ್ಯಗಳೊಂದಿಗೆ ಪ್ರವಾಸಿ ಉದ್ಯಮ, ಅವಕಾಶಗಳು ನೈಜ ಕಾರ್ಯವಾಗಿದ್ದು ಪ್ರದೇಶವಾರು ಐತಿಹಾಸಿಕ ಪ್ರಾಂತ್ಯವನ್ನು ಬಳಸಿಕೊಂಡು ಬೆಳವಣಿಗೆಗೆ ಕಾರಣವಾಗಿದೆ.

## 1. 3 ಸಮಸ್ಯೆಯ ಉಗಮ

ಪ್ರಸ್ತುತ ಸಮಸ್ಯೆಯು ಸಾಮಾಜಿಕ ಸಮಸ್ಯೆಯಾಗಿದ್ದು, ಮನುಷ್ಯನ ಚಟುವಟಿಕೆಯಿಂದ ಇದು ಆರಂಭವಾಯಿತು. ಪ್ರಸ್ತುತ ಸಂಶೋಧನೆಯು ವ್ಯವಸ್ಥೆಯಲ್ಲಿ ಉತ್ತಮವಾದದನ್ನು ಸಕರಾತ್ಮಕ ಮತ್ತು ನಕಾರಾತ್ಮಕ ಸುಧಾರಣೆ ಮತ್ತು ಸಮಸ್ಯೆಯನ್ನು ಪ್ರಸ್ತಾಪಿಸಲಾಗಿ, ಕೆಲವು ಸಮಸ್ಯೆಯು ವ್ಯವಸ್ಥೆಯ ಒಳಗೆ ನಿಂತಿದ್ದು, ಕಾರ್ಯಯೋಜನೆಯು ತನಿಖಾ ದೃಷ್ಟಿಯಿಂದಾಗಿ ಸಮಸ್ಯೆ ಮತ್ತು ಅದರ ಪರಿಹಾರವನ್ನು ಗುರುತಿಸುವ ಮೂಲಕ ಸಮಸ್ಯೆಯನ್ನು ಬಗೆಹರಿಸಿದ್ದಾರೆ. ಪ್ರಸ್ತುತ ಸಂಶೋಧನೆಯು ವಿಶ್ಲೇಷಣಾತ್ಮಕ ದೃಷ್ಟಿಕೋನದಿಂದ ಅವಲೋಕಿಸಲಾಗಿದೆ.

## 1. 4 ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಸಂಶೋಧನ ಕಾರ್ಯವು ತಾತ್ಕಾಲಿಕವಾಗಿ ಮತ್ತು ಪರಿಕಲ್ಪನಾತ್ಮಕವಾಗಿ ಕೆಲವು ವ್ಯಾಪ್ತಿಯನ್ನು ಹೊಂದಿದೆ. ಇದೊಂದು ಆಲೋಚನಾತ್ಮಕವಾದಂತಹ ಐತಿಹಾಸಿಕ ಪ್ರವಾಸೋದ್ಯಮದ ವಿಮರ್ಶಾ ಗುರಿ, ಉದ್ದೇಶ ಮತ್ತು ಪ್ರಾಕಲ್ಪನೆಯನ್ನು ಸಾಧಿಸುವ ನಿಟ್ಟಿನಲ್ಲಿ ಪ್ರಧಾನವಾಗಿದೆ. ನಂತರದಲ್ಲಿ ಚಾರಿತ್ರಿಕ ಪ್ರಜ್ಞೆಯನ್ನು ಆಧುನಿಕತೆಯೊಂದಿಗೆ ಹೊರಹೊಮ್ಮುವ ಮೂಲಕ ಪ್ರವಾಸೋದ್ಯಮವು ಒಂದು ಉದ್ಯಮವಾಗಿ ವಿಸ್ತಾರವಾದಂತಹ ವ್ಯಾಪ್ತಿ ವೈವಿಧ್ಯಮಯ ಚಟುವಟಿಕಗಳು ಮತ್ತು ಅಭಿವೃದ್ಧಿ ಚಟುವಟಿಕೆಗಳಿಗೆ ಕಾರಣವಾಗಲಿದೆ.

ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವು ತನ್ನದೇ ಆದಂತಹ ಪ್ರಾಕಲ್ಪನಾತ್ಮಕವಾದ ಹಾಗೂ ನಿಶ್ಚಿತವಾದಂತಹ ವ್ಯಾಪ್ತಿ ವೈವಿಧ್ಯಮಯ ಚಟುವಟಿಕೆಗಳು ಮತ್ತು ಅಭಿವೃದ್ಧಿ ಚಟುವಟಿಕೆಗಳಿಗೆ ಕಾರಣವಾಗಲಿದೆ. ಅದಾಗ್ಯು ಈ ಅಧ್ಯಯನವು ತನ್ನದೇ ಆದಂತಹ ಪ್ರಾಕಲ್ಪನಾತ್ಮಕವಾದ ಹಾಗೂ ನಿಶ್ಚಿತವಾದಂತಹ ಉದ್ದೇಶಗಳ ವ್ಯಾಪ್ತಿಯನ್ನು ಸಾಧಿಸುತ್ತದೆ.

ಪ್ರಸ್ತುತ ಅಧ್ಯಯನವು ಸಂಶೋಧನಾ ಅಧ್ಯಯನವನ್ನು ಶ್ರೀಮಂತಿಕೆಯನ್ನು ಹೆಚ್ಚಿಸುವ ಮೂಲಕ ಸಮಸ್ಯೆಯ ಅಂತರವನ್ನು ಪೂರ್ಣಗೊಳಿಸುತ್ತದೆ.

## 1. 5 ಅಧ್ಯಯನದ ಸ್ವರೂಪ

ಬೆಂಗಳೂರು ಗ್ರಾಮಾಂತರ ಜಿಲ್ಲೆ ಐತಿಹಾಸಿಕ ಪ್ರಾಮುಖ್ಯತೆಯನ್ನು ಹೊಂದಿದೆ. ಶಿಲಾಯುಗದ ಕಾಲಘಟ್ಟದಿಂದ ಸ್ವಾತಂತ್ರಗಳಿಸುವವರೆಗೂ ಕರ್ನಾಟಕದ ಚರಿತ್ರೆಯಲ್ಲಿ ತನ್ನದೇ ಆದ ಪ್ರಾಮುಖ್ಯತೆಯನ್ನು ಹೊಂದಿದೆ. ಆದಿ ಮಧ್ಯ ಮತ್ತು ನೂತನ ಶಿಲಾಯುಗ ಕಾಲಕ್ಕೆ ಸೇರಿದ ರಾಜ್ಯ ಮತ್ತು ರಾಷ್ಟ್ರೀಯ ಪ್ರಖ್ಯಾತಿಯನ್ನು ಪಡೆದಿರುವ ಹಲವು ತಾಣಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆ ವಿವಿಧ ಭಾಗಗಳಲ್ಲಿ ಕಾಣಬಹುದಾಗಿದೆ. ಇತಿಹಾಸ ಆರಂಭ ಕಾಲದಿಂದ ಅಂದರೆ ಬೆಂಗಳೂರು ಗ್ರಾಮಾಂತರ ಜಿಲ್ಲೆ ಪ್ರಾಚೀನ ಮಧ್ಯಕಾಲೀನ ಮತ್ತು ಆಧುನಿಕ ಕಾಲಘಟ್ಟಗಳಲ್ಲಿ ವಿವಿಧ ರಾಜಮನೆತನಗಳು, ಪಾಳೆಯಗಾರರು ಆಡಳಿತ ನಡೆಸಿವೆ.

ಈ ಅವಧಿಯ ಹಲವು ರಾಜಮನೆತನಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ರಾಜಕೀಯ, ಸಾಂಸ್ಕೃತಿಕ, ಐತಿಹಾಸಿಕ, ಧಾರ್ಮಿಕ, ಸಾಮಾಜಿಕ ಆರ್ಥಿಕ ಮತ್ತು ಶೈಕ್ಷಣಿಕ ಕ್ಷೇತ್ರಗಳಿಗೆ ತಮ್ಮ ಮಹತ್ವದ ಕೊಡುಗೆಯನ್ನು ಸಲ್ಲಿಸಿವೆ. ಈ ಮೂಲಕ ಜಿಲ್ಲೆಯು ಎಲ್ಲಾ ರಂಗಗಳಲ್ಲಿಯೂ ಸಂಪನ್ನವಾಗಲು ಕಾರಣ ಭೂತವಾಗಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪ್ರವಾಸೋದ್ಯಮದ ಬೆಳವಣಿಗೆಯನ್ನು ಕಾಣಬಹುದು.

ಪ್ರವಾಸೋದ್ಯಮದಲ್ಲಿನ ಪ್ರವಾಸ ಎಂಬ ಪದದ ಉತ್ಪತ್ತಿ ಅದರ ಬೆಳವಣಿಗೆ ಅರ್ಥ, ವಿವರಣೆ ಬಗ್ಗೆ ಚರ್ಚಿಸಲಾಗಿದೆ. ಪ್ರವಾಸೋದ್ಯಮವನ್ನು ಕುರಿತು ವಿವಿಧ ಚರಿತ್ರೆಗಾರರು ಮತ್ತು ಪ್ರವಾಸೋದ್ಯಮ ತಜ್ಞರು ಹಾಗೂ ಪ್ರವಾಸೋದ್ಯಮ ಸಂಘಟನೆಗಳು ನೀಡಿರುವ ವ್ಯಾಖ್ಯಾನಗಳನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ. ಪ್ರವಾಸವು ಹೇಗೆ ಒಂದು ಉದ್ಯಮದ ಸ್ವರೂಪವನ್ನು ಹೊಂದಿತು ಎಂಬುದರ ಬಗ್ಗೆ ತಿಳಿಸಲಾಗಿದೆ.

## 1. 6 ಪ್ರಾಕಲ್ಪನೆಗಳು

ಪ್ರಸ್ತುತ ಅಧ್ಯಯನವು ಕೆಳಕಂಡಂತಹ ಪ್ರಾಕಲ್ಪನೆಯನ್ನು ಹೊಂದಿವೆ.

- ಐತಿಹಾಸಿಕ ನೆಲೆಗಳು ಪ್ರವಾಸೋದ್ಯಮವನ್ನು ಆಕರ್ಷಣೆಗೊಳಿಸುವಲ್ಲಿ ಪ್ರಧಾನ ಪಾತ್ರವಹಿಸುವುದನ್ನು ಗಮನಿಸಬಹುದಾಗಿದೆ.
- ಪ್ರವಾಸೋದ್ಯಮವು ಮೂಲಭೂತ ಸೌಕರ್ಯಗಳನ್ನು ಬೆಳವಣಿಗೆಗೊಳಿಸುವುದನ್ನು ಅಧ್ಯಯನ ಮಾಡಲಾಗುತ್ತದೆ.
- ಕೌಶಲ್ಯಭರಿತ ಹಾಗೂ ಕೌಶಲ್ಯರಹಿತ ಕಾರ್ಮಿಕರಿಗೆ ಉದ್ಯೋಗ ನೀಡುವಲ್ಲಿ ಪ್ರಧಾನ ಪಾತ್ರವಹಿಸುತ್ತದೆ.

## 1. 7 ಸಂಶೋಧನಾ ವಿಧಾನಗಳು

ಈ ಸಂಶೊಧನಾ ಅಧ್ಯಯನವು, ದತ್ತಾಂಶಗಳ ಸಂಗ್ರಹಣೆ ಜೊತೆಗೆ ಪ್ರಾಥಮಿಕ ಮತ್ತು ದ್ವಿತೀಯ ಆಕರಗಳನ್ನು ಒಳಗೊಂಡಿದೆ.

1. **ಕ್ಷೇತ್ರ ಕಾರ್ಯ** – ನನ್ನ ಸಂಶೋಧನಾ ಸಮಯದಲ್ಲಿ ಐತಿಹಾಸಿಕ ಸ್ಥಳಗಳಿಗೆ ಭೇಟಿ ನೀಡಿ ಹಲವಾರು ದಾಖಲೆಗಳನ್ನು ಪರಿಶೀಲಿಸಿ ಸಂಶೋಧನಾ ಕ್ಷೇತ್ರ ಕಾರ್ಯಗಳನ್ನು ಸಂಪೂರ್ಣಗೊಳಿಸಿದ್ದೇನೆ.

**1.1 ಸ್ಥಳದ ಭೇಟಿ** – ಸಂಶೋಧನಾ ಅವಧಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಐತಿಹಾಸಿಕ ಪ್ರವಾಸೋಧ್ಯಮದ ಸ್ಥಳಕ್ಕೆ ಬೇಟಿ ನೀಡಿ ಈ ಮಹಾ ಪ್ರಬಂಧಕ್ಕೆ ಬೇಕಾಗಿರುವ ಆಕರಗಳನ್ನು ಸಂಗ್ರಹಿಸಿದ್ದೇನೆ.

**1.2 ಛಾಯಾಚಿತ್ರ** – ಐತಿಹಾಸಿಕ ಸ್ಥಳಗಳಿಗೆ ಬೇಟಿ ನೀಡಿ ಸಂಗ್ರಹಿಸಿರುವ ದಾಖಲೆಗಳು ಮತ್ತು ಛಾಯಾಚಿತ್ರಗಳ ಆಧಾರದ ಮೇಲೆ ಈ ಮಹಾ ಪ್ರಬಂಧವನ್ನು ರಚಿಸಿದ್ದೇನೆ.

**1.3 ಸಂದರ್ಶನಗಳು** – ಸಂಶೋಧನಾ ಕಾರ್ಯದಲ್ಲಿ ತೊಡಗಿದ್ದಾಗ ಹಲವಾರು ತಜ್ಞರು ಮತ್ತು ಸ್ಥಳೀಯರನ್ನು ಸಂದರ್ಶಿಸಿ ಈ ಮಹಾ ಪ್ರಬಂಧಕ್ಕೆ ಉಪಯುಕ್ತವಾಗುವಂತಹ ಅಂಶಗಳು ಹಾಗೂ ಮಾಹಿತಿಯನ್ನು ಪಡೆದಿರುತ್ತೇನೆ.

2. **ಗ್ರಂಥಾಲಯಗಳ ಭೇಟಿ** – ಸಂಶೋಧನಾ ಅವಧಿಯಲ್ಲಿ ಈ ಮಹಾ ಪ್ರಬಂಧಕ್ಕೆ ಬೇಕಾಗಿರುವ ಪ್ರಾಥಮಿಕ ಮತ್ತು ದ್ವಿತೀಯ ಆಕರಗಳನ್ನು ಗ್ರಂಥಾಲಯಗಳಿಗೆ ಭೇಟಿ ನೀಡುವುದರ ಮುಖಾಂತರ ಮಾಹಿತಿಯನ್ನು ಪಡೆದುಕೊಂಡಿರುತ್ತೇನೆ.

**ಕೊಷ್ಟಕ : 1 ಭೇಟಿ ನೀಡಿರುವ ಗ್ರಂಥಾಲಯಗಳ ವಿವರ**

| ಕ್ರ. ಸಂ | ಗ್ರಂಥಾಲಯಗಳ ಹೆಸರು | ಸ್ಥಳ |
|---|---|---|
| 1. | ಕರ್ನಾಟಕ ರಾಜ್ಯ ಪತ್ರಗಾರ ಇಲಾಖೆ | ವಿಧಾನಸೌಧ, ಬೆಂಗಳೂರು. |
| 2. | ಬೆಂಗಳೂರು ಕೇಂದ್ರ ಗ್ರಂಥಾಲಯ | ಬೆಂಗಳೂರು. |
| 3. | ದಿ ಮಿಥಿಕ್ ಸೊಸೈಟಿ | ಬೆಂಗಳೂರು. |
| 4. | ಮೈಸೂರು ವಿಶ್ವವಿದ್ಯಾಲಯ ಗ್ರಂಥಾಲಯ | ಮೈಸೂರು. |
| 5. | ಬೆಂಗಳೂರು ವಿಶ್ವವಿದ್ಯಾಲಯ ಗ್ರಂಥಾಲಯ | ಜ್ಞಾನಭಾರತಿ ಆವರಣ, ಬೆಂಗಳೂರು |
| 6. | ಕರ್ನಾಟಕ ಪ್ರವಾಸೋದ್ಯಮ ಇಲಾಖೆ | ಬೆಂಗಳೂರು |
| 7. | ತುಮಕೂರು ಜಿಲ್ಲಾ ಗ್ರಂಥಾಲಯ | ತುಮಕೂರು |
| 8. | ಭಾರತೀಯ ಐತಿಹಾಸಿಕ ಸಂಶೋಧನಾ ಕೇಂದ್ರ | ಬೆಂಗಳೂರು |
| | **ತಾಲ್ಲೂಕು ಗ್ರಂಥಾಲಯಗಳ ಪಟ್ಟಿ** | |
| 1. | ನೆಲಮಂಗಲ ತಾಲ್ಲೂಕು ಗ್ರಂಥಾಲಯ | ನೆಲಮಂಗಲ ತಾಲ್ಲೂಕು |
| 2. | ನೆಲಮಂಗಲ ತಾಲ್ಲೂಕು ಕಛೇರಿ | ನೆಲಮಂಗಲ ತಾಲ್ಲೂಕು |
| 3. | ದೇವನಹಳ್ಳಿ ತಾಲ್ಲೂಕು ಗ್ರಂಥಾಲಯ | ದೇವನಹಳ್ಳಿ ತಾಲ್ಲೂಕು |
| 4. | ಹೊಸಕೋಟೆ ತಾಲ್ಲೂಕು ಗ್ರಂಥಾಲಯ | ಹೊಸಕೋಟೆ ತಾಲ್ಲೂಕು |
| 5. | ದೊಡ್ಡಬಳ್ಳಾಪುರ ತಾಲ್ಲೂಕು ಗ್ರಂಥಾಲಯ | ದೊಡ್ಡಬಳ್ಳಾಪು ತಾಲ್ಲೂಕು |

**3. ವಿದ್ಯುನ್ಮಾನ ಆಕರಗಳು :**

http://www.canodtourism.com

www.whc.unesco.org

www.aulia-3-hind.com/dargh/nandi

http://www.gdrs.org/uem/eco-tour/etour-define

www.incredibieindia.org

www.mapsofindia.com

http://www.unep.org

www.world-tourism.org

www.rrtd.nic.in/tourism

www.incredibleindia.com

## 1. 8 ಅಧ್ಯಯನದ ಉದ್ದೇಶಗಳು

ಸಂಶೋಧನಾ ಅಧ್ಯಯನ ದೃಷ್ಟಿಯಿಂದಾಗಿ ಈ ಸಂಶೋಧನೆಯು ಈ ಕೆಳಕಂಡಂತಹ ಉದೇಶಗಳನ್ನು ಹೊಂದಿದೆ.

- ಐತಿಹಾಸಿಕ ಮತ್ತು ಭೌಗೋಳಿಕ ನೈಜತೆಯೊಂದಿಗೆ ಐತಿಹಾಸಿಕ ಪ್ರವಾಸೋದ್ಯಮದ ಬೆಳವಣಿಗೆಯ ಸಂಬಂಧ ಪಾತ್ರವಹಿಸುವುದು.
- ಸಂಶೋಧನ ನೆಲಗಟ್ಟಿನಲ್ಲಿ ಐತಿಹಾಸಿಕ ಸ್ಥಳಗಳ ಬೆಳವಣಿಗೆಯೊಂದಿಗೆ ಪ್ರವಾಸೋದ್ಯಮದ ವಿಶ್ಲೇಷಣೆ ಮಾಡುವುದು.
- ಪ್ರವಾಸಿ ಸ್ಥಳಗಳ ಪಟ್ಟಿ ತಯಾರಿಕೆ ಹಾಗೂ ಅವುಗಳ ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಪ್ರವಾಸೋದ್ಯಮದ ಗಮನ.
- ಐತಿಹಾಸಿಕ ಪ್ರವಾಸೋದ್ಯಮವನ್ನು ಬೆಳೆಸುವಲ್ಲಿ ಸಂಶೊಧನೆಯ ಮೂಲಕ ಅದರ ಇತರ ಮೂಲಗಳು ಅವುಗಳ ಪಾತ್ರ.
- ಪ್ರವಾಸೋದ್ಯಮ ಮತ್ತು ಐತಿಹಾಸಿಕ ಸ್ಥಳಗಳೊಂದಿಗೆ ಸಂಬಂಧವನ್ನು ಪುನರ್ ಸ್ಥಾಪಿಸುವುದು.
- ಅಧ್ಯಯನದ ವ್ಯಾಪ್ತಿಯಲ್ಲಿ ಐತಿಹಾಸಿಕ ಪ್ರವಾಸೋದ್ಯಮದ ಬೆಳವಣಿಗೆ, ಅದರ ಇತರೆ ದೃಷ್ಟಿಕೋನದಲ್ಲಿ ಮೌಲ್ಯಮಾಪನ ಮಾಡುವುದು.
- ಸಮಾಜ–ಆರ್ಥಿಕತೆಯನ್ನು ಅರ್ಥೈಸಿಕೊಳ್ಳುವ ಅಧ್ಯಯನದ ಮುಖಾಂತರ ಪ್ರವಾಸವನ್ನು ಸುಧಾರಿಸುವುದು.

- ಕೌಶಲ್ಯ ಹೊಂದಿದ ಮತ್ತು ಕೌಶಲ್ಯ ಹೊಂದಿಲ್ಲದವರಿಗೆ ಉದ್ಯೋಗ ಒದಗಿಸುವಲ್ಲಿ ಪ್ರವಾಸೋದ್ಯಮದ ಪಾತ್ರ ಸಂಬಂಧಿಸಿದ ವಿಶ್ಲೇಷಣೆ.

## 1. 9 ಅಧ್ಯಯನದ ಮಹತ್ವ

ಪ್ರಸ್ತುತ ಅಧ್ಯಯನವು, ಸಾಂಸ್ಥಿಕ ಗುರಿಗಳೊಂದಿಗೆ, ಸಾಮಾಜಿಕ ಉಪಯೋಗದಿಂದ ಮುಕ್ತವಾಗಿದೆ. ಸಮಾಜ ಮತ್ತು ಆರ್ಥಿಕ ಉತ್ತಮವಾದಂತಹ ಅಧ್ಯಯನವಾಗಿದೆ. ವರ್ತಮಾನ ಮತ್ತು ಭವಿಷ್ಯ ಕಾಲದ ಹಿನ್ನೆಲೆಯಲ್ಲಿ ಉತ್ತಮವಾದ್ದದನ್ನು ಅರ್ಥೈಸಿಕೊಳ್ಳುವ ಮೂಲಕ ಪ್ರವಾಸದ ಉದ್ಯಮವನ್ನು ಅಭಿವೃದ್ದಿಗೊಳಿಸುವುದು. ಮೂಲಭೂತ ಸೌಲಭ್ಯಗಳು, ಯೋಜಿತ ನೀತಿಯ ಮೂಲಕ ಪ್ರವಾಸೋದ್ಯಮದ ಚಲನಾತ್ಮಕತೆಗೊಳಿಸುವುದು. ಪ್ರಸ್ತುತ ಅಧ್ಯಯನವು ಮೌಲ್ಯಮಾಪನ ಮತ್ತು ಕಾರ್ಯಯೋಜನೆ ಅಧ್ಯಯನದ ವ್ಯಾಪ್ತಿಗೆ ಒಳಪಟ್ಟಿದೆ. ಐತಿಹಾಸಿಕ ಸ್ಥಳಗಳ ನವೀನ ಸಂಪರ್ಕವನ್ನು ಪುನಃ ಕಟ್ಟುವ ಮೂಲಕ ಜಿಲ್ಲೆಯ ಜನರಲ್ಲಿ ಪ್ರವಾಸದ ಮಹತ್ವವನ್ನು ತಿಳಿಸುವುದು.ಇತಿಹಾಸ ಮತ್ತು ಐತಿಹಾಸಿಕ ಪ್ರವಾಸೋದ್ಯಮದ ನಡುವೆ ಸಾಹಿತ್ಯವು ಅಥವಾ ಬರವಣಿಗೆಯು ಸಂಪರ್ಕ ಕೊಂಡಿಯಾಗಿದೆ. ಸಂಶೋಧನೆಯಲ್ಲಿ ಹೊರಬಂದಂತಹ ವಿಚಾರವು ಸ್ಫೂರ್ತಿದಾಯಕವಾಗಿದು ತನ್ನ ಅಧ್ಯಯನದ ಕ್ಷೇತ್ರದಲ್ಲಿ ಪ್ರೌಢಯುತವಾದ ಸಾಹಿತ್ಯ ಆಕರಗಳು ಮತ್ತು ಕ್ಷೇತ್ರಕಾರ್ಯವು ಬೆಳವಣಿಗೆದಾಯಕವಾಗಿದೆ.

## 1. 10 ಭೌಗೋಳಿಕ ಲಕ್ಷಣಗಳು

ಮನುಷ್ಯ ಮೂಲತಃ ಅಲೆಮಾರಿ ಪ್ರಾಣಿ, ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಚಲಿಸುವುದು ಮನುಷ್ಯನ ಅಂತರ್ಗತ ಪಾತ್ರ ಕಾಲದಿಂದ ಇಂದಿನವರೆಗೆ ಮನುಷ್ಯನು ಒಂದು ಸ್ಥಳದಿಂದ ಇನ್ನೊಂದಕ್ಕೆ ಹೋಗಲು ವಿಭಿನ್ನ ಉದ್ದೇಶಗಳನ್ನು ಹೊಂದಿದ್ದನು ಮನರಂಜನೆಗಾಗಿ ಮನುಷ್ಯನ ಚಲನೆ ಮನುಷ್ಯನ ನಾಗರಿಕತಯಷ್ಟೆ ಹಳೆಯದು. ಪ್ರಪಂಚದ ಇತಿಹಾಸ ಮತ್ತು ಐತಿಹಾಸಿಕ ತಾಣಗಳು ಶತಮಾನಗಳಿದ ಪ್ರಮುಖ ಸ್ಥಾನಗಳನ್ನು ಆಕರ್ಷಿಸುವಲ್ಲಿ ಯಾವಾಗಲೂ ತಮ್ಮ ಪಾತ್ರವನ್ನು ನಿರ್ವಹಿಸುತ್ತವೆ.

ಸಾರಿಗೆ ಮತ್ತು ಸಂವಹನ ಸಾಧನಗಳ ಸುಧಾರಿತ ವಿಧಾನಗಳು ಪ್ರವಾಸೋದ್ಯಮ ಕ್ಷೇತ್ರದಲ್ಲಿ ಕ್ರಾಂತಿಗೆ ಕಾರಣವಾಗಿವೆ. ಇತಿಹಾಸ ಮತ್ತು ಪ್ರವಾಸೋದ್ಯಮದ ನಡುವಿನ ಸಂಬಂಧವನ್ನು ಯಾವಾಗಲೂ ಪ್ರಶಂಸಿಸಲಾಗಿದೆ. ಪ್ರವಾಸೋದ್ಯಮ ಮತ್ತು ಐತಿಹಾಸಿಕ ಸ್ಥಳಗಳು

ಎರಡೂ ಸಮಯಕ್ಕೆ ಬೆಳೆದು ಪ್ರತ್ಯೇಕ ಘಟಕವಾಗಿ ಅಭಿವೃದ್ಧಿ ಹೊಂದಿದವು, ಇಂದು ಇದನ್ನು ಹೊಗೆರಹಿತ ಉದ್ಯಮ ಎಂದು ಕರೆಯಲಾಗುತ್ತದೆ. ಪ್ರವಾಸೋದ್ಯಮ ಮತ್ತು ಇತಿಹಾಸವು ಪೂರಕ ಕೈಗಾರಿಕೆಗಳ ಅಭಿವೃದ್ಧಿಗೆ ಮತ್ತಷ್ಟು ಆಧಾರವಾಗಿದೆ. ಇದೆ ವಿಶ್ವದಾದ್ಯಂತ ಸಾವಿರಾರು ಜನರ ಜೀವನೋಪಾಯವನ್ನು ಪೂರೈಸಲು ಕಾರಣವಾಗುತ್ತದೆ.

ಪ್ರಸ್ತುತ ಅಧ್ಯಯನವು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಐತಿಹಾಸಿಕ ಪ್ರವಾಸೋದ್ಯಮದೊಂದಿಗೆ ವ್ಯವಹರಿಸುತ್ತದೆ. ಜಿಲ್ಲೆಯ ವಿವಿಧ ಅಂಶಗಳನ್ನು ಐತಿಹಾಸಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಕ್ರಿಯಾತ್ಮಕಗೊಳಿಸುತ್ತದೆ. ಜಿಲ್ಲೆಯ ಐತಿಹಾಸಿಕ ದೇವಾಲಯಗಳು ಮತ್ತು ಪ್ರಾಚೀನ ಕೋಟೆಗಳ ಮೂಲಕ ಕಲೆ ಮತ್ತು ಸಂಸ್ಕೃತಿಯ ದೃಷ್ಟಿಯಿಂದ ವ್ಯಾಪಕವಾದ ಸಾಂಸ್ಕೃತಿಕ ವೈವಿಧ್ಯತೆಯನ್ನು ಚಿತ್ರಿಸುತ್ತದೆ. ಪ್ರಸ್ತುತ ಅಧ್ಯಯನದ ಅಡಿಯಲ್ಲಿರುವ ನಾಲ್ಕು ತಾಲ್ಲೂಕುಗಳು ಐತಿಹಾಸಿಕ ಸನ್ನಿವೇಶದ ವಿಭಿನ್ನ ಹಿನ್ನಲೆಗಳಿಂದ ಬಂದವು. ಪ್ರಸ್ತುತ ಸಂಶೋಧನಾ ಕಾರ್ಯವು ಪ್ರವಾಸೋದ್ಯಮ ತಾಣಗಳು ಮತ್ತು ಸಂಬಂಧಿತ ಸನ್ನಿವೇಶನಗಳ ಮಾರ್ಗಗಳನ್ನು ಗುರುತಿಸುವ ಮೂಲಕ ಜಿಲ್ಲೆಯ ಅಭಿವೃದ್ದಿಯ ವ್ಯಾಪ್ತಿಯನ್ನು ತಿಳಿಸುತ್ತದೆ. ಜಿಲ್ಲೆಯು ಐತಿಹಾಸಿಕ ತಾಣಗಳಿಂದ ಕೂಡಿದೆ. ಪ್ರವಾಸೋದ್ಯಮ ಕ್ಷೇತ್ರದಲ್ಲಿ ಶ್ರೇಷ್ಟತೆಯನ್ನು ತರಲು ಸಾಕಷ್ಟು ಸಾಧ್ಯವಿದೆ.

**ಸ್ಥಳ**

ಬೆಂಗಳೂರು ಗ್ರಾಮಾಂತರ ಜಿಲ್ಲೆ ದಕ್ಷಿಣ ಕರ್ನಾಟಕ ಮಟ್ಟದ ಒಂದು ಭಾಗವಾಗಿದ್ದು, ಇದು ಕರ್ನಾಟಕ ರಾಜ್ಯದ ಆಗ್ನೇಯ ಮೂಲೆಯಲ್ಲಿದೆ. ಇದು ಉತ್ತರದಿಂದ ದಕ್ಷಿಣಕ್ಕೆ 69.53 ಕಿ.ಮೀ. ಮತ್ತು ಪೂರ್ವದಿಂದ ಪಶ್ಚಿಮಕ್ಕೆ 84.82 ಕಿ.ಮೀ. ವ್ಯಾಪ್ತಿಯನ್ನು ಹೊಂದಿದೆ[4]. ಇದು ಒಟ್ಟು ಭೌಗೋಳಿಕ ಪ್ರದೇಶವನ್ನು 229 ಚ.ಕಿ.ಮೀ. ಎತ್ತರದ ಮತ್ತು ಕಡಿಮೆ ಶ್ರೇಣಿಯ ಪ್ರದೇಶದ ಅತ್ಯಂತ ಸ್ಪಷ್ಟವಾದ ವಲಯಗಳು ಸರಾಸರಿ ಸಾಗರಮಟ್ಟಕ್ಕಿಂತ ಪ್ರತ್ಯೇಕವಾಗಿ 755 ಮತ್ತು 1386 ಮೀಟರ್ ಆಕಾರ ರೇಖೆಗಳಲ್ಲಿವೆ. ಈ ಪ್ರದೇಶವು $12^0$ ಮತ್ತು $13^0$ –30ನ ಉತ್ತರ ಅಕ್ಷಾಂಶ ಮತ್ತು $77^0$ 10 ಮತ್ತು $77^0$–58 ನ ಪೂರ್ವ ರೇಖಾಂಶಗಳ ನಡುವೆ ಇದೆ[5]. ಈ ಜಿಲ್ಲೆಯ ಉತ್ತರಕ್ಕೆ ತುಮಕೂರು ಮತ್ತು ಚಿಕ್ಕಬಳ್ಳಾಪುರ, ದಕ್ಷಿಣಕ್ಕೆ ರಾಮನಗರ, ಮಂಡ್ಯ ಜಿಲ್ಲೆ, ಪೂರ್ವದಲ್ಲಿ ಬೆಂಗಳೂರು ನಗರ ಜಿಲ್ಲೆ, ಕೋಲಾರ ಜಿಲ್ಲೆ ಮತ್ತು ಸ್ವಲ್ಪ ವಿಸ್ತಾರಕ್ಕೆ ತಮಿಳುನಾಡು ರಾಜ್ಯ ಮತ್ತು ಪಶ್ಚಿಮದಲ್ಲಿ ರಾಮನಗರ ಜಿಲ್ಲೆ, ತುಮಕೂರು, ಹಾಸನ ಜಿಲ್ಲೆಯಿಂದ ಆವೃತವಾಗಿದೆ.

## ಭೌಗೋಳಿಕ ಅಂಶಗಳು

ಭೌಗೋಳಿಕವಾಗಿ ಕರ್ನಾಟಕ ರಾಜ್ಯವನ್ನು ಭಾರತ ಒಕ್ಕೂಟದ ಸಮಗ್ರ ಜಿಲ್ಲೆ, ದಕ್ಷಿಣ ಪ್ರಸ್ಥಭೂಮಿ ಮತ್ತು ಹೊಲಗಳು ಮತ್ತು ದ್ವೀಪಗಳಿಂದ ಬೀಚ್ ಸುತ್ತಲೂ ರಚಿಸಲಾಗಿದೆ. ಜಿಲ್ಲೆಯ ಭೌಗೋಳಿಕ ಗುಣಲಕ್ಷಣಗಳನ್ನು ಪರಿಗಣಿಸಿ ರಾಜ್ಯವನ್ನು 4 ಸೂಕ್ಷ್ಮ ಪ್ರದೇಶಗಳಾಗಿ ವಿಭಜಿಸಲಾಗಿದೆ. ಸೂಕ್ಷ್ಮ ಪ್ರದೇಶಗಳು ಉತ್ತರ ಕರ್ನಾಟಕ ಪ್ರಸ್ಥಭೂಮಿ, ದಕ್ಷಿಣ ಕರ್ನಾಟಕ ಪ್ರಸ್ಥಭೂಮಿ ಮತ್ತು ಕರ್ನಾಟಕ ಕರಾವಳಿ, ಬೆಂಗಳೂರು ಪ್ರದೇಶವು ಕರ್ನಾಟಕ ರಾಜ್ಯದ ದಕ್ಷಿಣ–ಪೂರ್ವ ಮೂಲೆಯ ಒಂದು ಭಾಗವಾಗಿದೆ. ಸರಾಸರಿ ಸಾಗರ ಮಟ್ಟದಿಂದ 600 ರಿಂದ 900 ಮಿಟರ್ ಎತ್ತರವಿರುವ ಈ ಪ್ರದೇಶವು ಪೂರ್ವ ಘಟ್ಟಗಳ ಸ್ಪರ್ಸ್ ಆಗಿದೆ[7], ಉತ್ತರಕ್ಕೆ ಮುಡಾವಾಡಿ ಬೆಟ್ಟ, ಬಿಲಿಕಲ್ ಬೆಟ್ಟ ಮತ್ತು ಮುಂತಾದ ಮೇಲ್ಭಾಗಗಳನ್ನು ಹೊಂದಿದೆ.

ಶಿವಗಂಗಾ ಮೇಲ್ಭಾಗವು ಇಳಿಜಾರು ಶ್ರೇಣಿಗಳು ಮತ್ತೊಂದು ಸಾಲಿನದಾಗಿದ್ದು, ನಂದಿ ಇಳಿಜಾರುಗಳವರಗೆ ಹರಡಿ, ಬೆಂಗಳೂರು ಗ್ರಾಮಾಂತರ ಮತ್ತು ಬೆಂಗಳೂರು (ನಗರ) ಜಿಲ್ಲೆಯ ಮೇಲೆ ಹರಿಡಿದೆ[8]. ಜಿಲ್ಲೆಯ ಸ್ಥಳ, ನಗರ ಒಟ್ಟುಗೂಡಿಸುವಿಕೆ ಹತ್ತಿರದಲ್ಲಿರುವುದರಿಂದ ನೈಸರ್ಗಿಕ ವ್ಯವಸ್ಥೆಯನ್ನು ಜಿಲ್ಲೆಯಲ್ಲಿ ಸಂಪೂರ್ಣವಾಗಿ ಮಾರ್ಪಡಿಸಲಾಗಿದೆ. ನಗರೀಕರಣದ ಪ್ರಭಾವ, ನಗರ ಅತಿಕ್ರಮಣ ಎಲ್ಲೆಡೆ ಇದೆ. ಆನಂದ ಮನೋಭಾವವನ್ನು ಕಾಸ್ಮೋಪಾಲಿಟೈಸೇಶನ್ ಮಾಡಲಾಗಿದೆ ಮಾತ್ರವಲ್ಲದೆ ಜೀವನದ ಸಂಪೂರ್ಣ ಪರಿಣಾಮ ಬೀರಿದೆ. ಪ್ರಸ್ತುತ ಅಧ್ಯಯನವು ಸಮಗ್ರ ಅಧ್ಯಯನವನ್ನು ಮಾಡಲು ಈ ಎಲ್ಲಾ ರೂಪಾಂತರಗಳನ್ನು ತೆಗೆದುಕೊಳ್ಳುತ್ತದೆ.

## ಹವಾಮಾನ

ಈ ಪ್ರದೇಶದ ವಾತಾವರಣದ ಸಲೂಬ್ರಿಯಸ್ ಮತ್ತು ಅಸಾಧಾರಣವಾದದ್ದು ಇದನ್ನು ನಾಲ್ಕು ಪ್ರಾಥಮಿಕ ವಲಯಗಳೊಂದಿಗೆ ನಿಯಮಿತವಾಗಿ ಒಣ ಉಷ್ಣವಲಯದ ಸವನ್ನಾ ವಾತಾವರಣ ಎಂದು ಹೆಸರಿಸಲಾಗಿದೆ. ಸಾಮಾನ್ಯವಾಗಿ ಏಪ್ರಿಲ್ ಅತ್ಯಂತ ಬೇಸಿಗೆ ಮತ್ತು ಡಿಸೆಂಬರ್ ಅತ್ಯಂತ ಶೀತ ತಿಂಗಳು, ಚಳಿಯ, ಬಿಸಿ ವಾತಾವರಣದ ಮಧ್ಯದಲ್ಲಿ ಸರಾಸರಿ ತಿಂಗಳಿನಿಂದ ತಾಪಾಮಾನವು ವಿಸ್ಮಯಕಾರಿಯಾಗಿ ಸ್ಥಿರವಾಗಿರುತ್ತದೆ. ಅತ್ಯಂತ ವಿಪರೀತ ತಾಪಮಾನವು ಏಪ್ರಿಲ್ – ಮೇ ಮಧ್ಯಯದಲ್ಲಿ $33.60^0$ ಗೆ ಏರುತ್ತದೆ ಮತ್ತು ಡಿಸೆಂಬರ್ ಜನವರಿಯ ಮಧ್ಯೆ ಕನಿಷ್ಟ ತಾಪಮಾನ $15^0$ ಆಗಿರುತ್ತದೆ[9].

ಈ ಪ್ರದೇಶದ ವಾತಾವರನದ ಬಗ್ಗೆ ಪ್ರಾಥಮಿಕ ಅಂಶಗಳು ತಾಪಮಾನದ ವ್ಯಾಪ್ತಿ ಮತ್ತು ಜೂನ್‌ನಿಂದ ಸೆಪ್ಟೆಂಬರ್ ಮತ್ತು ಅಕ್ಟೋಬರ್ ನಿಂದ ನವೆಂಬರ್ ವರೆಗೆ ಎರಡು ಮಳೆಗಾಲಗಳು ವಿರುದ್ಧ ಗಾಳಿ ಪ್ರಭುತ್ವಗಳನ್ನು ಹೊಂದಿವೆ. ಬಂಗಾಳಕೊಲ್ಲಿಯಲ್ಲಿ ಖಿನ್ನತೆಯು ಹೆಚ್ಚುವರಿಯಾಗಿ ಈ ಪ್ರದೇಶದಲ್ಲಿ ಪ್ರತಿಫಲಿಸುತ್ತದೆ. ಪ್ರದೇಶದ ವಾತಾವರಣ ಮೇಲೆ ಪ್ರಭಾವ ಬಿರುವ ಮತ್ತೊಂದು ಸಾಮಾನ್ಯವಾಗಿ ಹವಾಮಾನ ಅದ್ಭುತಗಳು ಏಪ್ರಿಲ್–ಮೇ ಮತ್ತು ಸೆಪ್ಟೆಂಬರ್–ಅಕ್ಟೋಬರ್ ಮತ್ತು ಮುಂಜಾನೆ ಮಿಸ್ಟರ್ ಮಂಜುಗಳಲ್ಲಿನ ಗುಡುಗು ಮತ್ತು ಸಂಬಂಧಿತ ಕಾಮನಬಿಲ್ಲು[10].

ಪ್ರಸ್ತುತ ಅಧ್ಯಯನವು ಜಿಲ್ಲೆಯ ಪ್ರವಾಸೋದ್ಯಮದ ಅಭಿವೃದ್ಧಿಗೆ ಅನುಕೂಲಕರ ಅಂಶವಾಗಿ ಹಿತಕರವಾದ ಹವಾಮಾನ ಪರಿಸ್ಥಿತಿಗಳನ್ನು ಗಣನೆಗೆ ತೆಗೆದುಕೊಳ್ಳುತ್ತದೆ. ಜಿಲ್ಲೆಯ ಪ್ರಸ್ಥಭೂಮಿ ಪ್ರದೇಶದಲ್ಲಿರುವುದರಿಂದ ಆಕರ್ಷಕ ಹವಾಮಾನವನ್ನು ಹೊಂದಿರುವುದು ಸಹಜ. ಯಾವಾಗಲೂ ಪ್ರವಾಸೋದ್ಯಮವು ಉತ್ತಮ ಹವಾಮಾನ ಪರಿಸ್ಥಿತಿಗಳೊಂದಿಗೆ ಸಂಪರ್ಕ ಹೊಂದಿದೆ. ಈ ನಿಟ್ಟಿನಲ್ಲಿ ಬೆಂಗಳೂರು ಗ್ರಾಮೀಣ ಜಿಲ್ಲೆ ಸಾಕಷ್ಟು ಅನುಕೂಲವಾಗಿದೆ.

**ಮಳೆ**

ಬೆಂಗಳೂರು ಗ್ರಾಮೀಣ ಜಿಲ್ಲೆಯನ್ನು ಶುಷ್ಕ ವಲಯದ ಅಡಿಯಲ್ಲಿ ವಿಂಗಡಿಸಲಾಗಿದೆ ಮತ್ತು ಈ ವಲಯವು ಮಿಶ್ರ ಬೆಳೆಗೆ ಸೂಕ್ತವಾಗಿದೆ. ಖರೀಫ್ ಬೆಳೆ ಇದ್ದಂತೆ ಕೊರೆಯಲಾಗುತ್ತಿದೆ. ಈ ಪ್ರದೇಶವು ರಾಜ್ಯದ ಪೂರ್ವ ಒಣ ಕೃಷಿ ಹವಾಮಾನ ವಲಯಗಳ ಅಡಿಯಲ್ಲಿ ಬರುತ್ತದೆ. ಈ ಪ್ರದೇಶದ ಸಾಮಾನ್ಯ ಮಳೆಯು ದೇವನಹಳ್ಳಿ ತಾಲ್ಲೂಕಿನಲ್ಲಿ 802[11] ಮೀ.ಮೀ ನಿಂದ ನೆಲಮಂಗಲ ತಾಲ್ಲೂಕಿನಲ್ಲಿ 977 ಮಿ.ಮಿ ಈ ಪ್ರದೇಶದ ತಾಲ್ಲೂಕುಗಳಲ್ಲಿ ಮಾನ್ಸೂನ್ ಪೂರ್ವದ ಮಳೆಯು ವಾರ್ಷಿಕ ಮಳೆಯ 18 ರಿಂದ 20 ಪ್ರತಿಶತದಷ್ಟು ನೈರುತ್ಯ ಮಾನ್ಸೂನ್ 52 ರಿಂದ 55 ಎಫ್ ಮತ್ತು ಈಶಾನ್ಯ ಮಾನ್ಸೂನ್ ವಾರ್ಷಿಕ ಮಳೆಯ 26 ರಿಂದ 31 ಪ್ರತಿಶತದಷ್ಟು ಕೊಡುಗೆ ನೀಡುತ್ತದೆ[12]. ಮುಂಗಾರು ಪೂರ್ವ ಋತುವಿನಲ್ಲಿ ವೆರೈಟಿಯ ಗುಣಾಂಕವು 42 ರಿಂದ 51 ಪ್ರತಿ ಶತದವರೆಗೆ ಇರುತ್ತದೆ. ದೇವನಹಳ್ಳಿ ತಾಲ್ಲೂಕಿನಲ್ಲಿ ಮಳೆ ಅನುಭವಗಳ ಹೆಚ್ಚಿನ ವ್ಯತ್ಯಾಸ.

**ಸಸ್ಯವರ್ಗ**

ಜಿಲ್ಲೆಯ ಒಟ್ಟು ಅರಣ್ಯ ಪ್ರದೇಶ 11,322 ಹೆಕ್ಟೇರ್, ಮರಗಳು ಮತ್ತು ಹೆಡ್ಜಸ್ ವಿಶೇಷವಾಗಿ ಪ್ರತಿಮೆಗಳ ನಡುವಿನ ಕಮರಿಗಳಲ್ಲಿ ಹೇರಳವಾಗಿದೆ. ಸ್ಕ್ರಬ್ ಕಾಡುಗಳು ವಿಜನಿಬೆಟ್ಟದ ಸುತ್ತಲೂ ಮತ್ತು ದೊಡ್ಡಬಳ್ಳಾಪುರ ಮತ್ತು ನೆಲಮಂಗಲ ತಾಲ್ಲೂಕು ಪಶ್ಚಿಮ

ಗಡಿಯಲ್ಲೂ ಕಂಡುಬರುತ್ತದೆ[13]. ಈ ಪ್ರದೇಶದ ಮರದ ದಿಮ್ಮಿಗಳು ವಿಶೇಷವಾಗಿ ಮಧ್ಯ ಮತ್ತು ಪಶ್ಚಿಮ ಘಟ್ಟ ಪ್ರಮುಖವಾದ ಶ್ರೀಗಂಧವನ್ನು ಹೊಂದಿರುತ್ತವೆ. ಆದರೆ ಹೇರಳವಾಗಿ ಅನೇಕ ಸಂಖ್ಯೆಯಲ್ಲಿ ಉರುಪಲು ಮತ್ತು ಬಿದರಿನಂತೆ ಉಪಯುಕ್ತವಾದ ಕಡಿಮೆ ಕ್ರಮದ ಮರಗಳು ಬಹುತೇಕ ಎಲ್ಲಾ ಅರಣ್ಯ ಪ್ರದೇಶಗಳಲ್ಲಿ ಕಂಡುಬರುತ್ತವೆ. ಇದರ ಜೊತೆಯಲ್ಲಿ ಈ ತೋಟಗಳನ್ನು ಬೆಳೆಸಲು ಹೆಚ್ಚು ಲಾಭದಾಯಕ ಬಳಕೆಗಾಗಿ ಕೃಷಿ ವ್ಯವಹಾರವನ್ನು ವ್ಯಾಪಾರ ಮಾಡುವ ರೈತರು ಅಭಿವೃದ್ಧಿಪಡಿಸಿದ ಕ್ಯಾಸು ಅರಿನಾಗಳು ಮತ್ತು ನೀಲಗಿರಿ ಎಸ್ಟೇಟ್‌ಗಳಿವೆ.

ಈ ಮರಗಳು ಅಭಿವೃದ್ಧಿ ತಜ್ಞರಿಂದ ಅಗತ್ಯವಿರುವ ಧ್ರುವಗಳನ್ನು ನೀಡುತ್ತವೆ ಮತ್ತು ಇನ್ನಷ್ಟು ಅದ್ಭುತವಾದ ವಿನಂತಿಯಲ್ಲಿರುವ ಕಿಂಡಲಿಂಗ್ ಅನ್ನು ನೀಡುತ್ತವೆ. ಜಿಲ್ಲೆಯ ರಾಜ್ಯ ಕಾಡುಗಳಲ್ಲಿ ಸುಮಾರು 50% ನಷ್ಟು ನಾಶವಾಗಿದೆ. ಅಲ್ಲದೆ, ಕೃಷಿಗೆ ಸೂಕ್ತವಲ್ಲದ ಆದಾಯ ತ್ಯಾಜ್ಯ ಭೂಮಿಯನ್ನು ಅರಣ್ಯ ಗಡೀಪಾರು ಮಾಡಲು ವರ್ಗಾಯಿಸಲಾಗಿದ್ದು ಇದು ಹೆಚ್ಚಾಗಿ ಮರರಹಿತವಾಗಿರುತ್ತದೆ. ಈ ಶ್ರೇಣಿಗಳ ಅರಣ್ಯೀಕರಣವನ್ನು ದೊಡ್ಡ ಪ್ರಮಾಣದಲ್ಲಿ ಕೈಗೆತ್ತುಕೊಳ್ಳಲಾಗಿದೆ.

## ನದಿಗಳು ಮತ್ತು ಇತರೆ ವೈಶಿಷ್ಟ್ಯಗಳು

ಬೆಂಗಳೂರು ಗ್ರಾಮೀಣ ಜಿಲ್ಲೆಯ ಪ್ರಮುಖ ಭಾಗ ಅರ್ಕಾವತಿ ಕಣಿಯಲ್ಲಿದೆ. ಅರ್ಕಾವತಿ, ದಿ ಕನ್ಯಾ ಮತ್ತು ದಕ್ಷಿಣ ಪಿನಾಕಿನಿ (ದಕ್ಷಿಣ ಪೆನ್ನಾರ್) ಜಿಲ್ಲೆಯಿಂದ ಉತ್ತರದಿಂದ ದಕ್ಷಿಣಕ್ಕೆ ಸಾಮಾನ್ಯ ದಿಕ್ಕಿನಲ್ಲಿ ಹರಿಯುವ ನದಿಗಳಾಗಿವೆ[14]. ಒಂದು ರೀತಿಯ ಸಾಂಸ್ಕೃತಿಕ ಚೌಕಟ್ಟಿನ ಕೆಲಸವು ಭಾರತೀಯ ಸಾಂಸ್ಕೃತಿಕ ಪರಂಪರೆಯ ಸಮೃದ್ಧಿಯನ್ನು ಹೆಚ್ಚಿಸಿದೆ.

## ಸಾಗುವಳಿ ಪ್ರದೇಶ

ಜಿಲ್ಲೆಯಲ್ಲಿ ಬೆಳೆಯುವ ಪ್ರಮುಖ ಬೆಳೆಗಳು ರಾಗಿ, ಭತ್ತ ಮತ್ತು ಮೆಕ್ಕೆಜೋಳ ಅವುಗಳಲ್ಲಿ ರಾಗಿ ಜಿಲ್ಲೆಯಲ್ಲಿ 41,755 ಹೆಕ್ಟೇರ್ ಭೂಮಿಯನ್ನು ಆಕ್ರಮಿಸಿಕೊಂಡಿರುವ ಒಂದು ಪ್ರಮುಖ ಮಳೆಯಾಶ್ರಿತ ಬೆಳೆಯಾಗಿದ್ದು[15], ನಂತರ ಮೆಕ್ಕೆ ಜೋಳವು 10,9355 ಹೆಕ್ಟೇರ್ ಭೂಮಿಯನ್ನು ಆಕ್ರಮಿಸಿಕೊಂಡಿದೆ. ರಾಗಿ ಕೃಷಿಗಾಗಿ ನೀರಾವರಿ ಪರಿಸ್ಥಿತಿಗಳಲ್ಲಿ ಪ್ರತಿ ಹೆಕ್ಟೇರ್‌ಗೆ ಇಳುವರಿ 3,370 ಕೆ.ಜಿ ಮತ್ತು ನೀರಾವರಿ ಪರಿಸ್ಥಿತಿಯಲ್ಲಿ ಇದು 2,307 ಕೆ.ಜಿ ಜಿಲ್ಲೆಯಲ್ಲಿ ಬೆಳೆಯುವ ಮುಂದಿನ ಪ್ರಮುಖ ಬೆಳೆ ಭತ್ತ, ಒಟ್ಟು ಹೆಕ್ಟೇರ್‌ಗೆ 6,805 ಕೆ.ಜಿ ಇಳುವರಿ[16] ಬರುತ್ತದೆ.

## ನೈಸರ್ಗಿಕ ಸಂಪತ್ತು

ಜಿಲ್ಲೆಯಲ್ಲಿ ಕಂಡುಬರುವ ಪ್ರಮುಖ ಖನಿಜಗಳೆಂದರೆ ಫೈರ್‌ಲ್ ಕಾಯೋಲಿನ್, ಫೆಲ್ಡ್ಸ್ಪಾರ್, ಕೋನಂಡ್ರಮ್, ಸ್ಪಟಿಕ ಶಿಲೆ, ಅಲಂಕಾರಿಕ ಮತ್ತು ಕಟ್ಟಡದ ಕಲ್ಲುಗಳು, ಚೀನಾ ಕ್ಲೇನ ನಿಕ್ಷೇಪಗಳು ನೆಲಮಂಗಲ ದೊಡ್ಡಬಳ್ಳಾಪುರ ಮತ್ತು ಹೊಸಕೋಟೆ ತಾಲ್ಲೂಕುಗಳಲ್ಲಿ ಕಂಡುಬರುತ್ತದೆ[17]. ಜಿಲ್ಲೆಯಲ್ಲಿ ಸ್ಪಟಿಕ ಶಿಲೆಗಳು ಡೊಡ್ಡಬಳ್ಳಾಪುರ ಬಳಿಯ ಗುಡ್ಡಗಾಡು ಮತ್ತು ನೆಲಮಂಗಲ ತಾಲ್ಲೂಕಿನ ದೊಂಬರಹಳ್ಳಿಗಳಲ್ಲಿ ಕಂಡುಬರುತ್ತದೆ. ಇದಲ್ಲದೆ ಜಿಲ್ಲೆಯ ಕೆಲವು ಭಾಗಗಳಲ್ಲಿ ರಾಕ್ ಹರಳುಗಳು ಸಹ ಕಂಡು ಬರುತ್ತದೆ.

## ಮಣ್ಣುಗಳು ಮತ್ತು ಮೈದಾನಗಳು

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ವಿವಿಧ ಬಗೆಯ ಮಣ್ಣುಗಳನ್ನು ಕಾಣಬಹುದಾಗಿದೆ. ಹಲವು ಪ್ರಕಾರದ ಮಣ್ಣು ಮೈದಾನಗಳಲ್ಲಿ, ಗುಡ್ಡಗಳಲ್ಲಿ, ಬೆಟ್ಟಗಳಲ್ಲಿ, ಕಣಿವೆಗಳಲ್ಲಿ ಮತ್ತು ಕೆರೆಗಳ ಭಾಗಗಳಲ್ಲಿ ಕಾಣಬರುತ್ತವೆ. ಕೆಂಪು ಮಣ್ಣು ಜಿಲ್ಲೆಯಲ್ಲಿ ಅತ್ಯಂತ ಹೆಚ್ಚು ಕಾಣಸಿಗುವಂತಹದಾಗಿದೆ.[18] ಜಿಲ್ಲೆಯ ಮಧ್ಯ, ಉತ್ತರ ಮತ್ತು ದಕ್ಷಿಣ  ಭಾಗಗಳಲ್ಲಿ ಕೆಂಪು ಮಣ್ಣು ಹರಡಿಕೊಂಡಿದೆ. ಈಬಗೆಯ ಮಣ್ಣನ್ನು ಪ್ರವಾಸಿಗರು ನೋಡಬಹುದಾಗಿದೆ. ಬೇಸಿಗೆ ಕಾಲದಲ್ಲಿ ಮತ್ತು ಚಳಿಗಾಲದಲ್ಲಿ ಇಂತಹ ಮಣ್ಣಿನ ಪ್ರದೇಶವನ್ನು ನೋಡಲು ಸೂಕ್ತವಾಗಿರುತ್ತದೆ. ಕೆಂಪು ಮಣ್ಣು ಮುಖ್ಯವಾಗಿ ದೊಡ್ಡಬಳ್ಳಾಪುರ, ದೇವನಹಳ್ಳಿ ತಾಲ್ಲೂಕುಗಳಲ್ಲಿ ನೋಡಬಹುದಾಗಿದೆ. ಈ ಭಾಗದ ರೈತರು ಹಸಿರು ತರಕಾರಿಗಳನ್ನು ಮತ್ತು ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಿದ್ದು ಹಸಿರು ತೋಟಗಳಿಂದ ಕಂಗೊಳಿಸಲು ಕಾರಣರಾಗಿದ್ದಾರೆ.

ತನ್ನ ಮೂಲಕವಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿನ ಕೆಂಪು ಮಣ್ಣಿನ ಪ್ರದೇಶವು ಪ್ರವಾಸಿಗರು ವೀಕ್ಷಣೆ ಮಾಡುವಂತಹದಾಗಿದ್ದು ಬೇಸಿಗೆಯ ಸಂಧರ್ಭದಲ್ಲಿ ಕೆಂಪು ಮಣ್ಣಿನಿಂದ ಕೂಡಿರುವ ಬೆಟ್ಟಗಳನ್ನು ನೋಡಿದರೆ ವಜ್ರದಂತೆ ಹೊಳೆಯುತ್ತದೆ ಮತ್ತು ಮಳೆಗಾಲದಲಿ ಬೆಟ್ಟಗಳನ್ನು ಬಣ್ಣದಿಂದ ಸಿಂಪಡಿಸುವ ರೀತಿಯಲ್ಲಿ ಕಂಗೊಳಿಸುತ್ತದೆ ಪ್ರವಾಸಿಗರು ಮನಸ್ಸಿಗೆ ಸಂತೋಷವನ್ನು ಪಡೆಯಬಹುದು.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ನೋಡಬಹುದಾದ ಹಲವಾರು ಬಗೆಯ ಮಣ್ಣಿನ ಪ್ರದೇಶಗಳು  ಈ ಜಿಲ್ಲೆಯಲ್ಲಿ ರಾಗಿ ಹೊಲಗಳಿಗೆ ಪ್ರಖ್ಯಾತವಾಗಿರುವ ಪ್ರದೇಶಗಳಲ್ಲಿ ಈ ಬಗೆಯ ಮಣ್ಣು ಹರಡಿಕೊಂಡಿದೆ. ದೊಡ್ಡಬಳ್ಳಾಪುರ, ದೇವನಹಳ್ಳಿ, ನೆಲಮಂಗಲ ತಾಲ್ಲೂಕುಗಳ ಪ್ರದೇಶದಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಉರುವಲು ಸಸ್ಯಗಳು ಮತ್ತು ಕೃಷಿಗೆ ಯೋಗ್ಯವಾದ

ಪ್ರದೇಶವಾಗಿದ್ದು, ಈ ಭಾಗದಲ್ಲಿರುವ ಕೆಂಪು ಮಣ್ಣಿನೊಂದಿಗೆ ಮಳೆಗಾಲ ಸಂದರ್ಭದಲ್ಲಿ ಹೊಲಗದ್ದೆಗಳನ್ನು ಪ್ರವಾಸಿಗರು ಹಸಿರಿನಿಂದ ನೋಡಬಹುದಾಗಿದೆ. ಹಲವು ವಾಣಿಜ್ಯ ಬೆಳೆಗಳನ್ನು ರೈತರು ಈ ಭಾಗದಲ್ಲಿ ಬೆಳೆಯುತ್ತಿದ್ದು ಪ್ರವಾಸಿಗರನ್ನು ಆಕರ್ಷಿಸುವಂತಿವ. ಅಲ್ಲದೇ ಜಿಲ್ಲೆಯ ದೊಡ್ಡಬಳ್ಳಾಪುರ ವಿಶಿಷ್ಟವಾದ ಲ್ಯಾಟರೇಟ್ ಮಣ್ಣುನ್ನು ನೋಡಬಹುದಾಗಿದೆ.

ಈ ಬಗೆಯ ಮಣ್ಣು ದೊಡ್ಡಬಳ್ಳಾಪುರ ತಾಲ್ಲೂಕು ಹೊರತುಪಡಿಸಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಇತರ ತಾಲ್ಲೂಕುಗಳಲ್ಲಿ ಕಂಡುಬರುವುದು. ಇವುಗಳಲ್ಲದೇ ಜಿಲ್ಲೆಯ ಕೆಲವು ಪ್ರದೇಶಗಳಲ್ಲಿ ಸುದ್ದೇ ಮಣ್ಣನ್ನು ಸಹ ಕಾಣಬಹುದಾಗಿದೆ. ಜೇಡಿ ಮಣ್ಣು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ ತಾಲ್ಲೂಕಿನಲ್ಲಿ ನೋಡಬಹುದಾಗಿದೆ. ನೆಲಮಂಗಲ ಹೆಂಚು ಮತ್ತು ಇಟ್ಟಿಗೆ ಉತ್ಪಾದನೆಗೆ ಪ್ರಖ್ಯಾತಿಯನ್ನು ಪಡೆಯಲು ಈ ಮಣ್ಣು ಕಾರಣವಾಗಿದೆ. ಬ್ರಿಟೀಷರ ಕಾಲದಲ್ಲಿ ಈ ಬಗೆಯ ಮಣ್ಣಿನ ಬಳಿಕೆ ಅಧಿಕವಾಗಿತ್ತು.[19] ಈ ಬಗೆಯ ಮಣ್ಣುಗಳನ್ನು ಹೊಂದಿರುವ ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಪ್ರವಾಸಿಗರನ್ನು ಆಕರ್ಷಣೆ ಮಾಡುವಂತಹ ಮತ್ತು ನೋಡಬಹುದಾದ ಪ್ರದೇಶವಾಗಿದೆ. ಜಿಲ್ಲೆಯಲ್ಲಿ ಚಿನ್ನದ ಶಿಲಾರೂಪಗಳು, ತಾಮ್ರ, ಗ್ರಾನೈಟ್, ಕಪ್ಪು ಶಿಲೆಗಳ ಪ್ರದೇಶಗಳನ್ನು ನೋಡಬುದಾಗಿದೆ. ಅಲಂಕರಣ ಮತ್ತು ಕಟ್ಟಡ ಶಿಲೆಗಳು, ಪದರು ಶಿಲೆಗಳನ್ನು ನೋಡಬಹುದಾಗಿದೆ.[20]

## ಮರಳು ಪ್ರದೇಶ

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿನ ನದಿಗಳು ಹರಿಯುವ ಕಣಿವೆಗಳಲ್ಲಿ ಮರಳು ರಾಶಿಗಳನ್ನು ಉಂಟುಮಾಡಿವೆ. ಹಲವಾರು ಶತಮಾನಗಳಿಂದ ಮಳೆಗಾಲದ ಸಮಯದಲ್ಲಿ ಜಿಲ್ಲೆಯ ಹಲವು ನದಿಗಳು ತುಂಬಿ ಹರಿಯುತ್ತಿದ್ದವು.[21]

ಬೇಸಿಗೆ ಕಾಲದಲ್ಲಿ ಮರಳಿನ ರಾಶಿಯು ಸೂರ್ಯನ ಕಿರಣಗಳಿಂದ ಪ್ರಜ್ವಲಿಸುತ್ತದೆ. ಈ ಸಮಯದಲ್ಲಿ ಜಿಲ್ಲೆಯ ಮರಳು ರಾಶಿಗಳು ಶಾಲಾ ಮಕ್ಕಳನ್ನು ಒಳಗೊಂಡಂತೆ ಹೆಚ್ಚು ಪ್ರವಾಸಿಗರನ್ನು ಆಕರ್ಷಣೆ ಮಾಡುತ್ತವೆ. ಮರಳು ಪ್ರದೇಶದಲ್ಲಿರುವ ಮರಗಳಲ್ಲಿ ವಿವಿಧ ಬಗೆಯ ಆಟಗಳನ್ನು ಆಡುತ್ತಾರೆ. ಅಷ್ಟೇ ಅಲ್ಲದೇ ಬೇರೆ ಬೇರೆ ಪ್ರದೇಶಗಳಿಂದ ವಿನೋದವನ್ನು ಉಂಟುಮಾಡುವ ಕ್ರೀಡೆಗಳನ್ನು ಆಡಲು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಮರಳು ತುಂಬಿರುವ ಕಾಲುವೆಗಳು ಸೂಕ್ತವಾದ ಸ್ಥಳಗಳಾಗಿರುತ್ತವೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಮರಳಿನಿಂದ ಸರ್ಕಾರಕ್ಕೆ ಆದಾಯ ಬರುತ್ತಿತ್ತು ನಂತರ ದಿನಗಳಲ್ಲಿ ಅಂತರ್ಜಲ ಕುಸಿತಗೊಂಡಿದ್ದ ಕಾರಣ ಸರ್ಕಾರದ ಆದೇಶದ ಮೇರೆಗೆ ನದಿಗಳಲ್ಲಿ, ಕಾಲುವೆಗಳಲ್ಲಿ ತೊರೆಗಳಲ್ಲಿ ಮತ್ತು ಕೆರೆಗಳಲ್ಲಿ ಮರಳು ತೆಗೆಯಲು ನಿಲ್ಲಿಸಲಾಯಿತು ಇದರಿಂದ ಮೊದಲು ಆರ್ಥಿಕವಾಗಿ ಲಾಭವನ್ನು ಪಡೆದುಕೊಂಡಿತ್ತು.

## ಮರಗಳು

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಅರಣ್ಯ ಮತ್ತು ಇತರ ಪ್ರದೇಶಗಳಲ್ಲಿ ಹಲವು ಬಗೆಯ ಮರಗಳು ಕಂಡು ಬರುತ್ತವೆ. ನೂರಾರು ವರ್ಷಗಳ ಹಳೆಯದಾದ ಮರಗಳನ್ನು ಸಹ ಜಿಲ್ಲೆಯಲ್ಲಿ ಕಾಣಬಹುದಾಗಿದೆ. ಕೆಲವು ಮರಗಳು ಧಾರ್ಮಿಕ ಪ್ರಾಮುಖ್ಯತೆಯನ್ನು ಪಡೆದುಕೊಂಡಿದ್ದು ಹೆಚ್ಚಿನ ಸಂಖ್ಯೆಯಲ್ಲಿ ಪ್ರವಸಿಗರನ್ನು ತನ್ನೆಡೆಗೆ ಸೆಳೆಯುತ್ತಿವೆ.[22] ಇವುಗಳೊಂದಿಗೆ ಇತರ ಮರಗಳಿದ್ದು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪರಿಸರ ಪ್ರವಾಸೋದ್ಯಮಕ್ಕೆ ಮಹತ್ವದ ಕೊಡುಗೆಯನ್ನು ನೀಡುತ್ತಿವೆ. ಜಿಲ್ಲೆಯಲ್ಲಿನ ಮಣ್ಣು ಎತ್ತರದ ಮರಗಳು ಬೆಳೆಯಲು ಅವಕಾಶವನ್ನು ನೀಡಿಲ್ಲ. ಇಲ್ಲಿನ ಮಣ್ಣು ಹಲವು ಪ್ರದೇಶದಲ್ಲಿ ಬೆಣಚು ಕಲ್ಲುಗಳಿಂದ ಕೂಡಿದ್ದು ಕುರುಚಲು ಸಸ್ಯಗಳು ಮತ್ತು ಗಟ್ಟಿಯಾದ ಜಾಲಿ ಮರಗಳೊಂದಿಗೆ ಇತರ ಬಗೆಯ ಮರಗಳು ಬೆಳೆಯಲು ಸಹಾಯಕಾರಿಯಾಗಿದೆ.

ಈ ಜಿಲ್ಲೆಯ ನದಿಗಳು ಉಗಮವಾಗುವ ಸ್ಥಳಗಳು, ಬೆಟ್ಟಗಳು, ಅರಣ್ಯ ಪ್ರದೇಶ, ರಸ್ತೆಗಳು ಮತ್ತು ಕೆರೆಗಳ ಅಂಗಳ ಪ್ರದೇಶದಲ್ಲಿ ಹೆಚ್ಚು ಮರಗಳನ್ನು ಪ್ರವಾಸಿಗರು ನೋಡಬಹುದಾಗಿದೆ. ಹುಣಸೆ, ದೇವದಾರು, ಕರಿ ಮತ್ತು ಬಿಳಿ ಜಾಲಿ, ಶ್ರೀಗಂಧ, ಹೊಂಗೆ, ಬಿದಿರು, ನೀಲಗಿರಿ, ಸಿಲ್ವರ್‌ಹೋಕ್, ಬನ್ನಿ ಮರ, ಚುಜ್ಜುಲು,  ಸರ್ವೆ ಮರ, ಕಗ್ಗಳ್ಳಿ, ಬಾಗಿ, ಬೇವಿನ ಮರ, ಅಶೋಕ, ತೇಗ, ಅಡಿಕೆ, ತೆಂಗಿನ ಮರ, ಅಶ್ವತ್ಥ ಮತ್ತು ಆಲದ ಮರಗಳನ್ನು ಹೆಚ್ಚು ಕಾಣಬಹುದಾಗಿದೆ.[1]

ನೇರಳೆ ಮರಗಳು, ದಾಳಿಂಬೆ ಗಿಡ, ಮಾವಿನ ಮರ, ಬೋರೆ ಮರ, ಪರಂಗಿ ಗಿಡ, ಹಿಪ್ಪು ನೇರಳೆ, ಈಚಲು ಮರ, ತಾಟಿ ಮರ, ಬೂರಗ ಮರಗಳೂ ಸಹ ಹೆಚ್ಚಾಗಿ ಜಿಲ್ಲೆಯಲ್ಲಿವೆ. 2018–19ನೇ ಸಾಲಿನಲ್ಲಿ ಜಿಲ್ಲೆಯ ಎಲ್ಲಾ ತಾಲ್ಲೂಕುಗಳಲ್ಲಿ ಸೇರಿ ಒಟ್ಟು 14,40,340 ಸಸ್ಯಗಳನ್ನು ನೆಡಲಾಗಿತ್ತು.[23] ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ಮಾತ್ರ 4.26 ಲಕ್ಷ ಸಸಿಗಳನ್ನು ನೆಟ್ಟು ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಹೀಗೆ ಹಲವು ಕಾಲಘಟ್ಟಗಳಲ್ಲಿ ಬೆಳೆಸಲಾದ ಮರಗಳು ಪ್ರವಾಸಿಗರ ಆಕರ್ಷಣೆಗೆ ಕಾರಣವಾಗಿವೆ. ಇಂತಹ ವಿಶಿಷ್ಟ ಬಗೆಯ ಮರಗಳನ್ನು ಅರಣ್ಯ

ಇಲಾಖೆ ಮತ್ತು ಖಾಸಗಿ ಪ್ರದೇಶದಲ್ಲಿ ಕಂಡು ಬರುತ್ತಿದ್ದು ಪ್ರವಾಸಿಗರು ವೀಕ್ಷಣೆ ಮಾಡಬಹುದಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಎಲ್ಲಾ ಪ್ರದೇಶಗಳ ಅರಣ್ಯದಲ್ಲಿ ಕುರುಚಲು ಗಿಡಗಳನ್ನು ಹೊಂದಿದ್ದು ಉರುವಲುಗಾಗಿ ಬಳಸಲು ಉಪಯುಕ್ತವಾಗಿವೆ. ಶ್ರೀಗಂಧ ಮತ್ತು ರಕ್ತಚಂದನ ಮರಗಳನ್ನು ರಾಜ್ಯ ಅರಣ್ಯ ಇಲಾಖೆಯು ರಕ್ಷಿತ ಅರಣ್ಯ ಪ್ರದೇಶದಲ್ಲಿ ಬೆಳೆಸುತ್ತಿದೆ. ಶ್ರೀಗಂಧ ಮತ್ತು ರಕ್ತಚಂದನ ಮರಗಳನ್ನು ರೈತರಿಗೆ ಜಮೀನಿನಲ್ಲಿ ನೆಡುವಂತೆ ಪ್ರೋತ್ಸಾಹವನ್ನು ಅರಣ್ಯ ಇಲಾಖೆಯು ಸಹಕಾರವನ್ನು ನೀಡುತ್ತಿದೆ.[24] ಸುಮಾರು 25 ವರ್ಷಗಳವರೆಗೂ ಪೋಷಣೆ ಮಾಡಲಾಗುತ್ತದೆ. ಋತುಗಳಲ್ಲಿಯೂ ಉತ್ತಮವಾದ ಹವಾಗುಣವಿರಲು ಇಂತಹ ಮರಗಳು ಕಾರಣವಾಗಿವೆ.

ಈ ಬಗೆಯ ಮರಗಳು ಪರಿಸರ ಪ್ರಿಯರನ್ನು ಮತ್ತು ಇತರ ಬಗೆಯ ಪ್ರವಾಸಿಗರನ್ನು ಅಧಿಕ ಸಂಖ್ಯೆಯಲ್ಲಿ ಆಕರ್ಷಣೆ ಮಾಡುತ್ತಿವೆ. ನೆಲಮಂಗಲ ತಾಲ್ಲೂಕಿನಲ್ಲಿ ಹೆಚ್ಚು ಜಾಲಿ ಮತ್ತು ಆಲದಮರ, ಅರಳಿಮರ,  ಹಾಗೂ ನೀಲಿಗಿರಿಮರಗಳನ್ನು ಕಾಣಬಹುದಾಗಿದ್ದು ಪ್ರಮುಖವಾದ ಪ್ರವಾಸಿ ತಾಣಗಳಾಗಿವೆ. ವಿಶೇಷವಾಗಿ ನಿಜಗಲ್‌ಬೆಟ್ಟದಲ್ಲಿನ ಮರಗಳನ್ನು ಮತ್ತು ಸಸ್ಯರಾಶಿಯ ಅನುಭವವನ್ನು ಪಡೆಯಲು ದಿನನಿತ್ಯ ನೂರಾರು ಪ್ರವಾಸಿಗರು ಇಲ್ಲಿಗೆ ಭೇಟಿ ನೀಡುತ್ತಾರೆ. ಶಿವಗಂಗೆ ಬೆಟ್ಟದ ಮೇಲೆ ಸುಮಾರು ಇನ್ನೂರು ವರ್ಷಗಳ ಹಳೆಯದಾದ ಹಣ್ಣುಗಳನ್ನು ಮತ್ತು ಉತ್ತಮವಾದ ಗಾಳಿಯನ್ನು ಬೀಸುವ ಮರಗಳನ್ನು ಕಾಣಬಹುದಾಗಿದೆ.[25] ಸಾವಿರಾರು ಪ್ರಗವಾಸಿಗರನ್ನು ಅಲ್ಲಿನ ಮರಗಳು ಆಕರ್ಷಣೆ ಮಾಡುತ್ತಿವೆ. ಇಲ್ಲಿಗೆ ಆಗಮಿಸುವ ಪ್ರವಾಸಿಗರಿಗೆ ನೆರಳನ್ನು ಮತ್ತು ಆನಂದವನ್ನು ನೀಡುತ್ತಿವೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಹಲವು ಸಸ್ಯಗಳು ಹೆಚ್ಚಾಗಿ ಕಾಣಸಿಗುತ್ತವೆ. ಕೆಲವು ಸಸ್ಯಗಳು ಹಣ್ಣುಗಳನ್ನು ನೀಡಿದರೆ ಇನ್ನು ಕೆಲವು ಮರಗಳು ಅರಳಿಮರ ಹಸಿರನ್ನು ಮತ್ತು ತಂಪಾದ ಗಾಳಿಯನ್ನು ನೀಡುತ್ತಿವೆ. ಜಿಲ್ಲೆಯ ಬಹುಭಾಗದಲ್ಲಿ ಕಂಡು ಬರುವಂತಹ ಗಿಡಗಳಲ್ಲಿ ಸೀತಾಫಲ ಪ್ರಮುಖವಾಗಿದೆ. ಸೀತಾಫಲ ಗಿಡಗಳು ಜಿಲ್ಲೆಯಲ್ಲಿ ಹೇರಳವಾಗಿವೆ ಮುಖ್ಯವಾಗಿ ಹಳ್ಳಿಯ ಗುಡ್ಡ ಪ್ರದೇಶದಲ್ಲಿ ಮತ್ತು ಕಾಡುಗಳಲ್ಲಿ ತೋಟಗಳಲ್ಲಿ, ಬೆಟ್ಟದ ಸೀತಕಲ್ಲು, ಮತ್ತು ನಾಲ್ಕೂ ಇತರ ತಾಲ್ಲೂಕುಗಳಲ್ಲಿ ಸೀತಾಫಲ ಗಿಡಗಳಿವೆ. ಹಚ್ಚ ಹಸಿರಾಗಿರುವ ಇಂತಹ ಗಿಡಗಳು ಉತ್ತಮವಾದ ಗಾಳಿಯನ್ನು ನೀಡುವುದರ ಮೂಲಕ ಪ್ರವಾಸಿಗರನ್ನು ಸೆಳೆಯುತ್ತವೆ ಮತ್ತು ರೈತರಿಗೆ ಆರ್ಥಿಕವಾಗಿ ಅಭಿವೃದ್ಧಿಯನ್ನು ಪಡಿಸಿಕೊಳ್ಳಲು ಸಹಾಯಕವಾಗಿದೆ ಕಲ್ಲಂಗಡಿ, ಬೇಲಿ, ಗಿಡ, ನಾಗದಾಳ ಗಿಡ, ಕತ್ತಾಳೆ, ಮುಳ್ಳು ಗಿಡಗಳು ಮತ್ತು ಕಾರೆ ಗಿಡಗಳನ್ನು ಬೆಟ್ಟ ಗುಡ್ಡಗಳಲ್ಲಿ ಸಹನೋಡಬಹುದಾಗಿದೆ.

## ಜನಸಂಖ್ಯೆ

2011ರ ಜನಗಣತಿಯ ಪ್ರಕಾರ ಈ ಪ್ರದೇಶದ ಒಟ್ಟು ಜನಸಂಖ್ಯೆ 9,90,923 ಒಟ್ಟು ಜನಸಂಖ್ಯೆಯಲ್ಲಿ 5,09,172 ಪುರುಷರು ಮತ್ತು 4,81,751 ಮಹಿಳೆಯರು ಒಟ್ಟು ಕರ್ನಾಟಕದ ಜನಸಂಖ್ಯೆಗೆ ಜಿಲ್ಲೆಯ ಪಾಲು 1.62% ಮತ್ತು ಜಿಲ್ಲೆಗಳಲ್ಲಿ 29 ನೇ ಸ್ಥಾನದಲ್ಲಿದೆ[26]. ಜಿಲ್ಲೆಯ ಜನಸಂಖ್ಯೆಯ ನಗರ ಪ್ರದೇಶಗಳಲ್ಲಿ 2,68,744 ರಷ್ಟಿದ್ದು, ಕ್ರಮವಾಗಿ 72.8% ಮತ್ತು 27.12% ಗ್ರಾಮೀಣ ಮತ್ತು ನಗರ ಜನಸಂಖ್ಯೆಯನ್ನು ಹೊಂದಿದೆ[27].

1–6 ವಯಸ್ಸಿನ ಜನಸಂಖ್ಯೆಯನ್ನು 1,07 ಮತ್ತು 062 ಎಂದು ವರದಿಯನ್ನು ನೋಡಬಹುದು. ಇದು ಗ್ರಾಮೀಣ ಪ್ರದೇಶಗಳಲ್ಲಿ 72.30% ಮತ್ತು ನಗರ ಪ್ರದೇಶಗಳಲ್ಲಿ 27.70% ರಷ್ಟಿದೆ. ಮಕ್ಕಳ ಜನಸಂಖ್ಯೆಯ ಪ್ರಮಾಣವು ಒಟ್ಟು ಜಿಲ್ಲೆಯ ಜನಸಂಖ್ಯೆಗೆ 10.80% ಆಗಿದೆ[28]. ಭಾರತದ ಜನಸಂಖ್ಯೆಯ ಆಸಕ್ತಿದಾಯಕ ವಿಭಾಗವೆಂದರೆ ಅದರ ಹದಿಹರೆಯದವರು ಮತ್ತು ಯುವಕರು ಹದಿಹರೆಯದವರನ್ನು 10–19 ವರ್ಷದೊಳಗಿನ ವ್ಯಕ್ತಿಗಳು ಎಂದು ವರ್ಗೀಕರಿಸಿದರೆ, ಯುವಕರನ್ನು 15–24 ವರ್ಷದೊಳಗಿನ ವ್ಯಕ್ತಿಗಳು ಎಂದು ವ್ಯಾಖ್ಯಾನಿಸಲಾಗಿದೆ. ಜಿಲ್ಲೆಯಲ್ಲಿ ಹದಿಹರೆಯದವರ ಸಂಖ್ಯೆ (10–19) 1,79,341 ಮತ್ತು ಯುವಕರು (15–24) 1,96,284 ಜಿಲ್ಲೆಯಲ್ಲಿ 10–24 ವರ್ಷದೊಳಗಿನ ಯುವ ವಯಸ್ಸಿನವರು 2,83,531 ರಷ್ಟಿದ್ದಾರೆ[29]. ಇದು ಒಟ್ಟು ಜಿಲ್ಲೆಯ ಜನಸಂಖ್ಯೆಯ ಸುಮಾರು 28.61% ಆಗಿದೆ. ಗ್ರಾಮೀಣ ನಗರ ವಿತರಣೆ ಹೆಚ್ಚು ಕಡಿಮೆ ಒಂದೇ ಆಗಿರುತ್ತದೆ[30]

## 1.11 ಸಾಹಿತ್ಯ ವಿಮರ್ಶೆ

**ರೈಸ್, ಬಿ. ಎಲ್. 1903 ಎಫಿಗ್ರಾಫಿಯಾ ಕರ್ನಾಟಕ ಎಂಬ ಮಹಾ ಶಾಸನ ಸಂಪುಟದಲ್ಲಿ** ನಮಗೆ ಪ್ರಾಥಮಿಕ ಆಕರಗಳಿಂದ ಈ ಮಹಾ ಪ್ರಬಂಧಕ್ಕೆ ಬಹಳಷ್ಟು ಅನುಕೂಲವಾಗುವ ಪ್ರಾಥಮಿಕ ಆಕರಗಳನ್ನು ಇದರಿಂದ ಅಳವಡಿಸಿಕೊಂಡಿರುತ್ತೇನೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಬರುವಂತಹ ಶಾಸನಗಳನ್ನು ಇದರಿಂದ ತಿಳಿಯಬಹುದು. ಯಾರ ಕಾಲದಲ್ಲಿ ಯಾವ ಶಾಸನಗಳನ್ನು ಕೆತ್ತಲಾಗಿದೆ ಎಂಬುದು ತಿಳಿಯಬಹುದು. ಈ ಮಹಾ ಪ್ರಬಂಧಕ್ಕೆ ಐತಿಹಾಸಿಕ ಸ್ಥಳಗಳಲ್ಲಿ ಹಲವಾರು ಪ್ರಮುಖ ಶಾಸನಗಳನ್ನು ದೊರಕಿದ್ದು ಇದರಿಂದ ಬಹಳಷ್ಟು ಅನುಕೂಲವಾದ ಮಾಹಿತಿಯು ಸಿಕ್ಕಿರುತ್ತದೆ. ಇದರಿಂದ ಪ್ರಾಥಮಿಕ ಆಕಾರಗಳ್ನು ಕ್ರೂಢೀಕರಿಸಲು ಬಹಳಷ್ಟು ಉಪಯುಕ್ತವಾಗಿದೆ.

**ಫ್ರಾನ್ಸಿಸ್ ಬುಕಾನಾನ್, 1801 ಜರ್ನಿ ಫ್ರಮ್ ಮದ್ರಾಸ್ ಥ್ರೋ ದಿ ಕಂಟ್ರೀಸ್ ಆಫ್ ಮೈಸೂರು ಕೆನರಾ ಅಂಡ್ ಮಲಬಾರ್** ಎಂಬ ಮಹಾ ಗ್ರಂಥದಿಂದ ಈ ಮಹಾ ಪ್ರಬಂಧಕ್ಕೆ ಬಹಳಷ್ಟು ಮಾಹಿತಿಗಳನ್ನು ಅಳವಡಿಸಿದ್ದೇನೆ. ಪ್ರಾಚೀನ ಕಾಲದ ವ್ಯಾಪಾರ ಮತ್ತು ಸಂಪರ್ಕ ವ್ಯವಸ್ಥೆಯನ್ನು ಯಾವ ರೀತಿಯಲ್ಲಿ ಇತ್ತು ಎಂಬುದು ಮತ್ತು ಯಾವದೇಶಗಳು ಭಾರತ ದೇಶದೊಂದಿಗೆ ವ್ಯಾಪಾರ ಸಂಬಂಧಗಳನ್ನು ಹೊಂದಿದೆ ಎಂಬುದು ಈ ಮಹಾ ಗ್ರಂಥದಲ್ಲಿ ದೊರೆಯುತ್ತದೆ ಮತ್ತು ಯಾವ ರಾಜರು ಯಾವ ದೇಶದ ಸಂಪರ್ಕದೊಂದಿಗೆ ಇದ್ದರು ಎಂಬುದು ತಿಳಿಯುತ್ತದೆ. ಭಾರತದಿಂದ ಯಾವ ವಸ್ತುಗಳು ಆಮದು ಮತ್ತು ರಫ್ತು ಮಾಡಿಕೊಳ್ಳುತ್ತಿದ್ದಾರೆಂಬುದು ಈ ಮಹಾ ಗ್ರಂಥದಲ್ಲಿ ದೊರೆಯುತ್ತದೆ.

**ವೆಂಕಟೇಶ್, ಎಸ್. 2016 ದೊಡ್ಡಬಳ್ಳಾಪುರ ಚಾರಿತ್ರಿಕ ಅಧ್ಯಯನ** ಎಂಬ ಪುಸ್ತಕದಲ್ಲಿ ಈ ಮಹಾ ಪ್ರಬಂಧದ ಸಂಶೋಧನೆಗೆ ಸಹಾಯಕವಾದ ದಾಖಲೆಗಳು ಸಿಕ್ಕಿವೆ ಪ್ರಾಥಮಿಕ ಮತ್ತು ದ್ವಿತೀಯ ಆಕಾರಗಳನ್ನು ಕಲೆಹಾಕಲಾಗಿದೆ. ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ರಾಜರು ಮತ್ತು ಪಾಳೇಗಾರರ ಕಾಲದಲ್ಲಿ ಹಲವಾರು ದೇವಾಲಯಗಳನ್ನು ಮತ್ತು ಕೋಟೆಗಳನ್ನು ಕಟ್ಟಿ ತಾಲ್ಲೂಕಿನಲ್ಲಿ ಉತ್ತಮವಾದ ಆಡಳಿತವನ್ನು ನಡೆಸಿಕೊಂಡು ಬಂದಿರುತ್ತಾರೆ. ಐತಿಹಾಸಿಕ ಸ್ಥಳಗಳಲ್ಲಿ ಅವರ ಕಾಲದಲ್ಲಿ ನಿರ್ಮಾಣವಾಗಿರುವ ದೇವಾಲಯಗಳು ಇವತ್ತಿಗೂ ಪ್ರಸಿದ್ದಿಯನ್ನು ಪಡೆದುಕೊಂಡು ಧಾರ್ಮಿಕ ಪ್ರವಾಸೋಧ್ಯಮಕ್ಕೆ ಸಹಾಯಕವಾಗುವಂತಹ ಒಂದು ಕ್ಷೇತ್ರವಾಗಿದೆ. ಆದುದರಿಂದ ಈ ಗ್ರಂಥದಲ್ಲಿ ಮಹಾನ್ ದಾಖಲೆಗಳು ಸಿಕ್ಕಿರುವುದರಿಂದ ನನ್ನ ಈ ಗ್ರಂಥಕ್ಕೆ ಸಹಾಯಕವಾಗಿರುತ್ತದೆ.

**ಮೂರ್ತೀಶ್ವರಯ್ಯ, 2015 ದೇವನಹಳ್ಳಿ ತಾಲ್ಲೂಕು ಪರಿಚಯ** ಎಂಬ ಪುಸ್ತಕದಲ್ಲಿ ಈ ಮಹಾ ಪ್ರಬಂಧದ ಸಂಶೋಧನೆಗೆ ಸಹಾಯಕವಾದ ದಾಖಲೆಗಳು ಸಿಕ್ಕಿವೆ ಪ್ರಾಥಮಿಕ ಮತ್ತು ದ್ವಿತೀಯ ಆಕಾರಗಳನ್ನು ಕಲೆಹಾಕಲಾಗಿದೆ. ದೇವನಹಳ್ಳಿ ತಾಲ್ಲೂಕು ಪರಿಚಯವೆಂಬ ಪುಸ್ತಕದಲ್ಲಿ ಸ್ಥಳೀಯ ಇತಿಹಾಸ ದೇವಾಲಯಗಳು, ಕೋಟೆಗಳು, ಆಡಳಿತ ಪದ್ದತಿ, ಸಾಮಾಜಿಕ ಜೀವನ, ಧಾರ್ಮಿಕ ಜೀವನ ಎಂಬ ವಿಚಾರಗಳು ಈ ಆಕಾರದಲ್ಲಿ ನಾವು ತಿಳಿಯಬಹುದು. ಈ ಪ್ರಬಂಧಕ್ಕೆ ಈ ಪುಸ್ತಕವು ಬಹಳಷ್ಟು ಅನುಕೂಲವಾಗಿದೆ.

**ಸ್ವಾಮಿ ಲ. ನ. 2012** ***ಪ್ರಾಗೈತಿಹಾಸ ಕಾಲದಲ್ಲಿ ಕರ್ನಾಟಕದ ಸಾಗರೋತ್ತರ ಸಂಬಂಧಗಳು*** ಈ ಆಕರದಲ್ಲಿ ಪ್ರಾಗೈತಿಹಾಸಿಕ ಕಾಲದಲ್ಲಿ ಸಮುದ್ರಯಾನದ ಮುಖಾಂತರ ವ್ಯಾಪಾರ ಮಾಡುವ ಉದ್ದೇಶದಿಂದ ದೇಶಗಳು ಮತ್ತು ಇತರೆ ದೇಶಗಳೊಂದಿಗೆ ಸಂಬಂಧವನ್ನು ಬೆಳೆಸಿಕೊಳ್ಳುವ ಉದ್ದೇಶದಿಂದ ಅಲ್ಲಿನ ರಾಯಭಾರಿಗಳು ಬೇರೆ ಬೇರೆ ದೇಶಗಳಿಗೆ ಪ್ರವಾಸ ಮಾಡುವ

ಪ್ರಕ್ರಿಯೆಯು ಈ ಆಕರದಲ್ಲಿ ನಮಗೆ ತಿಳಿಯುತ್ತದೆ. ಪ್ರವಾಸ ಯಾವರೀತಿಯಲ್ಲಿ ಎಲ್ಲಿಂದ ಆರಂಭವಾಯಿತು ಎಂಬುದು ಇದರಿಂದ ತಿಳಿಯುತ್ತದೆ. ಆದ್ದರಿಂದ ನನ್ನ ಸಂಶೋಧನೆಗೆ ಸಹಾಯಕವಾಗುವಂತಹ ಕೆಲವೊಂದು ಅಂಶಗಳು ಇದರಿಂದ ಲಭ್ಯವಾಗುತ್ತದೆ.

**ಶಿವ ತಾರಕ್, ಕೆ. ಬಿ. 2001** ***ಕರ್ನಾಟಕದ ಪುರತತ್ವ ನೆಲೆಗಳು*** ಈ ಆಕರದಲ್ಲಿ ಇರುವಂತ ಪುರಾತತ್ವ ಸ್ಥಳಗಳನ್ನು ಗುರುತಿಸಿ ಅದನ್ನು ಬೆಳಕಿಗೆ ತಂದಿರುವುದು ಒಂದು ವಿಶೇಷವಾಗಿದೆ ಕರ್ನಾಟಕದಲ್ಲಿ ಯಾವ ಯಾವ ಜಿಲ್ಲೆಯಲ್ಲಿ ಪುರಾತತ್ವ ನೆಲೆಯನ್ನು ಹೊಸದಾಗಿ ಕಂಡುಹಿಡಿದು ಆ ಸ್ಥಳವು ಐತಿಹಾಸಿಕ ಸ್ಥಳಗಳನ್ನು ಮಾಡಲು ಯಾವ ವಿಧಾನದಿಂದ ಮಾಡಿರುತ್ತದೆಂದು ತಿಳಿಯುತ್ತದೆ. ಈ ಗ್ರಂಥದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಯಾವ ತಾಲ್ಲೂಕಿನಲ್ಲಿ ಪುರಾತತ್ವ ನೆಲೆಗಳು ಸಿಕ್ಕಿವೆ ಎಂಬುದು ಈ ಗ್ರಂಥದಲ್ಲಿ ತಿಳಿಯುತ್ತದೆ. ಇದರಿಂದ ಸಂಶೋಧನೆಗೆ ಸಹಾಯಕವಾಗಿದೆ ಎಂಬುದು ಹೇಳಬಹುದು.

**ಶ್ರೀಧರ ಅಡಿಗ, 2013,** ***ಕರ್ನಾಟಕದ ಪ್ರೇಕ್ಷಣೀಯ ಸ್ಥಳಗಳು*** ಎಂಬ ಕೃತಿಯು ಕರ್ನಾಟಕದ ಎಲ್ಲಾ ಜಿಲ್ಲೆಗಳ ಪ್ರಮುಖವಾಗಿ ಪ್ರೇಕ್ಷಣೀಯ ಸ್ಥಳಗಳ ಬಗ್ಗೆ ಮಾಹಿತಿಯನ್ನು ನೀಡುತ್ತದೆ. ಮತ್ತು ಜಿಲ್ಲೆಯ ಪ್ರಮುಖವಾದ ಸ್ಥಳಗಳ ಬಗ್ಗೆ ಅದರ ಐತಿಹಾಸಿಕ ಹಿನ್ನೆಲೆಯುಳ್ಳ ಮಾಹಿತಿಯನ್ನು ನೀಡುವಂತಹ ವಿಷಯ ಇದರಿಂದ ಮಾಹಿತಿ ಮತ್ತು ಪ್ರವಾಸೋದ್ಯಮ ಸ್ಥಳಗಳ ಬಗ್ಗೆ ಯಾವ ರೀತಿ ಅಭಿವೃದ್ದಿಯನ್ನು ಮಾಡಬೇಕೆಂಬುದು ಇದರಿಂದ ತಿಳಿಯುತ್ತದೆ.

**ಸಂಪದ್ಗಿರಿರಾವ್, 1970,** ***ಕರ್ನಾಟಕದ ಪರಂಪರೆ"*** ಎಂಬ ಕೃತಿಯನ್ನು ನನ್ನ ಪ್ರಬಂಧಕ್ಕೆ ಸಂಬಂಧಿಸುವಂತಹ ಮಾಹಿತಿಯನ್ನು ಕರ್ನಾಟಕದಲ್ಲಿ ಹಲವಾರು ಐತಿಹಾಸಿಕ ಸ್ಥಳಗಳನ್ನು ಒಳಗೊಂಡಿರುತ್ತದೆ. ಮತ್ತು ಅದರಿಂದ ಐತಿಹಾಸಿಕ ಪರಂಪರೆ ಎಂದು ಯಾವ ವಿಷಯವನ್ನು ಕರೆಯಬಹುದು ಎಂದು ತಿಳಿಯಬಹುದು ಕರ್ನಾಟಕವನ್ನು ಯಾವ ವಿಚಾರಕ್ಕೆ ಪರಂಪರೆ ಎಂದು ಕರೆಯುತ್ತಾರೆ. ಏಕೆಂದರೆ ಕರ್ನಾಟಕವು ಪ್ರಾಚೀನ ಕಾಲದಿಂದ ತನ್ನ ಪರಂಪರೆಯನ್ನು ಬೆಳೆಸಿಕೊಂಡು ಬಂದಿರುತ್ತದೆ. ಆದ್ದರಿಂದ ಕರ್ನಾಟಕವು ಒಂದು ಐತಿಹಾಸಿಕ ಅಧ್ಯಯನವನ್ನು ಒಳಗೊಂಡಿದೆ ಎಂದು ತಿಳಿಯಬಹುದು.

**ವೀರಭದ್ರಪ್ಪ, 2008,** ***ಕರ್ನಾಟಕ ಪ್ರವಾಸೋದ್ಯಮದ ಇತಿಹಾಸ ಒಂದು ಅವಲೋಕನ*** ಈ ಗ್ರಂಥದಿಂದ ನನ್ನ ಸಂಶೋಧನೆಗೆ ಮಾಹಿತಿಯನ್ನು ಪಡೆದುಕೊಂಡಿರುತ್ತೇನೆ. ಈ ಪುಸ್ತಕದಲ್ಲಿ ಪ್ರವಾಸೋದ್ಯಮದ ಅಧಿಕ ಲಕ್ಷಣಗಳು, ಬಗೆಗಳು, ಉದ್ದೇಶಗಳ ಇನ್ನೂ ಅನೇಕ ಮಾಹಿತಿಯನ್ನು

ಪಡೆದುಕೊಂಡಿರುತ್ತೇನೆ. ಮಹಾ ಪ್ರಬಂಧಕ್ಕೆ ಒಂದು ಸ್ವರೂಪವನ್ನೇ ಪಡೆದುಕೊಂಡು ಒಂದು ಗ್ರಂಥದ ರಚನೆಯನ್ನು ಮಾಡುವುದಕ್ಕೆ ಈ ಪುಸ್ತಕ ನೆರವಾಗಿರುತ್ತದೆ.

**ಜಾನ್, ಎಂ.ಬ್ರೈಡನ್ 1973 ರವರ ಕೃತಿ *'ಟೂರಿಸಂ ಅಂಡ್ ಡೆವಲಪ್‌ಮೆಂಟ್–ಎ ಕೇಸ್ ಸ್ಟಡೀ ಆಫ್ ದಿ ಕಾಮನ್‌ವೆಲ್ತ್ ಕೆರಿಬಿಯನ್"*** ಸೂಕ್ಷ್ಮಯುತವಾದಂತಹ ರೀತಿಯಲ್ಲಿ ಕಾಮನ್‌ವೆಲ್ತ್ ಆಫ್ ಕೆರಿಬಿಯನ್ ಮುಖಾಂತರ ಭವಿಷ್ಯದ ನಿರ್ಧರಿತ ಆಲೋಚನೆ ಮತ್ತು ಪ್ರವಾಸಿ ಯೋಗ್ಯ ರಾಷ್ಟ್ರಗಳ ಕ್ರಮಯುತವಾದ ಪಟ್ಟಿಯನ್ನು ಸಿದ್ದಪಡಿಸಿದ್ದು, ಸಂಪ್ರದಾಯಿಕಯುತವಾದಂತಹ ಬರವಣಿಗೆಯು ಪ್ರವಾಸ ಮತ್ತು ಬೆಳವಣಿಗೆಯನ್ನು ಪ್ರಧಾನವಾಗಿ ಹೊಂದಿದೆ.

**ಬಾರ್ಕ್‌ತ್ ಎ.ಜೆ ಮತ್ತು ಮೆದಿಲಿಕ್. ಎಸ್. 1974 ತಮ್ಮ ಕೃತಿಯಾದ '*ಟೂರಿಸಂ : ಪಾಸ್ಟ್, ಪ್ರಸೆಂಟ್, ಅಂಡ್ ಪ್ಯೂಚರ್"*** 1970 ಕಾಲಮಾನವನ್ನು ಚರ್ಚಿಸುತ್ತಾ ಪ್ರವಾಸೋದ್ಯಮವು ಕೇವಲ ಅಭಿವೃದ್ಧಿಗೊಂಡ ಉದ್ಯಮವಲ್ಲದೇ ಭೂತ ಕಾಲ ಮತ್ತು ವರ್ತಮಾನದೊಂದಿಗೆ ಮಾಹಿತಿ ಸಂಗ್ರಹಣೆ ಹಾಗೂ ಪ್ರವಾಸೋದ್ಯಮವನ್ನು ಅರ್ಥೈಸಿಕೊಂಡಿದೆ.

**ಕಾಮತ್, ಎಸ್. 1980 "*ಕರ್ನಾಟಕ ಗೆಜಿಟಿಯರ್"*** ಕರ್ನಾಟಕ ಸರ್ಕಾರ ರಚಿಸಿದ ಗೆಜಿಟಿಯರ್ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕುರಿತು ಮಾಹಿತಿ ಒಳಗೊಂಡಿದೆ. ಈ ಗೆಜಿಟಿಯರ್‌ನಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಐತಿಹಾಸಿಕ ಸ್ಥಳಗಳ ಬಗ್ಗೆ ಪ್ರಾಥಮಿಕ ಆಕರಗಳನ್ನೂ ಒಳಗೊಂಡಿರುತ್ತದೆ. ಆದ್ದರಿಂದ ಈ ಗ್ರಂಥದಲ್ಲಿ ಹಲವಾರು ಮಾಹಿತಿಗಳನ್ನೂ ಒಳಗೊಂಡಿರುವ ಮುಖ್ಯವಾದ ಪ್ರಾಥಮಿಕ ಆಕರವಾಗಿದೆ.

**ಕಾಮತ್, ಎಸ್. 1983 "*ಕರ್ನಾಟಕ ಸ್ಟೇಟ್ ಗೆಜಿಟಿಯರ್"*** ಕರ್ನಾಟಕ ರಾಜ್ಯಕ್ಕೆ ಸಂಬಂಧಿತವಾದಂತೆ ಅಧಿಕವಾದಂತಹ ಮಾಹಿತಿಯನ್ನು ಹೊಂದಿದ್ದು, ರಾಜ್ಯವನ್ನು ವಿಸ್ಕೃತವಾಗಿ ಅರ್ಥೈಸಿಕೊಳ್ಳುವಲ್ಲಿ ಪ್ರಸ್ತುತ ಅಧ್ಯಯನಕ್ಕೆ ಪೂರಕವಾದಂತಹ ಮಾಹಿತಿ ಮಹತ್ವಯುತವಾದ ದಾಖಲೆಯಾಗಿದೆ.

***ಸಿಂಗ್ ನಂದ್ ಸಚ್ಚಿಂದ್*, 1986 ರವರ ಶಿರ್ಷಿಕೆಯ "*ಜಿಯಾಗ್ರಫಿ ಆಫ್ ಟೂರಿಸಂ ಅಂಡ್ ರಿಕ್ರಿಯೆಷನ್*",** ಪ್ರವಾಸವನ್ನು ಅಭಿವೃದ್ದಿಗೊಳಿಸುವಲ್ಲಿ ಭೌಗೋಳಿಕ ಲಕ್ಷಣಗಳ ಮಹತ್ವ, ಪ್ರವಾಸಿ ಸ್ಥಳಗಳು ಭೌಗೋಳಿಕ ಆಕರ್ಷಣೆಯ ಕೆಲವು ಸ್ಥಳಗಳನ್ನು ಅವುಗಳು ಪ್ರವಾಸೋದ್ಯಮದ ಜೊತೆಗೆ ಹೊಂದಿರುವ ಸಂಬಂಧವನ್ನು ಕುರಿತು ಮತ್ತು ಪ್ರವಾಸವು ಪ್ರಕೃತಿಯ ಸೌಂದರ್ಯವನ್ನು ಹೇಗೆ ಅವಲಂಭಿಸಿದೆ ಎಂಬುದನ್ನು ಕುರಿತು ಮಾಹಿತಿ ಹೊಂದಿದೆ.

**ಜಗ್ ಮೋಹನ್, ಎಸ್.ನೇಗಿ 1987 "*ಟೂರಿಸಂ ಡೆವಲಪ್‌ಮೆಂಟ್ ಅಂಡ್ ರಿಸೋರ್ಸ್ ಕನ್ಸರ್‌ವೇಷನ್*"** 1980 ರ ಪೂರ್ವದಲ್ಲಿ ಪ್ರವಾಸದ ಬೆಳವಣಿಗೆ ಹಾಗೂ. ಮೂಲಭೂತ ಸಂಪನ್ಮೂಲಗಳ ಸಂರಚನೆ ದೃಷ್ಟಿಕೋನದೊಂದಿಗೆ ಪ್ರವಾಸವು ಬೆಳವಣಿಗೆ ಹೊಂದುವುದು. ಮೂಲಭೂತ ಸೌಕರ್ಯದೊಂದಿಗೆ ಹೇಗೆ ಬದಲಾವಣೆಯನ್ನು ಕಂಡುಕೊಳ್ಳುತ್ತಿದೆ, ಎಂಬುದನ್ನು ಪ್ರಾಥಮಿಕ ಮತ್ತು ದ್ವಿತೀಯ ಸಂಪನ್ಮೂಲಗಳನ್ನು ನೀರಾವರಿ ಬೆಳವಣಿಗೆ, ಮಣ್ಣಿನ ಬೆಳವಣಿಗೆ, ವಾಯು., ಇವುಗಳ ಬಳಕೆ ಸುಸ್ಥಿರ ಪ್ರವಾಸೋದ್ಯಮದ ಬೆಳವಣಿಗೆಗೆ ಕಾರಣವಾಗಿದೆ.

**ಕಾಮಥ್, ಎಸ್. 1989 "*ಬೆಂಗಳೂರು ರೂರಲ್ ಡಿಸ್ಟ್ರಿಕ್ಟ್ ಗೆಜೆಟಿಯರ್*"** ಈ ಪುಸ್ತಕದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಐತಿಹಾಸಿಕ ಸ್ಥಳಗಳ ಬಗ್ಗೆ ಶಾಸನಗಳ ಬಗ್ಗೆ ಮತ್ತು ಕೃಷಿಗಳ ಬಗ್ಗೆ ಹಾಗೂ ಭೋಗೋಳಿಕ ಅಂಶಗಳನ್ನು ಒಳಗೊಂಡಿರುವ ಪ್ರಾಥಮಿಕ ಆಕಾರವಾಗಿದೆ. ಆದ್ದುದರಿಂದ ಈ ಪುಸ್ತಕವನ್ನು ಸಂಶೋಧನೆಗೆ ಅಳವಡಿಸಿಕೊಂಡು ಮಹಾ ಪ್ರಬಂಧ ರಚನೆ ಮಾಡುವುದಕ್ಕೆ ಸಹಾಯವಾಗಿದೆ.

**ಸತ್ಯಂ ಬಿ. ಎನ್ 1989 "*ಕರ್ನಾಟಕ ಸ್ಟೇಟ್ ಗೆಜೆಟಿಯರ್*"** ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಮಾಹಿತಿ ಹಾಗೂ ಐತಿಹಾಸಿಕ ಸ್ಥಳಗಳನ್ನು ಯಾವ ಕಾಲದ್ದು ಎಂಬುದು ಹೇಳುವಂತಹ ಈ ಗ್ರಂಥದಲ್ಲಿ ಐತಿಹಾಸಿಕ ಅಂಶಗಳನ್ನು ಒಳಗೊಂಡಿರುತ್ತದೆ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆ ಮೊದಲು ಎಂಟು ತಾಲ್ಲೂಕುಗಳನ್ನು ಒಳಗೊಂಡಿದ್ದು ಇದರ ಬಗ್ಗೆ ಕೂಲಂಕುಶವಾಗಿ ಈ ಪುಸ್ತಕದಲ್ಲಿ ಚರ್ಚಿಸಲಾಗಿದೆ. ಆದ್ದರಿಂದ ಈ ಪುಸ್ತಕವು ಸಂಶೋಧನೆಗೆ ಅಳವಡಿಸಿಕೊಂಡು ಮಹಾಪ್ರಬಂಧವನ್ನು ರಚಿಸಲಾಗಿದೆ.

**ಬಾಟ್ರಾ ಕೆ.ಎಲ್ 1990 ರವರ ಗ್ರಂಥ "*ಪ್ರಾಬ್ಲಮ್ ಅಂಡ್ ಪ್ರಾಸ್ಪೆಕ್ಟ್ ಆಫ್ ಟೂರಿಸಂ*"** ಪ್ರವಾಸೋದ್ಯಮದ ವಿವಿಧ ವಲಯಗಳು ಎದುರಿಸುತ್ತಿರುವ ವೈವಿಧ್ಯ ಸಮಸ್ಯೆಗಳ ವಿವರಣೆಯನ್ನು ನೀಡುತ್ತದೆ. ಲೇಖಕರು ಆರ್ಥಿಕ ದೃಷ್ಟಿಕೋನದಲ್ಲಿ ಪ್ರವಾಸವು ಉದ್ಯಮವಾಗಿ ಮೂಲಭೂತ ಸೌಕರ್ಯಗಳ ಸಾಮಾನ್ಯವಾದ ಅಗತ್ಯತೆಯೊಂದಿಗೆ ಬೆಳವಣಿಗೆಯನ್ನು ರಾಷ್ಟ್ರದ ಅಭಿವೃದ್ಧಿಗೆ ಪೂರಕ ಹಾಗೂ ಉದ್ಯಮವು ಆರ್ಥಿಕ ಏಳಿಗೆಯೊಂದಿಗೆ ಹೇಗೆ ರಾಷ್ಟ್ರದ ಬೆಳವಣಿಗೆಗೆ ಸಹಕಾರವಾಗಿದೆ ಎಂಬುದನ್ನು ಚರ್ಚಿಸಿದ್ದಾರೆ.

**ಆಲನ್.ಎಂ.ವಿಲಯಂ ಮತ್ತು ಗ್ರೀಥ್ ಶಾವ್ 1991 ರವರ ಕೃತಿ '*ಟೂರಿಸಂ ಅಂಡ್ ಎಕನಾಮಿಕ್ ಡೆವಲಪ್‌ಮೆಂಟ್*"** ಪ್ರವಾಸೋದ್ಯಮವು ನಿರ್ದಿಷ್ಟವಾದ ಕ್ಷೇತ್ರದಲ್ಲಿ ಬೆಳವಣಿಗೆಯಾಗುವುದು ಮತ್ತು

ಅದರ ಪಾತ್ರ ರಾಷ್ಟ್ರವು ಅಧಿಕವಾದ ನೈಸರ್ಗಿಕ ಸಂಪನ್ಮೂಲವನ್ನು ಕ್ರಮಬದ್ಧವಾಗಿ ಬಳಸಿಕೊಳ್ಳುವುದು. ಪ್ರವಾಸೋದ್ಯಮದ ಆರ್ಥಿಕ ಬೆಳವಣಿಗೆಯು ರಾಷ್ಟ್ರದ ಅಭಿವೃದ್ಧಿಗೆ ಸಾಧ್ಯ. ಇದರೊಂದಿಗೆ ತಳ ಸ್ಪರ್ಶದ ಅಧ್ಯಯನವು ಪ್ರಸ್ತುತ ಅಧ್ಯಯನಕ್ಕೆ ಬಹು ಮುಖ್ಯವಾದ್ದು ಎಂದು ಹೇಳಿದ್ದಾರೆ.

**ಬಾಟಿಯಾ ಎ.ಕೆ 1992 "*ಟೂರಿಸಂ ಡವಲಪ್‌ಮೆಂಟ್*"** ಎಂಬ ಗ್ರಂಥವು ಪ್ರಾರಂಭದ ಪ್ರವಾಸದ ಬೆಳವಣಿಗೆಯು ಬೆಳೆದು ಬಂದಂತಹ ತತ್ವಗಳು ಮತ್ತು ಆಚರಣೆಗಳು ಮೂಲಭೂತವಾಗಿ ಬೇಕಾದಂತಹ ವಿಚಾರಗಳನ್ನು ಪ್ರವಾಸವು ಒಂದು ಉದ್ಯಮವಾಗುವಲ್ಲಿ ಹಲವಾರು ತತ್ವಗಳು ಹಾಗೂ ಆಚರಣೆಗಳನ್ನು ಅನುಸರಿಸುವುದು ಕಡ್ಡಾಯವಾಗಿದೆ. ಎಂಬುದನ್ನು ತಿಳಿಸಿದ್ದಾರೆ.

**ಮನೀತ್ ಕುಮಾರ್ 1992 ಕೃತಿ "*ಟೂರಿಸಂ ಟೂಡೇ – ಆಯನ್ ಇಂಡಿಯನ್ ಪಸ್ಪೆಕ್ಟಿವ್*"** ಆರ್ಥಿಕ ಹಿನ್ನೆಲೆಯಲ್ಲಿ ಪ್ರವಾಸೋದ್ಯಮವು ಗಳಿಸಿರುವ ಸ್ಥಾನಮಾನವನ್ನು ಭಾರತದ ಆರ್ಥಿಕ ಮಹತ್ವದ ದೃಷ್ಟಿಕೋನದಲ್ಲಿ ವಿವರಿಸಿದ್ದಾರೆ. ಪಾಶ್ಚಿಮಾತ್ಯ ಪ್ರವಾಸಕ್ಕಿಂತಲೂ ಭಾರತದ ಪ್ರವಾಸ ಹೇಗೆ ವಿಭಿನ್ನವಾದದ್ದು, ಎಂಬುದರೊಂದಿಗೆ ಭಾರತದ ಪ್ರವಾಸೋದ್ಯಮವನ್ನು ವಸ್ತುನಿಷ್ಠವಾಗಿ ಬರೆದಿದ್ದಾರೆ.

**ಲಜಿಪತಿ ರಾಯ್.ಹೆಚ್ 1993 "*ಡೆವಲಪ್‌ಮೆಂಟ್ ಆಫ್ ಟೂರಿಸಂ ಇನ್ ಇಂಡಿಯಾ*"** ಭಾರತದ ಪ್ರವಾಸೋದ್ಯಮ ಸ್ಥಾನವನ್ನು ವಿವರವಾಗಿ ಚರ್ಚಿಸಿದ್ದು, ಸಾಮಾಜಿಕ ವೈವಿಧ್ಯತೆ ಹಾಗೂ ಸ್ವಾಸ್ಥಯುತ ಅವಕಾಶಗಳು ಭೌತಿಕ ಬದಲಾವಣೆಗೆ ಸಾಧ್ಯವಾಗಿವೆ. ಪ್ರಾಕೃತಿಕ ವೈವಿಧ್ಯತೆ ಹಾಗೂ ಭೌಗೋಳಿಕ ವೈವಿಧ್ಯತೆಯನ್ನು ಹೊರತರುವ ಪ್ರಯತ್ನ ಕೃತಿಕಾರನ್ನು ನೈಸರ್ಗಿಕ, ಐತಿಹಾಸಿಕ, ಸಾಮಾಜಿಕ ಮತ್ತು ಧಾರ್ಮಿಕ ವೈವಿಧ್ಯತೆಯ ಕುರಿತು ಚರ್ಚಿಸುತ್ತಾ ಜಾಗತಿಕ ಕಾಳಜಿಗಳಲ್ಲಿ ಪ್ರವಾಸೋದ್ಯಮವು ಸುವರ್ಣ ಅವಕಾಶಗಳ ಜೊತೆಗೆ ದೇಶದ ಅಭಿವೃದ್ಧಿಗೆ ಶ್ರಮಿಸುತ್ತದೆ. ಇದರ ಮುಖೇನ ಮೂಲಭೂತ ಸೌಕರ್ಯಗಳನನ್ನು ಮತ್ತು ಪ್ರವಾಸೋದ್ಯಮದ ವ್ಯವಸ್ಥಿತವಾದ ನಿರ್ವಹಣೆಯ ಕೊರತೆಯನ್ನು ಪರಿಹರಿಸುವುದು, ಕೊನೆಯದಾಗಿ ಪ್ರವಾಸೋದ್ಯಮವು ಪ್ರಜ್ಞಾಪೂರ್ವಕವಾಗಿ ರಾಷ್ಟ್ರದ ಅಭಿವೃದ್ಧಿ ಪಾತ್ರ ನಿರ್ವಹಿಸುತ್ತದೆ ಎಂದು ಹೇಳುತ್ತಾರೆ.

**ಬಿಜೇಂದ್ರ, ಕೆ. ಪುನಿಯಾ 1994 "*ಟೂರಿಸಂ ಮ್ಯಾನೇಜ್‌ಮೆಂಟ್*"** ಎಂಬ ಕೃತಿಯಲ್ಲಿ ಪ್ರವಾಸದ ನಿರ್ವಹಣೆಯಲ್ಲಿ ಎದುರಾಗಬಹುದಾದಂತಹ ಮೂಲಭೂತ ಸಮಸ್ಯೆ ಹಾಗೂ ಅದರ ದೃಷ್ಟಿಕೋನವನ್ನು ಚಿತ್ರಿಸಲಾಗಿದೆ. ನಿರ್ವಹಣೆಯು ಪ್ರವಾಸದ ಮೂಲಕ ಒಂದು ಉದ್ಯಮವಾಗಿ

ಬೆಳೆಯುವುದಾಗಿದೆ. ಆಧುನಿಕ ಜಗತ್ತು ಪ್ರವಾಸ ಹಾಗೂ ಅಭಿವೃದ್ಧಿಯ ನಡುವೆ ಪ್ರತ್ಯಕ್ಷದರ್ಶಿಯಾಗಿದೆ. ನಿರ್ವಹಣೆಶಾಸ್ತ್ರದ ಪರಿಕಲ್ಪನೆಯು ಪ್ರಮುಖವಾಗಿ ಬೆಳೆಯುವುದರೊಂದಿಗೆ ವ್ಯವಸ್ಥಿತ ಪ್ರವಾಸೋದ್ಯಮಕ್ಕೆ ಅವಕಾಶ ಕಲ್ಪಿಸುವಂತಾಗಬೇಕಿದೆ. ಪುಸ್ತಕದ ಎರಡನೇ ಆಯಾಮವು ಪ್ರವಾಸದಲ್ಲಿ ಎದುರಾಗಬಹುದಾದಂತಹ ಸಮಸ್ಯೆ ಹಾಗೂ ಅದಕ್ಕೆ ಪರಿಹಾರಗಳನ್ನು ತಿಳಿಸುತ್ತದೆ.

**ಸಿನ್ಹ, ಆರ್.ಕೆ 1996 ರ "*ಟೂರಿಸಂ, ಸ್ಟ್ರಾಟಜೀಸ್, ಪ್ಲಾನಿಂಗ್ ಮತ್ತು ಅಭಿವೃದ್ಧಿ*"** ಪುಸ್ತಕದಲ್ಲಿ ಪಾವಿತ್ರತೆ ವಿವರಣೆ ನೀಡುತ್ತಾರೆ. ಪ್ರವಾಸೋದ್ಯಮದ ವಿವಿಧ ಮಜಲುಗಳು, ಯೋಜನೆ ಮತ್ತು ಬೆಳವಣಿಗೆಯ ವಿಚಾರಗಳನ್ನು ಸಾಧಿಸಿದ್ದಾರೆ. ಲೇಖಕರು ಹೇಳುವಂತೆ ಉತ್ತಮ ಯೋಜನೆಯು ಮತ್ತು ದ್ವಿಮುಖ ಆಲೋಚನೆ ಒಂದು ಪ್ರವಾಸವನ್ನು ಆಕರ್ಷಿಸುತ್ತದೆ. ಮತ್ತೊಂದು ಪ್ರವಾಸೋದ್ಯಮದ ನೆಲೆಗಟ್ಟಿನಲ್ಲಿ ಮೂಲಭೂತ ಸೌಲಭ್ಯಗಳನ್ನು ಬೆಳೆಸುತ್ತದೆ.

**ರತ್ನದೀಪ್‌ಸಿಂಗ್ 1996 ರವರ ಕೃತಿ "*ಇನ್‌ಫ್ರಾಸ್ಟ್ರಕ್ಚರ್ ಟೂರಿಸಂ ಇನ್ ಇಂಡಿಯಾ*"** ಭಾರತದ ಪ್ರವಾಸೋದ್ಯಮವನ್ನು ಬೆಳೆಸುವಲ್ಲಿ, ಇತರ ಕ್ಷೇತ್ರಗಳ ಸಮಗ್ರತೆ ಹಾಗೂ ವಿಶೇಷಯುತವಾದಂತಹ ನೀತಿಗಳನ್ನು ಚರ್ಚಿಸಿದ್ದಾರೆ. ಭಾರತದ ಜ್ವಲಂತ ವಿಚಾರಗಳನ್ನು ಪರಿಷ್ಕರಿಸುತ್ತಾ ಬೃಹತ್ ಬೆಳವಣಿಗೆಯಲ್ಲಿ ಪ್ರವಾಸದ ಉದ್ಯಮವು ಸಾಗುತ್ತಿದ್ದು, ಮೂಲಭೂತ ಸೌಲಭ್ಯಗಳ ಕ್ರಮಯುತ ಜೋಡಣೆಯು ಭಾರತದಲ್ಲಿ ಪ್ರವಾಸದ ಅಭಿವೃದ್ಧಿಗೆ ಪ್ರಧಾನ ಮೂಲವಾದ ಕಾರ್ಯವಾಗಿದೆ.

**ಜೇಮ್ಸ್ ಇಲಿಯಟ್ 1997 ರ ರಚನೆಯಾದ "*ಟೂರಿಸಂ, ಪಾಲಿಟಿಕ್ಸ್ ಅಂಡ್ ಪಬ್ಲಿಕ್ ಸೆಕ್ಟರ್ ಮ್ಯಾನೆಜ್‌ಮೆಂಟ್*"** ಪ್ರವಾಸಿ ಉದ್ಯಮ ಹಾಗೂ ರಾಜಕೀಯಕ್ಕೆ ಇರುವಂತಹ ಸಂಬಂಧದ ಕುರಿತು ವಿಶ್ಲೇಷಿಸುತ್ತದೆ. ಸಾರ್ವಜನಿಕ ವಲಯ ಮುಖಾಂತರ ಪರಿಷ್ಕೃತ ಹಂತಗಳು, ಅವಕಾಶಗಳು ಬೆಳೆದು ಬೆಳವಣಿಗೆ ದಿನ ದಿನ ಬದಲಾಗುತ್ತದೆ. ಸಾರ್ವಜನಿಕ ವಲಯ ಹಾಗೂ ಖಾಸಗೀ ವಲಯಗಳಲ್ಲಿ ಎದುರಾಗುವ ಪೈಪೋಟಿಯನ್ನು ತುಲನಾತ್ಮಕವಾಗಿ ತಿಳಿಸಿದ್ದಾರೆ.

**ಝಾ, ಎಸ್.ಎಮ್ 1997 ರವರ "*ಟೂರಿಸಂ ಮಾರ್ಕೆಟಿಂಗ್*",** ಪ್ರವಾಸದ ಉದ್ಯಮವು ಬೆಳೆದು ಬಂದು ದಾರಿ, ಮಾರುಕಟ್ಟೆಯ ಮೂಲಕ ಪ್ರವಾಸದ ಬೆಳವಣಿಗೆಯನ್ನು ಹಾಗೂ ದೋಷಮುಕ್ತವಾದ ಮಾರುಕಟ್ಟೆಯ ಪರಿಕಲ್ಪನೆಯು ಪ್ರವಾಸದ ಬೆಳವಣಿಗೆಗೆ ಪ್ರಮುಖವಾಗಿದೆ. ಭೌತಿಕ ಸೌಲಭ್ಯಗಳು, ಮಾರುಕಟ್ಟೆಯ ಸ್ಥಳ ಪ್ರವಾಸಿಯನ್ನು ಮುಟ್ಟುವಲ್ಲಿ ಪ್ರಧಾನ ಪಾತ್ರವಹಿಸಿವೆ. ಭಾರತದ ಮಾರುಕಟ್ಟೆಯ ತಂತ್ರಗಾರಿಕೆಯನ್ನು ವಿವರಿಸಿದ್ದಾರೆ.

**ಮಾತೋತ್ರ, ಆರ್.ಕೆ 1998 ರ ಬರವಣಿಗೆಯಲ್ಲಿ *"ಎಕನಾಮಿಕ್ ಡೈಮೈಕ್ಷನ್ ಆಫ್ ಟೂರಿಸಂ"*** ಪ್ರವಾಸದ ಬೆಳವಣಿಗೆಯಲ್ಲಿ ಆರ್ಥಿಕತೆಯ ಪಾತ್ರ ಮತ್ತು ಪ್ರವಾಸವು ರಾಷ್ಟ್ರದ ಬಡತನವನ್ನು ನಿವಾರಿಸುವಲ್ಲಿ ಬಹುಮುಖ್ಯವಾದಂತಹ ಅಸ್ತ್ರವಾಗಿದೆ. ಪ್ರವಾಸದ ಅಭಿವೃದ್ಧಿಯ ಮುಖಾಂತರ ದೇಶದ ಅಭಿವೃದ್ಧಿಯ ಕುರಿತು ಚರ್ಚಿಸಲಾಗಿದೆ.

**ಜಾಕೋಬ್.ಟಿ.ಜಿ 1998 ರ *"ಟೇಲ್ಸ್ ಆಪ್ ಟೂರಿಸಂ ಫ್ರಮ್ ಕೋವಲಂ"*** ಎಂಬ ಕೃತಿಯಲ್ಲಿ ಕೊವಲಂ ಪ್ರವಾಸಿ ಸ್ಥಳದಲ್ಲಿನ ವಿಶೇಷತೆಯನ್ನು ವಿವರಿಸಿದ್ದಾರೆ. ಕೊವಲಂ ಕೇರಳದ ಸಣ್ಣ ಕರಾವಳಿ ತೀರ ಪಟ್ಟಣ್ಣವಾಗಿದೆ. ಪ್ರವಾಸಿ ಆಕರ್ಷಣಾ ಕೇಂದ್ರವಾಗಿದೆ. ಕೊವಲಂ ಬೀಚ್‌ನಲ್ಲಿ ಲೈಟ್ ಹೌಸ್ (ಬೆಳಕಿನ ಮನೆ) ಕುರಿತು ಚರ್ಚಿಸಿದ್ದಾರೆ. ಲೇಖಕರು ಕೊವಲಂ ಕಲಾ ಸಂಗ್ರಹ, ನಾಯರ್ ಡ್ಯಾಂ, ವೆಲಯಾನಿ ಸಾಗರ ಇತರೆ ಬೀಚ್ ಸಂಬಂಧಿ ವಿಷಯಗಳನ್ನು ಉಲ್ಲೇಖಿಸಿದ್ದಾರೆ.

**ಸಿನ್ಹಾ. ಪಿ.ಸಿ 1998 ತಮ್ಮ ಶೀರ್ಷಿಕಾ ಬರವಣಿಗೆಯಾದ *"ಟೂರಿಸಂ ಎವಲ್ಯೂಷನ್, ಸ್ಕೋಪ್, ನೇಚರ್ ಅಮಡ್ ಆರ್ಗನೈಸೆಷನ್"*** ಪ್ರವಾಸಿ ಉದ್ಯಮವನ್ನು ಕುರಿತು ವ್ಯವಸ್ಥಿತವಾಗಿ ವಿವರಿಸಿದ್ದಾರೆ. ಪ್ರಾಚೀನ ಜಗತ್ತಿನ ಕಾಲಘಟ್ಟದಿಂದಲೂ ಬೆಳೆದು ಬಂದ ಪ್ರವಾಸಿ ಮಾರ್ಗವನ್ನು ಪ್ರಸ್ತುತಪಡಿಸಿದ್ದಾರೆ. ವರ್ತಮಾನ ಮತ್ತು ಭವಿಷ್ಯ ದಿನಗಳಲ್ಲಿ ಪ್ರವಾಸಿ ಉದ್ಯಮದ ಸಂಬಂಧ ಹಾಗೂ ಪ್ರವಾಸೋದ್ಯಮದ ಸ್ವರೂಪ, ಸಂಘಟನೆಯನ್ನು ವಿವರಿಸಿದ್ದಾರೆ. ಸಂಘಟನೆಯ ಕೌಶಲ್ಯ ಮೂಲಕ ಪ್ರವಾಸಿ ಉದ್ಯಮದ ಬೆಳವಣಿಗೆಯನ್ನು ತಿಳಿಸಿದ್ದಾರೆ.

**ಪೆರೀ,ಕೆ ಸಿಂಗ್ 1998 ರ ಗ್ರಂಥ *"ಫಿಫ್ಟೀ ಇಯರ್ಸ್ ಆಪ್ ಇಂಡಿಯನ್ ಟೂರಿಸಂ"*** ಸ್ವಾತಂತ್ರ್ಯಾನಂತರದ ಭಾರತದ ಪ್ರವಾಸೋದ್ಯಮದ ನೆಲೆಗಟ್ಟಿನಲ್ಲಿ ತಿಳಿಸಿದ್ದಾರೆ. 1947 ರಿಂದ 1997ರ ಅವಧಿಯ ಪ್ರಾರಂಭದ ದಿನದಿಂದಲೂ ಬೆಳವಣಿಗೆಯ ಹಂತದವರೆಗಿನ ಸನ್ನಿವೇಶಗಳನ್ನು ಸ್ಪಷ್ಟಯುತವಾಗಿ ಅರ್ಥೈಸಿದ್ದಾರೆ. ಪ್ರಯೋಗಾತ್ಮಕ ಸಮಸ್ಯೆಗಳು ಮತ್ತು ಐವತ್ತು ವರ್ಷ ಅವಧಿಯ ಸರ್ಕಾರಿ ನಿಲುವುಗಳನ್ನು ತಿಳಿಸಿದ್ದಾರೆ. ಭೌಗೋಳಿಕ ಮತ್ತು ಪ್ರಾಕೃತಿಕ ಮಹತ್ವದ ಸ್ಥಳಗಳ ಪಟ್ಟಿಯೊಂದಿಗೆ ಅವುಗಳ ವಿಶ್ಲೇಷಣೆಯನ್ನು ಮಾಡಿದ್ದಾರೆ.

**ಪ್ರವೀಣ್ ಸೇಥಿ 1999 ರ *"ಸ್ಟಾಟಜೀಸ್ ಫಾರ್ ದಿ ಫ್ಯೂಚರ್ ಆಫ್ ಟ್ರಾವೆಲ್ ಅಂಡ್ ಟೂರಿಸಂ"*** ಪ್ರವಾಸಿ ಉದ್ಯಮದ ಬೆಳವಣಿಗೆಯ ಹಂತಗಳ ಕುರಿತು ತಿಳಿಸಿದ್ದಾರೆ. ಭವಿಷ್ಯದ ದೃಷ್ಟಿಕೋನದೊಂದಿಗೆ ಉದ್ಯಮ ಮತ್ತು ಅದರ ಅನುಸರಣೆಗೆ ಉತ್ತಮ ಕ್ರಮವಹಿಸಿದ್ದಾರೆ.

ಪ್ರಧಾನವಾಗಿ ಕೃತಿಯು ಭವಿಷ್ಯದ ನಿರ್ಣಯಗಳನ್ನು ಮತ್ತು ಹಂತಗಳು, ತತ್‌ಕ್ಷಣದಲ್ಲಿ ಅಳವಡಿಸಿಕೊಳ್ಳಲಾಗುವ ತಂತ್ರಗಾರಿಕೆಯು ಪ್ರವಾಸಿ ಉದ್ಯಮ ಮತ್ತು ಭವಿಷ್ಯ ವಿಚಾರಂಗಳನ್ನು ಚರ್ಚಿಸಿದ್ದಾರೆ.

**ಶರ್ಮ, ಜೆ.ಕೆ 2000 ರ ಕೃತಿ *"ಟೂರಿಸಂ ಪ್ಲಾನಿಂಗ್ ಅಂಡ್ ಡೆವಲಪ್‌ಮೆಂಟ್, ಎ ನ್ಯೂ ಪರ್ಸ್ಪೆಕ್ಟಿವ್"*,** ಇದರಲ್ಲಿ ಪ್ರವಾಸ ಉದ್ಯಮವಾಗಿ ಯೋಜನೆ ಮತ್ತು ಬೆಳವಣಿಗೆ ಹೊಂದುವ ದೃಷ್ಟಿಕೋನ, ಉದ್ಯಮವು ಉತ್ತಮ ಭವಿಷ್ಯ ನಿರ್ಣಯದ ಯೊಜನೆಯನ್ನು ರೂಪಿಸುವ ಅಗತ್ಯತೆ ಮತ್ತು ಮುಂಬರುವ ಜನತೆಗೆ ಅಗತ್ಯವಾದ ಆಧುನಿಕ ಬೆಳವಣಿಗೆಯ ವಿಚಾರಗಳನ್ನು ತಿಳಿಸಿದ್ದಾರೆ.

**ಶರ್ಮ.ಜೆ.ಕೆ 2000 ರ ಗ್ರಂಥ *"ಟೂರಿಸಂ ಪ್ಲಾನಿಂಗ್ ಅಂಡ್ ಡೆವಲಪ್‌ಮೆಂಟ್, ಡಿಸೈನ್ ಫಾರ್ ಎಕೋಲಾಜಿಕಲ್ ಸಸ್ಟೈನಬಲಿಟೀ"*** ಪರಿಸರ ಸುಸ್ಥಿರತೆಯ ದೃಷ್ಟಿಕೋನ ಮತ್ತು ಪರಿಸರ ಸೂಕ್ಷ್ಮತೆಯಿಂದಾಗಿ ಪ್ರವಾಸವು ಹೇಗೆ ಬೆಳವಣಿಗೆ ಹೊಂದುತ್ತಾ ಸಾಗಿದೆ, ಭವಿಷ್ಯದ ಸವಾಲುಗಳನ್ನು ಹಾಗೂ ವಿಧಾನದ ಸಂರಚನೆಯೊಂದಿಗೆ ಪರಿಸರ ಸುಸ್ಥಿರತೆಯನ್ನು ತಿಳಿಸಿದ್ದಾರೆ. ಗ್ರಂಥಕಾರು ಹೇಳುತ್ತಾರೆ, ಪ್ರಪಂಚದಲ್ಲಿ ಭಾರತದ ಮಟ್ಟದಲ್ಲಿ ಸಂಘಟಿತವಲ್ಲದ ಪ್ರವಾಸೋದ್ಯಮ ಕಂಡುಬರುತ್ತದೆ. ಪ್ರವಾಸ ಉದ್ಯಮವು ಯೋಜಿತವಾಗಿದ್ದು, ಅದೊಂದು ತಾತ್ಕಾಲಿಕವಲ್ಲದ ಅಂಶವಾಗಿದೆ.

**ಸಾಲ್ಹಾ ವಹಾಬ್ ಅಂಡ್ ಕ್ರಿಸ್ಟೋಪರ್.ಪಿ.ಕೋಪರ್ 2001 *"ಟೂರಿಸಂ ಇನ್ ದಿ ಎಜ್ ಆಫ್ ಗ್ಲೋಬಲೈಜೆಷನ್"*,** ಪ್ರಸ್ತುತ ಕಾಲಮಾನದಲ್ಲಿ ಪ್ರವಾಸದ ಉಪಯೋಗಗಳು ಹಾಗೂ ಜಗತ್ತು ಇಂದು ಒಂದು ಹಳ್ಳಿಯಾಗಿದ್ದು, ಸಂವಹನವು ತನ್ನ ಸ್ಥಾನವನ್ನು ಮೀರುವ ಮುಖಾಂತರ ಪ್ರವಾಸದ ಮಾರ್ಗವಾಗಿದೆ. ಕೃತಿಯು ಜಾಗತಿಕ ಪ್ರವಾಸದ ಸಂಬಂಧ ಮಾಹಿತಿ ನೀಡಿದೆ. ಪ್ರಪಂಚದ ಭವಿಷ್ಯದ ಬೆಳವಣಿಗೆಯ ಸಂಬಂಧವನ್ನು ತಿಳಿಸಿದೆ.

**ರ್ಫೈನ್ ಅಂಡ್ ಲೋಥಾ 2004 ರ ಗ್ರಂಥ *"ಫಂಡಮೆಂಟಲ್ಸ್ ಆಫ್ ಟೂರಿಸಂ ಸಿಸ್ಟಮ್"*** ಮೂಲಭೂತ ತತ್ವಗಳ ಮುಖ್ಯ ಪ್ರವಾಸೋದ್ಯಮದ ಅಭಿವೃದ್ದಿ ಮತ್ತು ಪ್ರವಾಸೋಧ್ಯಮದ ನಿಯಮಗಳನ್ನು ಒಳಗೊಂಡಿರುವಂತಹ ಈ ಪುಸ್ತಕದಲ್ಲಿ ಹಲವಾರು ಮಾಹಿತಿಗಳನ್ನು ಈ ಮಹಾ ಗ್ರಂಥದಲ್ಲಿ ಅಳವಡಿಸಿಕೊಂಡಿರುತ್ತೇನೆ. ಆದ್ದರಿಂದ ಪ್ರವಾಸೋಧ್ಯಮವು ಯಾವ ರೀತಿ ಅಭಿವೃದ್ದಿಯಾಗಬೇಕಾಗಿದೆ ಎಂಬುದನ್ನು ಈ ಪುಸ್ತಕದಿಂದ ತಿಳಿಯಬಹುದು.

**ಕಾಮ್ರಾ, ಕೆ.ಕೃಷ್ಣ 2004 ರ ಶೀರ್ಷಿಕಾ ಪುಸ್ತಕ *"ಎಕನಾಮಿಕ್ಸ್ ಆಫ್ ಟೂರಿಸಂ"*** ಪ್ರವಾಸದ ಉದ್ಯಮದಲ್ಲಿನ ಆರ್ಥಿಕಾಂಶಗಳ ಹಾಗೂ ಆಧುನಿಕ ಅನ್ವೇಷಣೆಯ ಪ್ರವಾಸ ಅಭಿವೃದ್ಧಿ, ಉದ್ಯಮವು ಮೂಲಭೂತ ತತ್ವಗಳು, ಆರ್ಥಿಕ ಕಾಳಜಿಗಳ ಕ್ರಮವಹಿಸಿದ್ದಾರೆ. ಈ ಪುಸ್ತಕದಲ್ಲಿ ಪ್ರವಾಸೋಧ್ಯಮ ಎಂಬುದು ಯಾವರೀತಿ ಅಭಿವೃದ್ಧಿಯಾಗಬೇಕು, ಅಭಿವೃದ್ಧಿಯಾದಂತಹ ಸ್ಥಳವು ಯಾವ ರೀತಿ ಆಕರ್ಷಣೆ ಮಾಡಬೇಕೆಂಬುದು ಈ ಪುಸ್ತಕದಲ್ಲಿ ತಿಳಿಯಬಹುದು.

**ನರಸೈಹಾ ಲಕ್ಷ್ಮೀ, ಎಂ.2004 *"ಗ್ಲೋಬಲೈಜೆಷನ್ ಅಂಡ್ ಸಸ್ಟೈನಬಲ್ ಟೂರಿಸಂ ಡೆವಲಪ್‌ಮೆಂಟ್"*** ಪ್ರವಾಸೋದ್ಯಮದ ಬೆಳವಣಿಗೆಯ ಕುರಿತು ನಿರೂಪಿಸಿದ್ದಾರೆ. ಸುಸ್ಥಿರ ಪ್ರವಾಸೋದ್ಯಮವನ್ನು ಚರ್ಚಿಸುತ್ತಾ, ರಾಷ್ಟ್ರೀಯ ಮತ್ತು ಅಂತರ್‌ರಾಷ್ಟ್ರೀಯ ಪ್ರವಾಸೋದ್ಯಮವು ಉದ್ಯೋಗ ಮತ್ತು ಆರ್ಥಿಕ ಬೆಳವಣಿಗೆ, ಬಹುಆಯಾಮಗಳ ಮೂಲಕ ವಿದೇಶಿ ವಿನಿಮಯ, ಆಕರ್ಷಣೆಯು ಜಗತ್ತಿನಲ್ಲಿ ಪ್ರಧಾನ ಪ್ರವಾಸಿ ಸ್ಥಾನದಲ್ಲಿದೆ. ಪ್ರಸ್ತುತ ಜಗತ್ತಿನೊಂದಿಗೆ ಬಹುಮುಖ ಹಿನ್ನೆಲೆಯ, ಸಮರ್ಥ ಹಾಗೂ ಆಕರ್ಷಣಾ ಮನೋಭಾವವನ್ನು ಜನರು ಸೆಳೆಯುತ್ತಾರೆ.

**ಪ್ರವೀಣ್ ನೇಥಿ 2005 ರ ಕೃತಿ *"ಹ್ಯಾಂಡ್ ಬುಕ್ ಆಫ್ ಮಾರ್ಡನ್ ಟೂರಿಸಂ"*** ಅತೀ ವೇಗವಾಗಿ ಆಧುನಿಕ ಮಾರ್ಗದಲ್ಲಿ ಪ್ರವಾಸವು ಬೆಳವಣಿಗೆ ಹೊಂದುವುದು. ಅದರ ಪರಿಣಾಮವನ್ನು ಕುರಿತು ಮಾಹಿತಿ ನೀಡುತ್ತದೆ. ಈ ಪುಸ್ತಕದಲ್ಲಿ ಆಧುನಿಕ ಪ್ರವಾಸೋಧ್ಯಮವು ಯಾವ ರೀತಿ ಬೆಳೆಯಬೇಕು, ಯಾವರೀತಿ ಅಭಿವೃದ್ಧಿಯಾಗಬೇಕೆಂಬುದು ಈ ದ್ವಿತೀಯ ಆಕರದಲ್ಲಿ ತಿಳಿಯಬಹುದು.

***ಖಾನ್* ಎಂ.ಎ 2005 ರ *ಗ್ರಂಥ "ಇನ್‌ಟ್ರೊಡಕ್ಷನ್ ಟೂ ಟೂರಿಸಂ"*** ಪ್ರವಾಸೋದ್ಯಮದ ಮೂಲಭೂತ ತತ್ವದ ದೃಷ್ಟಿಕೋನದ ಚಟುವಟಿಕೆಗಳು, ಪ್ರಸ್ತುತ ಅಧ್ಯಯನದೊಂದಿಗೆ ಮೂಲ ಘಟಕಗಳ ರಚನಾತ್ಮಕತೆ ಸಹಕಾರಿಯಾಗಿದೆ. ಪ್ರವಾಸೋಧ್ಯಮದ ಈ ಪುಸ್ತಕವು ಪ್ರವಾಸೋಧ್ಯಮ ಎಂಬುದು ಯಾವ ರೀತಿಯಲ್ಲಿ ಪ್ರವಾಸಿಗರು ತಿಳಿಯಬಹುದು ಮತ್ತು ಪ್ರವಾಸೋಧ್ಯಮದಿಂದ ಆಗುವಂತಹ ಅನುಕೂಲಗಳನ್ನು ಈ ಪುಸ್ತಕದಿಂದ ತಿಳಿಯಬಹುದು.

***ಖಾನ್* ಎಂ.ಎ 2006 *"ಪ್ರಿನ್ಸಿಪಲ್ ಆಫ್ ಟೂರಿಸಂ ಡೆವಲಪ್‌ಮೆಂಟ್" ಖಾನ್*ರವರು** ಓದುಗನನ್ನು ಮೂಲ ತತ್ವಗಳ ಬೆಳವಣಿಗೆಯ ಮೂಲಕ ಪ್ರವಾಸೋದ್ಯಮದಲ್ಲಿ ಬೆಳವಣಿಗೆಯ ಅಯಾಮಗಳನ್ನು ಚರ್ಚಿಸಿದ್ದು, ಪ್ರವಾಸವನ್ನು ಕುರಿತು ಹಾಗೂ ಅದರ ಬೆಳವಣಿಗೆಯನ್ನು ತಿಳಿಸಿದ್ದಾರೆ.

**ರವೇ ಚೌಹನ್ 2006 ರ "*ಹೆರಿಟೇಜ್ ಅಂಡ್ ಕಲ್ಚರಲ್ ಟೂರಿಸಂ*"** ಸಂಸ್ಕೃತಿ ಮತ್ತು ಪ್ರೇಕ್ಷಣೀಯ ಸ್ಥಳಗಳನ್ನು ಉತ್ತೇಜಿಸುವ ಮೂಲಕ ಪ್ರವಾಸವನ್ನು ಬೆಳೆಸುವುದು. ಪ್ರಸ್ತುತ ಪ್ರವಾಸೋದ್ಯಮವನ್ನು ಅಧ್ಯಯನ ಮಾಡಲು ಇದು ಸೂಕ್ತವಾಗಿದೆ. ಈ ದ್ವಿತೀಯ ಆಕಾರದಲ್ಲಿ ಪ್ರವಾಸೋಧ್ಯಮದ ಒಂದು ಬೆಳಬಣಿಗೆ ಮತ್ತು ಸಂಸ್ಕೃತಿಯನ್ನು ಹಾಗೂ ಪ್ರೇಕ್ಷಣೀಯ ಸ್ಥಳಗಳು ಪ್ರವಾಸಿಗರನ್ನು ಯಾವ ರೀತಿ ಆಕರ್ಷಿಸಬೇಕೆಂಬುದು ಈ ಪುಸ್ತಕದಿಂದ ತಿಳಿಯಬಹುದು.

**ನೇಗಿ ಜಿ.ಎಸ್ 2006 ರವರ *"ರೂರಲ್ ಟೂರಿಸಂ ಅಂಡ್ ಎಕನಾಮಿಕ್ ಗ್ರೋಥ್"*** ಗ್ರಾಮಾಂತರ ಪ್ರದೇಶದಲ್ಲಿ ಕಂಡುಬರುವಂತಹ ಕೆಲವು ಪ್ರವಾಸಿ ಮತ್ತು ಗ್ರಾಮೀಣ ಆರ್ಥಿಕ ಬೆಳವಣಿಗೆಯನ್ನು ಗುರುತಿಸುವ ಮೂಲಕ ಸರ್ಕಾರದ ನಿರ್ಲಕ್ಷ್ಯತೆ ಮತ್ತು ಜನರ ಯೋಜಿತ ಸ್ಥಳಗಳನ್ನು ಯೋಗ್ಯಗೊಳಿಸಿ, ಮೂಲಭೂತ ಸೌಕರ್ಯ, ಸ್ಥಳೀಯ, ಸ್ಥಳೀಯ ಸಂಘಟನೆ ಮತ್ತು ಪ್ರವಾಸದ ಪ್ರಜ್ಞೆ ಮುಖ್ಯವಾಗಿ ಆರ್ಥಿಕ ಕ್ಷೇತ್ರದ ಬೆಳವಣಿಗೆಯಲ್ಲಿ ಅಗತ್ಯಯುತವಾಗಿವೆ.

**ಬದಾಮ್ ಬಿ.ಎಸ್ ಮತ್ತು ಬಾಥ್.ಹೆಚ್., 2007 ಗ್ರಂಥ "*ಟ್ರಾವೆಲ್ ಏಜೆನ್ಸಿ ಅಂಡ್ ಟೂರಿಸಂ ಮ್ಯಾನೇಜ್‌ಮೆಂಟ್*"** ಪ್ರವಾಸೋದ್ಯಮ ಇಲಾಖೆಯನ್ನು ಟ್ರಾವೆಲ್ ಏಜೆನ್ಸಿ ನಿರ್ವಹಿಸುತ್ತದೆ. ಆಧುನಿಕ ಕಾಲವು ಟ್ರಾವೆಲ್ ಎಜನ್ಸಿಯನ್ನು ಹೆಚ್ಚಿಸುವಲ್ಲಿ ಹಾಗೂ ಟ್ರಾವೆಲ್ ಎಜೆನ್ಸಿಗಳ ಪಟ್ಟಿಯ ಜೊತೆಗೆ ಪ್ರವಾಸಿ ಉದ್ಯಮದ ನಿರ್ವಹಣೆಯ ಮತ್ತು ಮೂಲಭೂತ ಸೌಕರ್ಯಗಳ ಬೆಳವಣಿಗೆ, ಇವುಗಳ ನೈಜ ದೃಷ್ಟಿಕೋನವೆ ಪ್ರವಾಸಿ ಏಜೆನ್ಸಿಯ ಕಾರ್ಯವಾಗಿದೆ.

**ವಿಜಯ್ ಕುಮಾರ್ ಎ 2009, ಅಗ್ರಮಾನ್ಯ ಕಾರ್ಯವಾದ "*ಇಂಡಿಯನ್ ಟೂರಿಸಂ ಇಂಡಸ್ಟ್ರೀ ಇನ್ 21 ನೇ ಸೆಂಚುರೀ, ಚಾಲೆಂಜಸ್ ಅಂಡ್ ರೆಸ್ಪಾನ್ಸ್*"** ಪ್ರಸ್ತುತ ಪ್ರವಾಸೋದ್ಯಮದ ಸವಾಲು ಮತ್ತು ಪರಿಹಾರಗಳನ್ನು ಮಾತನಾಡುತ್ತಾರೆ. ಮೂಲಸೌಕರ್ಯ ಬೆಳವಣಿಗೆ ಮತ್ತು ಪರಿಸರದ ಪರಿಹಾರಗಳು, ಸ್ಪಷ್ಟಯುತವಾದ ಇತ್ತೀಚಿನ ಪ್ರವಾಸದಬೆಳವಣಿಗೆಯನ್ನು ವಿವರಿಸಿದ್ದಾರೆ.

**ಅನುರಾಗ್ ಮತೂರ್ 2016 ಶೀರ್ಷಿಕೆ "*ಇಂಡಿಯನ್ ಟೂರಿಸಂ*"** ಎಂಬ ಕೃತಿಯು ಪ್ರವಾಸಿ ಸ್ಥಳಗಳ ಪಟ್ಟಿಯೊಂದಿಗೆ ಸ್ಥಳಗಳ ಮಹತ್ವವನ್ನು ವಿವರಿಸಲಾಗಿದು, ಪ್ರಮುಖವಾದ ಭಾರತದ ಸ್ಥಳಗಳನ್ನು ಅವುಗಳ ಮಾರ್ಗದರ್ಶನವನ್ನು ಅರ್ಥೈಸಿಕೊಂಡು ನಿರೂಪಿಸಲಾಗಿದೆ. ಈ ಪುಸ್ತಕದಲ್ಲಿ ಭಾರತ ಪ್ರವಾಸೋಧ್ಯಮದ ಬಗ್ಗೆ ಹಲವಾರು ರೀತಿಯಲ್ಲಿ ತಿಳಿಸಲಾಗಿದೆ. ಆದ್ದರಿಂದ ಪ್ರವಾಸೋಧ್ಯಮವು ಬೆಳವಣಿಗೆಯಾಗಲು ಯಾವರೀತಿಯಲ್ಲಿ ಸಹಾಯಕವಾಗಿದೆ ಎಂಬುದನ್ನು ತಿಳಿಯಬಹುದು.

**ರಜತ್ ಗುಪ್ತ, ಸಿಂಗ್ ನಿಶಾಂತ್, ಇಷ್ಟ ಕಿರಾರ್, ಮಹೇಶ್‌ಕುಮಾರ್ ಬೈರವ 2015 ರವರ "ಹಾಸ್ಪೆಟಲಿಟೀ ಅಂಡ್ ಟೂರಿಸಂ"** ಪ್ರವಾಸೋದ್ಯಮದ ಅಗತ್ಯತೆ ಹಾಗೂ ಅವಶ್ಯಕತೆಯನ್ನು ತಿಳಿಸಲಾಗಿದ್ದು, ಆರ್ಥಿಕ ಬೆಳವಣಿಗೆಯು ಪ್ರವಾಸೋದ್ಯಮ ಆಧುನಿಕ ಹಂತಗಳನ್ನು ಮೂಲದ ಪ್ರವಾಸದ ಉದ್ಯಮ ಮತ್ತು ಪ್ರವಾಸೋದ್ಯಮದ ಮುಂದಾಲೋಚನೆಯು ಪ್ರವಾಸದ ಸ್ವರೂಪವನ್ನು ಬೆಸೆದಿರುವುದನ್ನು ತಿಳಿಸಲಾಗಿದೆ.

**ವೇಣು ವಾಸುದೇವನ್, ವಿಜಯಕುಮಾರ್.ಬಿ, ಸರೂಪ್ ರಾಯ್.ಬಿ.ಆರ್ 2017 ರವರ "*ಆಯನ್ ಇನ್‌ಟ್ರೋಡಕ್ಷನ್ ಟೂ ದಿ ಬಿಸನೆಸ್ ಆಫ್ ಟೂರಿಸಂ*"** ಪ್ರವಾಸೋದ್ಯಮ ಎಂಬುದು ಆಧುನಿಕ ಪ್ರವಾಸೋಧ್ಯಮದಲ್ಲಿ ಆರ್ಥಿಕತೆ ಎಂಬುದು ಯಾವ ಮಟ್ಟದಲ್ಲಿ ಇದೆ ಎಂಬುದು ಈ ಪುಸ್ತಕದಿಂದ ತಿಳಿಯಬಹುದಾಗಿದೆ. ಈ ಪ್ರವಾಸೋಧ್ಯಮದಿಂದ ಸರ್ಕಾರಕ್ಕೆ ಆರ್ಥಿಕ ವಾಗಿಯೂ ಸಹಕಾರಿಯಾಗಿದೆ.

## 1.12 ಅಧ್ಯಾಯಗಳು

ಪ್ರಥಮ ಅಧ್ಯಯದಲ್ಲಿ ಮಹಾ ಪ್ರಬಂಧ ಅಧ್ಯಾಯನ ವಿಧಾನವನ್ನು ತಿಳಿಸಲಾಗಿದೆ. ಮತ್ತು ಸಂಶೋಧನಾ ಸಮಸ್ಯೆ ಮಹತ್ವ ಬೌಗೋಳಿಕ ಅಂಶಗಳ ಬಗ್ಗೆ ಮಾಹಿತಿಯನ್ನು ತಿಳಿಸಲಾಗಿದೆ. ಮಹಾಪ್ರಬಂಧದ ಸಾಹಿತ್ಯ, ಸಮೀಕ್ಷೆಯನ್ನು ಪುಸ್ತಕಗಳ ವಿಮರ್ಶೆಯನ್ನು ಮಾಡಿ ಈ ಅಧ್ಯಯಕ್ಕೆ ಬೇಕಾಗಿರುವ ಪ್ರಾಥಮಿಕ ದ್ವಿತೀಯ ಆಕಾರಗಳನ್ನು ಕಲೆಹಾಕಿ ಈ ಅಧ್ಯಯವನ್ನು ರಚಿಸಲಾಗಿದೆ.

ಎರಡನೇ ಅಧ್ಯಾಯದಲ್ಲಿ ಬೆಂಗಳೂರು ಗ್ರಾಮಾಮತರ ಜಿಲ್ಲೆಯ ಐತಿಹಾಸಿಕ ಪ್ರವಾಸೋದ್ಯಮದ ಉಗಮ ಮತ್ತು ವ್ಯಾಖ್ಯಾನಗಳ ಬಗ್ಗೆ ತಿಳಿಸಲಾಗಿದೆ. ಅದಲ್ಲದೆ ಪ್ರಾಚೀನ ಕಾಲದ ಪ್ರವಾಸ, ಮಧ್ಯಕಾಲೀನ ಮತ್ತು ಆಧುನಿಕ ಪ್ರವಾಸೋಧ್ಯಮದ ಬಗ್ಗೆ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಇತಿಹಾಸದ ಬಗ್ಗೆ ವಿವರವಾಗಿ ಎರಡನೇ ಅಧ್ಯಾಯದಲ್ಲಿ ತಿಳಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಐತಿಹಾಸಿಕ ಹಿನ್ನೆಲೆ, ರಾಜಮನೆತನಗಳು ಮತ್ತು ಪಾಳೇಯಗಾರರ ಆಡಳಿತಕ್ಕೆ ಸಂಬಂಧಿಸಿದ ಸ್ಥಳಗಳ ಬಗ್ಗೆ ಅಧ್ಯಯನ ಮಾಡಲಾಗಿದೆ. ಹಾಗೂ ಐತಿಹಾಸಿಕ ದೇವಾಲಯಗಳು, ಕೋಟೆಗಳು, ಊರುಗಳ ಬಗ್ಗೆಯೂ ಸಹ ಚರ್ಚಿಸಲಾಗಿದೆ. ಇದರಿಂದ ಇತ್ತೀಚಿನ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಪ್ರವಾಸೋದ್ಯಮವು ಯಾವ ರೀತಿ ಹಿನ್ನೆಲೆಯನ್ನು ಒಳಗೊಂಡಿದೆ ಎಂಬುದನ್ನು ತಿಳಿಯಬಹುದು.

ನಾಲ್ಕನೇ ಅಧ್ಯಾಯ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಕೈಗಾರಿಕೆಗಳ ಆರ್ಥಿಕತೆಯಿಂದ ಆಗುವಂತಹ ಅಭಿವೃದ್ದಿ ಹಾಗೂ ಮೂಲಭೂತ ಸೌಕರ್ಯಗಳಾದ ರಸ್ತೆ, ರೈಲು, ವಾಯು ಸಾರಿಗೆಗಳು, ಸಂಪರ್ಕ ವ್ಯವಸ್ಥೆ, ವಸತಿಗೃಹಗಳು ಇನ್ನೂ ಮುಂತಾದವುಗಳನ್ನು ಚರ್ಚಿಸಲಾಗಿದೆ. ಇದರಿಂದ ಪ್ರವಾಸೋದ್ಯಮ ಬೆಳವಣಿಗೆಗೆ ನೀಡಿದ ಕೊಡುಗೆ ಮತ್ತು ಅಭಿವೃದ್ದಿಗೆ ಇಲಾಖೆಗಳ ಬಗ್ಗೆ ವಿಮರ್ಶಾತ್ಮಕ ಅಧ್ಯಯನ ಮಾಡಲಾಗಿದೆ.

ಐದನೇ ಅಧ್ಯಾಯನದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಹಲವಾರು ಪರಿಸರದಿಂದ ಕೂಡಿರುವಂತಹ ಸ್ಥಳಗಳ ಬಗ್ಗೆ ಚರ್ಚಿಸಲಾಗಿದೆ ಇದರಲ್ಲಿ ನದಿಗಳ ಪಾತ್ರ ಬಗ್ಗೆಯೂ ಚರ್ಚಿಸಲಾಗಿದೆ ಅಲ್ಲದೇ ಜಿಲ್ಲೆಯ ಪ್ರಮುಖ ಪ್ರಾಕೃತಿಕ ದೃಶ್ಯಗಳು, ಬೆಟ್ಟಗಳು, ಗಿರಿಶಿಖರಗಳು, ವಾಸಸ್ಥಳಗಳು, ಮತ್ತು ಪ್ರವಾಸಿ ಆಕರ್ಷಣೆಗಳಾಗಿರುವ ಬಗ್ಗೆ ಅಧ್ಯಯನ ಮಾಡಲಾಗಿದೆ.

ಆರನೇ ಅಧ್ಯಾಯನದಲ್ಲಿ ಜಿಲ್ಲೆಯ ಪ್ರವಾಸೋದ್ಯಮ ಒಳಪಡಿಸಲು ಟೀಕೆ – ಟಿಪ್ಪಣಿಗಳು ಸಲಹೆ ಸೂಚನೆಗಳ ಜನತೆಗೆ 5 ಅಧ್ಯಾಯಗಳಿಗೆ ಸಂಬಂಧಿಸಿದ ವಿಮರ್ಶೆಯನ್ನು ಮಾಡಲಾಗಿದೆ. ಅಧ್ಯಯನದಲ್ಲಿ ಕಂಡುಕೊಳ್ಳಲಾದ ಮಾಹಿತಿಗಳನ್ನು ಹಂಚಿಕೊಳ್ಳುವ ಪ್ರಯತ್ನವನ್ನು ಮಾಡಲಾಗುತ್ತಿದೆ.

ನಂತರದ ಪುಟಗಳಲ್ಲಿ ಈ ಮಹಾ ಪ್ರಬಂಧಕ್ಕೆ ದಾಖಲೆಗಳು ಆಗಿರುವ ಗ್ರಂಥಋಣದ ಹೆಸರು, ಛಾಯಾಚಿತ್ರಗಳ ಪಟ್ಟಿ ಮತ್ತು ಛಾಯಾಚಿತ್ರಗಳು ಒಳಗೊಂಡಿರುತ್ತದೆ.

* * * * * * * * * * * * * * * *

## ಕೊನೆ ಟಿಪ್ಪಣಿ

(1) ವೀರಭದ್ರಪ್ಪ, 2008, *ಕರ್ನಾಟಕ ಪ್ರವಾಸೋದ್ಯಮದ ಇತಿಹಾಸದ ಒಂದು ಅವಲೋಕನ*, ಅಂಕಿತ ಪಬ್ಲಿಕೇಷನ್, ಬೆಂಗಳೂರು. ಪು.ಸಂ. 5

(2) ಅದೇ, ಪು.ಸಂ. 7

(3) ಅದೇ, ಪು.ಸಂ. 8

(4) *Bangalore Rural District Disaster Management Plan* 2015–16. ಪು.ಸಂ. 7

(5) ಅದೇ, ಪು.ಸಂ. 8

(6) ಚಂದ್ರಶೇಖರ್.ಎನ್, 2018 *ಕರ್ನಾಟಕ ಕೈಪಿಡಿ*, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು. ಪು.ಸಂ. 17–18

(7) ಅದೇ, ಪು.ಸಂ. 18–19

(8) ಬಾಲಸುಬ್ರಮಣ್ಯ, 2010 *ನೆಲಮಂಗಲ ತಾಲ್ಲೂಕು ದರ್ಶನ,* ಸುಭಾಷ್ ಪಬ್ಲಿಕೇಷನ್, ಬೆಂಗಳೂರು. ಪು.ಸಂ. 10–11

(9) *Bangalore Rural District Disaster Management Plan* 2015. ಪು.ಸಂ. 16–19

(10) ಅದೇ, ಪು.ಸಂ. 20

(11) ಅದೇ, ಪು.ಸಂ. 19

(12) ಚಂದ್ರಶೇಖರ್.ಎನ್, 2018 *ಕರ್ನಾಟಕ ಕೈಪಿಡಿ*, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು. ಪು.ಸಂ. 17–18

(13) *ಬೆಂಗಳೂರು ಗ್ರಾಮಾಂತರ ಜಿಲ್ಲೆ ಅಂಕಿ ಅಂಶ ನೋಟ* 2017–18. ಪು.ಸಂ. 28–29

(14) *Bangalore Rural District Disaster Management Plan* 2015–16. ಪು.ಸಂ. 19

(15) *ಬೆಂಗಳೂರು ಗ್ರಾಮಾಂತರ ಜಿಲ್ಲೆ ಅಂಕಿ ಅಂಶ ನೋಟ* 2017–18. ಪು.ಸಂ. 26–51

(16) ಅದೇ, ಪು.ಸಂ. 33

(17) ಅದೇ, ಪು.ಸಂ. 35

(18) *Bangalore Rural District Disaster Management Plan* 2015-16. ಪು.ಸಂ. 18–19

(19) ಅದೇ, ಪು.ಸಂ. 19–20

(20) ಅದೇ, ಪು.ಸಂ. 20

(21) ಅದೇ, ಪು.ಸಂ. 21

(22) ಚಂದ್ರಶೇಖರ್.ಎನ್, 2018 *ಕರ್ನಾಟಕ ಕೈಪಿಡಿ*, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಪು.ಸಂ. 33–34

(23) *ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಅಂಕಿ ಅಂಶಗಳ ನೋಟ* 2017–18. ಪು.ಸಂ. 60–61

(24) *Bangalore Rural District Disaster Management Plan* 2015-16. ಪು.ಸಂ. 90

(25) ಅದೇ, ಪು.ಸಂ. 5

(26) ಚಂದ್ರಶೇಖರ್.ಎನ್, 2018 *ಕರ್ನಾಟಕ ಕೈಪಿಡಿ*, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು. ಪು.ಸಂ. 5–6

(27) *ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಅಂಕಿ ಅಂಶಗಳ ನೋಟ* 2017–18. ಪು.ಸಂ. 11

(28) ಅದೇ, ಪು.ಸಂ. 12

(29) ಅದೇ, ಪು.ಸಂ. 13

(30) ಅದೇ, ಪು.ಸಂ. 14

# ಅಧ್ಯಾಯ – 2

# ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಐತಿಹಾಸಿಕ ಪ್ರವಾಸೋದ್ಯಮದ ಹಿನ್ನೆಲೆ

## 2.1 ಪೀಠಿಕೆ

ಮೂಲಭೂತವಾಗಿ ಯಾವುದೇ ವ್ಯಕ್ತಿ ಜ್ಞಾನವನ್ನು ಸಂಪಾದಿಸಬೇಕಾದರೆ ಗ್ರಂಥಗಳನ್ನು ಅಧ್ಯಯನ ಮಾಡಬೇಕು ಅಥವಾ ಆಯಾ ಪ್ರದೇಶಗಳನ್ನು ಮತ್ತು ಅಲ್ಲಿಯ ಪ್ರೇಕ್ಷಣೀಯ ಸ್ಥಳಗಳನ್ನು ಅರ್ಥಮಾಡಿಕೊಳ್ಳಲು ಆಯಾ ಪ್ರದೇಶದ ನೇರ ಪರಿಚಯ ಮಾಡಿಕೊಳ್ಳುಲು ಪ್ರತ್ಯಕ್ಷ ದರ್ಶನವೊಂದೆ ದಾರಿ. ಪ್ರವಾಸೋದ್ಯಮದ ಮೂಲ ಉದ್ದೇಶಗಳಲ್ಲಿ ಜ್ಞಾನಾರ್ಜನೆಯು ಒಂದು. ಜ್ಞಾನಾರ್ಜನೆಯನ್ನು ಪ್ರಮುಖ ಉದ್ದೇಶವನ್ನಾಗಿ ಹೊಂದಿದ ಪ್ರವಾಸೋದ್ಯಮ ಇತ್ತೀಚಿನ ದಿನಗಳಲ್ಲಿ ತನ್ನ ಮಹತ್ವವನ್ನು ಬದಲಾಯಿಸಿಕೊಳ್ಳುತ್ತಿದೆ ಎಂದು ಭಾವಿಸಲಾಗಿದೆ. ಆದರೆ ನಾವು ಭಾವಿಸುತ್ತಿರುವ ಹಲವಾರು ಪ್ರವಾಸೋದ್ಯಮದ ಮುಖಗಳನ್ನು ಅತಿ ಪ್ರಾಚೀನ ಕಾಲದಿಂದಲೂ ಜನ ಬಳಸುತ್ತಿದ್ದನ್ನು ಕಾಣಬಹುದಾಗಿದೆ.

ಪ್ರದೇಶದಿಂದ ಪ್ರದೇಶಕ್ಕೆ ಜನ ಸಂಚಾರ ಮಾಡುವ ಪರಿಪಾಠವನ್ನು ಶಿಲಾಯುಗದ ಆದಿ ಭಾಗದಿಂದಲೇ ಗುರುತಿಸಬಹುದು. ಆ ಕಾಲದಲ್ಲಿ ಆತನು ಯೋಗ್ಯ ವಾಸಸ್ಥಳ ಉತ್ತಮ ಆಹಾರ ಬೇಟೆಯ ಸಲಕರಣೆಗಳು ದೊರೆಯುವ ಪ್ರದೇಶಗಳಿಗಾಗಿ ತನ್ನ ಪ್ರಯಾಣವನ್ನು ನಡೆಸಿದನು. ಆ ಕಾಲದಿಂದ ನೂತನ ಶಿಲಾಯುಗದ ಕಾಲದ ಮಾನವನ ಸಂಸ್ಕೃತಿಯನ್ನು ಬೇಟೆಗಾರ ಮತ್ತು ಆಹಾರ ಸಂಗ್ರಹಣಕಾರನೆಂದು ಗುರುತಿಸಲಾಗಿದೆ. ಅಂದರೆ ಆ ಕಾಲ ಘಟ್ಟದಲ್ಲಿ ಮಾನವ ಪ್ರದೇಶದಿಂದ ಪ್ರದೇಶಕ್ಕೆ ಆಹಾರ ಮತ್ತು ಇತರ ಉತ್ತಮವಾದ ಜೀವನಾವಶ್ಯಕತೆಗಳ ಪ್ರದೇಶಗಳನ್ನು ಹುಡುಕಲು ಸಂಚರಿಸಿದನು.

ಭಾರತೀಯ ಇತಿಹಾಸವನ್ನು ಅದರಲ್ಲೂ ಪ್ರಾಗೈತಿಹಾಸವನ್ನು ಅಧ್ಯಯನ ಮಾಡಿರುವ ವಿದ್ವಾಂಸರುಗಳು ನೂತನ ಶಿಲಾಯುಗದ ಕಾಲಕ್ಕಾಗಲೇ ಹಡಗಿನಲ್ಲಿ ಸಂಚಾರ ಮಾಡುವ ಪರಿಪಾಠ ಬೆಳೆದಿತ್ತೆಂದು ದಾಖಲಿಸುತ್ತಾರೆ. ಹರಪ್ಪ ನಾಗಾರೀಕತೆಯ ಕಾಲದಲ್ಲಿ ಭಾರತೀಯರು ನೌಕಾಯಾನದ ಮೂಲಕ ಕಿಷ್, ಉರ್, ಲಾಗಾಸ್ ಮುಂತಾದ ಮಧ್ಯ ಪ್ರಾಚ್ಯದ ದೂರದ ಪ್ರದೇಶಗಳೊಂದಿಗೆ ವ್ಯಾಪಾರ ಮತ್ತು ಇತರ ಸಂಪರ್ಕಗಳನ್ನೊಂದಿದ್ದನ್ನು ಗುರುತಿಸಲಾಗಿದೆ[1]. ದಕ್ಷಿಣ ಭಾರತದ ಲೋಹ ಯುಗದ ಜನರು ಹರಪ್ಪ ಸಂಸ್ಕೃತಿಯ ಜನರೊಂದಿಗೆ ಸಂಪರ್ಕ ಹೊಂದಿದ್ದರೆಂದು ಪ್ರತಿಪಾದಿಸಲಾಗಿದೆ. ಇಷ್ಟಲ್ಲದೇ ಬೃಹತ್ ಶಿಲಾಯುಗದ ಜನರು ಮೆಡಿಟೇರಿಯನ್ ಪ್ರದೇಶದಿಂದ ವಲಸೆ ಬಂದು ಭಾರತದಾದ್ಯಂತ ಹರಡಿದರೆಂಬ ಸಿದ್ಧಾಂತ ಪ್ರಚಲಿತದಲ್ಲಿದೆ[2]. ಈ ಎಲ್ಲಾ ಹೇಳಿಕೆಗಳು ಮಾನವನು ಅತಿ ಪ್ರಾಚೀನ ಕಾಲದಿಂದಲೇ

ಪ್ರವಾಸವನ್ನು ಕೈಗೊಳ್ಳುತ್ತಿದ್ದನೆಂದು ದಾಖಲಿಸಿದ ಕೆಲವು ಉದಾಹರಣೆಗಳಷ್ಟೇ. ಆದರೆ ಇವುಗಳಲ್ಲಿನ ಕೆಲವು ಉಲ್ಲೇಖಗಳು ಇಂದಿನ ಪ್ರವಾಸೋದ್ಯಮದ ವ್ಯಾಪ್ತಿಯಲ್ಲಿ ಬರುವುದಿಲ್ಲವಾದರೂ ಪ್ರಯಾಣ ನಡೆದುದು ಖಚಿತವಾಗುತ್ತದೆ.

ಕರ್ನಾಟಕವನ್ನು ಆಳಿದ ಪ್ರಾಚೀನ ರಾಜಮನೆತನಗಳಲ್ಲಿ ಬಾದಾಮಿ ಚಾಲುಕ್ಯ ಮತ್ತು ಗಂಗರು, ಚೋಳರೊಂದಿಗೆ ರಾಜಕೀಯ ಹೋರಾಟದಲ್ಲಿ ಸಾಮ್ರಾಜ್ಯವನ್ನು ರಕ್ಷಿಸಿದರು. ಈ ಕಾರಣಗಳಿಂದಾಗಿ ಬೆಂಗಳೂರು ಗ್ರಾಮಾಂತರ ಪ್ರದೇಶವು ಚಾಲುಕ್ಯುರು, ಗಂಗರು ಆಳ್ವಿಕೆಗೆ ಒಳಪಟ್ಟಿತ್ತು ಎಂದು ತಿಳಿದುಬರುತ್ತದೆ. ಈ ಆಳ್ವಿಕೆಯ ಸಂದರ್ಭದಲ್ಲಿ ಹಲವಾರು ಐತಿಹಾಸಿಕ ದೇವಾಲಯಗಳನ್ನು ನಿರ್ಮಾಣಮಾಡಿರುವುದು ಕರ್ನಾಟಕ ಇತಿಹಾಸದಲ್ಲಿ ಅವಿಸ್ಮರಣೀಯವಾಗಿದೆ. ಚೋಳರ ಕಾಲದ ಪ್ರಮುಖ ಅರಸರು ದೇವಾಲಯಗಳನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ನಿರ್ಮಿಸಿರುವುದ ಕಂಡು ಬರುತ್ತದೆ. ಯಲಹಂಕ ನಾಡಪ್ರಭುಗಳ ವಂಶಸ್ಥನಾದ ಕೆಂಪೇಗೌಡನು ಬೆಂಗಳೂರು ನಗರವನ್ನು ನಿರ್ಮಾಣ ಮಾಡಿದನು. ಈ ಸಂದರ್ಭದಲ್ಲಿ ಮೊಗಲರ ಆಳ್ವಿಕೆಗೆ ಒಳಪಟ್ಟು ನಂತರದಲ್ಲಿ ಮೊಗಲ್ ಸುಬೇದಾರನಾದ ಮೀರ್‌ಖಾಸಿಂನಿಂದ ಮೈಸೂರಿನ ಪ್ರಸಿದ್ಧ ಆರಂಭಿಕ ಒಡೆಯರಾದ ಚಿಕ್ಕದೇವರಾಜ ಒಡೆಯಾರ್ ಬೆಂಗಳೂರನ್ನು ಮೊಗಲ್ ಸೇನಾನಿಯಿಂದ ವಶಪಡಿಸಿಕೊಂಡನು. ಅನಂತರದಲ್ಲಿ ಮೈಸೂರು ಒಡೆಯಾರ್ ಐತಿಹಾಸಿಕವಾಗಿ ಬೆಂಗಳುರು ಸುತ್ತಮುತ್ತಲಿನ ಪ್ರದೇಶಗಳನ್ನು ಅಭಿವೃದ್ದಿಯನ್ನು ಪಡಿಸಿದರು. ಈ ಉದ್ದೇಶದಿಂದಾಗಿಯೇ ಮಾರ್ಕ್‌ಕಬ್ಬನ್ ಕಾಲದಲ್ಲಿ ಮೈಸೂರು ಒಡೆಯಾರ್ ರಾಜಧನಿಯು ಬೆಂಗಳೂರಿಗೆ ವರ್ಗಾವಣೆಯಾಗಿ ಸುತ್ತಮುತ್ತಲಿನ ಪ್ರದೇಶವನ್ನು ಐತಿಹಾಸಿಕ ತಾಣಗಳಾಗಿ ನಿರ್ಮಿಸಿ ಈ ಕೀರ್ತಿಯು ಮೈಸೂರು ಸಂಸ್ಥಾನಕ್ಕೆ ಸಲ್ಲುತ್ತದೆ.

ಪ್ರಾನ್ಸಿಸ್ ಬುಕಾನನು ಪ್ರವಾಸೋದ್ಯಮ ಬಗೆಗೆ ಹೀಗೆ ಹೇಳುತ್ತಾನೆ. ಪ್ರವಾಸ ಕಿರಿಯರಿಗೆ ಶಿಕ್ಷಣದ ಅಂಗವಾದರೆ ಹಿರಿಯರಿಗೆ ಪ್ರತ್ಯಕ್ಷ ಅನುಭವವಾಗುತ್ತದೆ. ಇದರಿಂದ ಪ್ರವಾಸವು ನಾಗರಿಕ ಜಗತ್ತಿನ ಶೈಕ್ಷಣಿಕ ಮೌಲ್ಯವನ್ನು ಹೊಂದಿದೆ ಎಂದು ಗುರುತಿಸಬಹುದು[3]. ಇದರೊಂದಿಗೆ ಮನರಂಜನೆ, ಸಾಹಸ ಪ್ರವೃತ್ತಿಯನ್ನು ತೃಪ್ತಿಗೊಳಿಸುತ್ತದೆ. ಬದಲಾವಣೆಯೆ ಮಾನವನ ನಿರಂತರದಿಂದ ಪ್ರವಾಸವು ಇಂತಹ ಬದಲಾವಣೆಯನ್ನು ಒದಗಿಸುವುದರಿಂದ ಅತೀ ಪ್ರಾಚೀನ ಕಾಲದಿಂದ ಇಂದಿನವರೆಗೂ ಹೆಚ್ಚು ಬದಲಾವಣೆಯೊಂದಿಗೆ ಮುಂದುವರೆದುಕೊಂಡು ಬಂದಿದೆ.

## 2.2 ಐತಿಹಾಸಿಕ ಪ್ರವಾಸೋದ್ಯಮದ ಅರ್ಥ

ಮಾನವನನ್ನು ನಿರಂತರ ಚಲನಾಶೀಲತೆಯನ್ನು ಒಳಗೊಂಡಿರುವ ಸಂಘ ಜೀವಿ, ಅವನು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಪ್ರತಿ ದಿನವು ಚಲನೆಯನ್ನು ಮಾಡುತ್ತಾ ಸಾಗುತ್ತಿರುತ್ತಾನೆ. ಹಾಗೆಯೇ ಆತನು ಸ್ವಭಾವತಃ ತನ್ನ ಮನೋರಂಜನೆಗಾಗಿ, ವ್ಯಾಪಾರಕ್ಕಾಗಿ ಹಾಗೂ ಆರೋಗ್ಯ, ವಯಕ್ತಿಕ ಬೆಳವಣಿಗೆಯ ದೃಷ್ಟಿಯಿಂದ ಪ್ರಯಾಣವನ್ನು ಮುಂದುವರೆಸುತ್ತಾ ಸಾಗುತ್ತಾನೆ.

ಒಂದು ಪ್ರದೇಶದ ಇತಿಹಾಸ ಅಲ್ಲಿನ ಸಂಸ್ಕೃತಿಯನ್ನು ತಿಳಿಯಲು ಭೌಗೋಳಿಕ ಅಂಶಗಳು ಸಹಾಯಕವಾಗುತ್ತವೆ. ಮಾನವನು ಒಂದು ಪ್ರದೇಶದಲ್ಲಿ ನೆಲೆಯೂರಲು ಅಲ್ಲಿ ಹುಟ್ಟಿ ಹರಿಯುವ ನದಿಗಳು, ಬಯಲು ಪ್ರದೇಶ, ತೀರ ಪ್ರದೇಶ, ಫಲವತ್ತಾದ ಮಣ್ಣು, ಪರ್ವತ ಶ್ರೇಣಿ, ಪ್ರಾಣಿ ಸಂಪತ್ತು, ಖನಿಜ ಸಂಪತ್ತು, ಅರಣ್ಯ ಸಂಪತ್ತು, ಹವಾಗುಣ, ಅಕ್ಷಾಂಶ, ರೇಖಾಂಶ, ಮಣ್ಣಿನರಚನೆ ಮುಂತಾದ ಭೌಗೋಳಿಕ ಅಂಶಗಳು ಹಾಗೂ ಅಲ್ಲಿನ ಜನರ ಸಂಚಾರ (ಪ್ರವಾಸಿ) ಮನೋಭಾವನೆಯ ಅವಶ್ಯಕವಾಗುತ್ತವೆ. ಇಂತಹ ಪ್ರವಾಸಿ ಮನೋಭಾವನೆಯನ್ನು ಒಳಗೊಂಡಿರುವ ವ್ಯಕ್ತಿಯ ಆಲೋಚನೆ, ವ್ಯವಹಾರ, ಪ್ರಕೃತಿಯೊಂದಿಗಿನ ಒಡನಾಟ ಚಲನಶೀಲವಾಗಿರುತ್ತದೆ.[4]

ಐತಿಹಾಸಿಕ ಪ್ರವಾಸೋದ್ಯಮ ಎಂದರೆ ಒಂದು ಸ್ಥಳದ ಇತಿಹಾಸ ಮತ್ತು ಪರಂಪರೆಯನ್ನು ಅನ್ವೇಶಿಸುವ ಪ್ರಾಥಮಿಕ ಉದ್ದೇಶದಿಂದ ಪ್ರಯಾಣಿಸುವುದು. ಇದು ಪ್ರಖ್ಯಾತ ಐತಿಹಾಸಿಕ ವಾಸ್ತುಶಿಲ್ಪದ ಸರಳ ದೃಶ್ಯ ವೀಕ್ಷಣೆ, ಕಲಾಕೃತಿಗಳು, ಕಲೆ ಮತ್ತು ಸಾಹಿತ್ಯಿಕ ಅವಶೇಷಗಳ ಮೂಲಕ ಭೂತಕಾಲವನ್ನು ದಾಖಲಿಸುವ ಸ್ಥಳೀಯ ವಸ್ತು ಸಂಗ್ರಹಾಲಯಗಳಿಗೆ ಬೇಟಿ ನಿಡುವುದನ್ನು ಐತಿಹಾಸಿಕ ಪ್ರವಾಸೋದ್ಯಮ ಎಂದರ್ಥ.

ಪ್ರಾಚೀನ ನಾಗರೀಕತೆಗಳೆಲ್ಲವೂ ಸಾಮಾನ್ಯವಾಗಿ ನದಿ ಬಯಲಿನಲ್ಲಿಯೇ ಉಗಮವಾಗಿರುವುದು ತಿಳಿದುಬರುತ್ತದೆ. ಇತಿಹಾಸ ಪೂರ್ವ ಪ್ರಾರಂಭ ಕಾಲಘಟ್ಟದಲ್ಲಿ ಚಲನಶೀಲನಾದ ಮನುಷ್ಯನ್ನು ನಂತರ ಒಂದೆಡೆ ನೆಲೆನಿಂತು ತನ್ನ ಜೀವನವನ್ನು ನಾಗರಿಕತೆಯೊಂದಿಗೆ ಸಮೀಕರಿಸಲಾರಂಭಿಸಿದನ್ನು, ಹಾಗೆಯೇ ಪರಾವಲಂಬಿಯಾದಂತಹ ಮನುಷ್ಯ ತನ್ನ ಅಗತ್ಯಗಳನ್ನು ಇಡೇರಿಸಿಕೊಳ್ಳುವ ಉದ್ದೇಶದಿಂದ ಪ್ರಯಾಣವನ್ನು ಪ್ರದೇಶದಿಂದ ಪ್ರದೇಶಕ್ಕೆ ವಿವಿಧ ಸ್ವರೂಪ ಹಾಗೂ ಆಯಾಮಗಳೊಂದಿಗೆ ಮಾಡುವುದನ್ನು ಕಲಿತುಕೊಂಡನು.

ವಿಶ್ವದಲ್ಲಿಯೇ ಅತ್ಯಂತ ಪ್ರಾಚೀನ ನಾಗರಿಕತೆ ಎಂದು ಕರೆಯಲ್ಪಡುವ ಭಾರತದ ಹರಪ್ಪ ಅಥವಾ ಸಿಂಧೂ ನಾಗರಿಕತೆಯ ಜನರು ದ್ರಾವಿಡ ಸಮೂದಾಯಕ್ಕೆ ಸೇರಿದವರಾಗಿದ್ದು, ನಿರಂತರವಾಗಿ ಅವರು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಪ್ರವಾಸವನ್ನು ಕೈಗೊಂಡಿದ್ದರು.

ಎಂಬುದು ನಮಗೆ ಸಿಂಧೂ ನಾಗರಿಕತೆಯ ಜನರು ಬಳಸುತ್ತಿದ್ದ ಮುದ್ರೆಗಳು ಇತರೆ ನಾಗರಿಕತೆಗಳಾದ ಮೆಸಪೊಟೆಮಿಯಾ, ಈಜಿಪ್ಟ್ ಮೊದಲಾದ ನಾಗರಿಕತೆಗಳ ನೆಲೆಗಳಲ್ಲಿ ದೊರಕಿರುವುದು ಪ್ರತ್ಯಕ್ಷ ಸಾಕ್ಷಿಯಾಗುತ್ತವೆ.[5] ಹಾಗೆಯೇ ಭಾರತದ ನಾಗರಿಕತೆಯ ಪ್ರಮುಖ ನೆಲೆಯಾದ ಲೋಥಾಲ್‌ನಲ್ಲಿ ದೊರಕಿರುವ ಹಡಗುಕಟ್ಟೆಯ ಅವಶೇಷಗಳು ಇಲ್ಲಿನ ಜನರು ಅಂತರ್‌ರಾಷ್ಟ್ರೀಯ ಪ್ರವಾಸೋದ್ಯಮದ ಅಭಿರುಚಿಯನ್ನು ಹೊಂದಿರುವುದು ಕಂಡು ಬರುತ್ತದೆ.

ಭಾರತದಾದ್ಯಂತ, ಐತಿಹಾಸಿಕ ಸ್ಮಾರಕಗಳು ಮತ್ತು ಸ್ಥಳಗಳು ರಾಷ್ಟ್ರೀಯರನ್ನು ಅಷ್ಟೇ ಅಲ್ಲ, ಅಂತರಾಷ್ಟ್ರೀಯ ಗಮನವನ್ನು ಸೆಳೆಯುತ್ತದೆ. ಐತಿಹಾಸಿಕ ಪ್ರವಾಸೋದ್ಯಮವು ಮುಖ್ಯವಾಗಿ ಐತಿಹಾಸಿಕ ಸ್ಥಳಗಳ ಮೇಲೆ ಕೇಂದ್ರಿಕೃತವಾಗಿದೆ. ವ್ಯಕ್ತಿಗಳು ವಿರಾಮ ಮತ್ತು ಮಾಹಿತಿಯನ್ನು ಪಡೆದುಕೊಳ್ಳುವ ಉದ್ದೇಶದಿಂದ ಈ ಸ್ಥಳಗಳಿಗೆ ಭೇಟಿ ನೀಡುತ್ತಾರೆ. ಐತಿಹಾಸಿಕ ಪ್ರವಾಸೋದ್ಯಮದ ತಿಳುವಳಿಕೆ ಮತ್ತು ಮಹತ್ವವನ್ನು ಪಡೆದುಕೊಳ್ಳುವುದು, ಈ ಸಂಶೋಧನಾ ಮಹಾಪ್ರಬಂಧದ ಮುಖ್ಯ ಉದ್ದೇಶವಾಗಿದೆ.

ಈ ಸಂಶೋಧನಾ ಮಹಾಪ್ರಬಂಧದಲ್ಲಿ ಮುಖ್ಯವಾಗಿ ಕ್ಷೇತ್ರಕಾರ್ಯ, ಪ್ರವಾಸೋದ್ಯಮ ಇಲಾಖೆ, ಪ್ರವಾಸೋದ್ಯಮದ ವಿವಿಧ ನಗರಗಳನ್ನು ಗಮನದಲ್ಲಿಟ್ಟುಕೊಂಡು, ಪ್ರವಾಸೋದ್ಯಮವನ್ನು ಸೂಕ್ಷ್ಮ ರೀತಿಯಲ್ಲಿ ಯೋಜಿಸಲು ಸಾಕಷ್ಟು ಜ್ಞಾನವು ಅವರಿಗೆ ಸಹಾಯ ಮಾಡುತ್ತದೆ. ಐತಿಹಾಸಿಕ ಪ್ರವಾಸೋದ್ಯಮದ ಮತ್ತು ಸ್ಮಾರಕಗಳ ಜಾಗೃತಿ ಮೂಡಿಸಲು ಐತಿಹಾಸಿಕ ಪ್ರವಾಸೋದ್ಯಮವು ಬಹುಮುಖ್ಯವಾಗುತ್ತದೆ.

ಭಾರತದಲ್ಲಿ, ದೇಶಾದ್ಯಂತ, ಐತಿಹಾಸಿಕ ಸ್ಥಳಗಳು ಮತ್ತು ಸ್ಮಾರಕಗಳಿವೆ. ವ್ಯಕ್ತಿಗಳು ಈ ಐತಿಹಾಸಿಕ ಸ್ಥಳಗಳು ಅಥವಾ ಸ್ಮಾರಕಗಳಿಗೆ ಪ್ರವಾಸವನ್ನು ಯೋಜಿಸಿದಾಗ, ಅದನ್ನು ಐತಿಹಾಸಿಕ ಪ್ರವಾಸೋದ್ಯಮ ಎಂದು ಕರೆಯಲಾಗುತ್ತದೆ.[6] ವ್ಯಕ್ತಿಗಳು ದೇಶದೊಳಗಿನ ಅಥವಾ ದೇಶದ ಹೊರಗಿನವರಾಗಿರಬಹುದು. ಐತಿಹಾಸಿಕ ಪ್ರವಾಸೋದ್ಯಮದ ಅಭಿವೃದ್ಧಿಯು ಗಣನೆಗೆ ತೆಗೆದುಕೊಳ್ಳಬೇಕಾದ ಹಲವಾರು ಅಂಶಗಳನ್ನು ಒಳಗೊಂಡಿರುತ್ತದೆ. ಅವುಗಳೆಂದರೆ, ಮುಲಭೂತ ಸೌಕರ್ಯ ಅಭಿವೃದ್ಧಿ, ಪ್ರಚಾರ ಮತ್ತು ಮಾರುಕಟ್ಟೆ, ಸಮನ್ವಯ, ಮಾರುಕಟ್ಟೆ ತಂತ್ರಗಳು, ಸ್ಪರ್ಧಾತ್ಮಕತೆ, ಪ್ರವಾಸೋದ್ಯಮವನ್ನು ರಾಷ್ಟ್ರೀಯ ಆದ್ಯತೆಯಾಗಿ ಇರಿಸುವುದು.

ಪ್ರವಾಸೋಧ್ಯಮ ಇಲಾಖೆಯು ಐತಿಹಾಸಿಕ ಪ್ರವಾಸೋದ್ಯಮ ಮಾತ್ರವಲ್ಲದೆ ದೇಶದ ಇತರ ಪ್ರವಾಸೋದ್ಯಮಗಳ ಅಭಿವೃದ್ದಿ ಮತ್ತು ಬೆಳವಣಿಗೆಯನ್ನು ಖಚಿತಪಡಿಸಿಕೊಳ್ಳಲು ಪ್ರಮುಖ ಕಾರ್ಯಗಳನ್ನು ಆಚರಣೆಗೆ ತರಬೇಕಾಗಿದೆ. ಮುಖ್ಯ ಕಾರ್ಯಗಳೆಂದರೆ, ಪ್ರವಾಸಿ ಮಾಹಿತಿ ಸಂಗ್ರಹಣೆ, ಮತ್ತು ಪ್ರಸಾರ, ಸಂಸ್ಥೆಗಳ ಏಕೀಕರಣ ಮತ್ತು ಸಹಕಾರ, ಅಪರಾಧ ಮತ್ತು

ಹಿಂಸಾಚಾರ ತಡೆಗಟ್ಟುವಿಕೆ, ಸೌಲಭ್ಯಗಳ ಅಭಿವೃದ್ಧಿ, ವಿವಿಧ ರೀತಿಯ ಪ್ರವಾಸೋದ್ಯಮದ ಬಗ್ಗೆ ಜಾಗೃತಿ, ಉದ್ಯೋಗ ಕರ್ತವ್ಯಗಳ ಅನುಷ್ಠಾನ, ಸಾರಿಗೆ ವ್ಯವಸ್ಥೆ, ಸೂತ್ರೀಕರಣ ನಿಯಮಗಳು, ಚಟುವಟಿಕೆಗಳ ನಿಯಂತ್ರಣ ಮತ್ತು ಅಂಕಿಅಂಶಗಳ ಸಂಗ್ರಹ ಮತ್ತು ಮಾರುಕಟ್ಟೆ ಸಂಶೋಧನೆ. ಮುಖ್ಯವಾಗಿ ಪ್ರವಾಸೋದ್ಯಮ ಇಲಾಖೆಯಲ್ಲಿ ಉದ್ಯೋಗದಲ್ಲಿರುವ ವ್ಯಕ್ತಿಗಳು ಒಬ್ಬರ ಕೆಲಸದ ಕರ್ತವ್ಯಗಳನ್ನು ಕಾರ್ಯನಿರತವಾಗಿ ನಿರ್ವಹಿಸಲು ಮತ್ತು ಪ್ರವಾಸೋದ್ಯಮವನ್ನು ಉತ್ತೇಜಿಸಲು ಅಗತ್ಯವಾದ ಕೌಶಲ್ಯ ಮತ್ತು ಸಾಮರ್ಥ್ಯಗಳನ್ನು ಹೊಂದುವುದು ಅವಶ್ಯಕವಾಗಿದೆ.

## 2.3 ಐತಿಹಾಸಿಕ ಪ್ರವಾಸೋದ್ಯಮದ ಹಿನ್ನೆಲೆ

ಪ್ರವಾಸೋದ್ಯಮದ ಹುಟ್ಟು ಮತ್ತು ಬೆಳವಣಿಗೆಯನ್ನು ಗುರುತಿಸುವುದು ಅಥವಾ ಪ್ರವಾಸೋದ್ಯಮದ ನಿಜ ಅರ್ಥದಲ್ಲಿ ಹಳೆಯ ಶಿಲಾಯುಗದ ಮಾನವನೇ ಮೊದಲ ಪ್ರವಾಸಿ ಎಂದು ಅರ್ಥೈಸಬೇಕಾಗುತ್ತದೆ. ಹಳೆ ಶಿಲಾಯುಗದ ಮೂರು ಹಂತಗಳು ಆದಿ ಹಳೆ ಶಿಲಾಯುಗ, ಮಧ್ಯ ಹಳೆ ಶಿಲಾಯುಗ ಮತ್ತು ಅನಂತರದ ಅಂತ್ಯ ಹಳೆ ಶಿಲಾಯುಗಗಳು ಹಿಮಾ ಯುಗಗಳ ನಡುವಿನ ಬೆಚ್ಚಗಿನ ಹವಾಮಾನದ ಕಾಲದಲ್ಲಿ ಬೆಳೆದು ಬಂದವು. ಹೀಗಾಗಿ ಆದಿ ಮತ್ತು ಮಧ್ಯ ಅತ್ಯಂತ ಹಳೆ ಶಿಲಾಯುಗದ ಮಾನವನ ಪ್ರಕೃತಿ ವಿಕೋಪದಿಂದ ತನ್ನನ್ನು ತಾನು ರಕ್ಷಿಸಿಕೊಳ್ಳಲು ಅಂದರೆ ಪ್ರಕೃತಿಯ ವೈಪರೀತ್ಯಗಳಿಂದ ದೂರವಿದ್ದು ಉತ್ತಮ ವಾಸಸ್ಥಳಗಳನ್ನು ಅರಸುತ್ತಾ ಪ್ರದೇಶದಿಂದ ಪ್ರದೇಶಕ್ಕೆ ತನ್ನ ವಾಸದ ನೆಲೆಯನ್ನು ಬದಲಾಯಿಸುತ್ತಿದ್ದನು. ಹಾಗಾಗಿ ಇದು ಪ್ರವಾಸ ಎಂದು ಕಂಡುಬಂದರು ಒಂದೆಡೆ ನೆಲೆ ನಿಂತ ಮಾನವನ ಸಂಸ್ಕೃತಿಯ ಕಾಲಾಘಟ್ಟವಲ್ಲ. ಹಾಗಾಗಿ ಪ್ರಾಗಿತಿಹಾಸ ಕಾಲದಲ್ಲಿ ಅದರಲ್ಲೂ ಹಳೆಯ ಶಿಲಾಯುಗದಲ್ಲಿ ಮಾನವನು ಕೈಗೊಂಡ ಪ್ರವಾಸವನ್ನು ವಲಸೆ ಎನ್ನಬಹುದೇ ಹೊರತು ಪ್ರವಾಸವೆಂದು ಕರೆಯಲು ಸಾಧ್ಯವಿಲ್ಲ ಕಾರಣ ಆತನಿಗೆ ಮೂಲ ನೆಲೆಯೆಂಬುದು ಇರಲಿಲ್ಲ.

ಆಧುನಿಕ ಪ್ರವಾಸೋದ್ಯಮದ ವ್ಯಾಖ್ಯೆಯಲ್ಲಿ ಹೇಳುವುದಾದರೆ ಮಾನವನು ತನ್ನ ಮೂಲ ನೆಲೆದಿಂದ ಹೊರಟು ಪ್ರವಾಸದ ಆಶೋಕ್ತರಗಳನ್ನು ಪೂರೈಸಿಕೊಂಡು ಪುನಃ ತನ್ನ ಮೂಲ ಸ್ಥಳಕ್ಕೆ ಬಂದು ಸೇರುವುದನ್ನು ಪ್ರವಾಸವೆಂದು ಹೇಳಲಾಗಿದೆ. ಮಾನವನು ಈ ಹಂತ ತಲುಪಿದ್ದು ನೂತನ ಶಿಲಾಯುಗದ ಕಾಲದಲ್ಲಿ ಅದರಲ್ಲೂ ಮಾನವನು ವ್ಯವಸಾವನ್ನು ಆರಂಭಿಸಿ ಕಾಡುಪ್ರಾಣಿಗಳನ್ನು ಪಳಗಿಸಿಕೊಂಡು ಅದನ್ನು ಸಾಕಲಾರಂಭಿಸಿದ. ನೂತನ ಶಿಲಾಯುಗದ ಕಾಲದಲ್ಲಿ ಕಂಡುಹಿಡಿದ ಚಕ್ರ ಈ ದಿಸೆಯಲ್ಲಿ ಸಾಕಷ್ಟು ಪ್ರಗತಿಯನ್ನು ಸಾಧಿಸುವಂತೆ ಮಾಡಿತ್ತೆಂಬುದರಲ್ಲಿ ಯಾವುದೇ ಸಂಶಯವಿಲ್ಲ.

ಪ್ರಾಚೀನ ಪರಂಪರೆಯ ಬಗ್ಗೆ ಹೇಳುವುದಾದರೆ ಮಾನವನು ತಾಮ್ರ ಶಿಲಾಯುಗದ ಕಾಲದಲ್ಲಿ ಹೆಚ್ಚು ಓಡಾಟದಲ್ಲಿ ತೊಡಗಿ ಕೊಂಡನು. ಭಾರತ, ಈಜಿಪ್ಟ್, ಮೆಸಪಟೋಮಿಯ ಮತ್ತು ಚೀನಾ ನಾಗರೀಕತೆಗಳು ಪರಸ್ಪರ ಸಂಪರ್ಕ ಸಾಧಿಸಿದುದನ್ನು ಇತ್ತೀಚಿನ ಅಧ್ಯಯನಗಳು ಖಚಿತಪಡಿಸುತ್ತವೆ[7]. ಅಂದಮೇಲೆ ಪ್ರವಾಸೋದ್ಯಮ ಪ್ರವಾಸದ ವ್ಯಾಖ್ಯಾನದಲ್ಲಿ ಕ್ರಿ.ಪೂ 3000 ಹೊತ್ತಿಗೆ ಯಾನಗಳನ್ನು ಕೈಗೊಳ್ಳುತ್ತಿದ್ದರೆಂದು ಗುರುತಿಸಬಹುದು.

ಹರಪ್ಪ ನಾಗರೀಕತೆಯ ಕುರುಹುಗಳು ಮೆಸಪಟೋಮಿಯ ನಾಗರೀಕತೆಯಲ್ಲಿ ದೊರಕಿವೆ. ಹರಪ್ಪ ನಾಗರೀಕತೆ ಸುಮಾರು 1.5 ಲಕ್ಷ ಚ.ಕಿ.ಮೀ ರಷ್ಟು ವ್ಯಾಪಿಸಿತ್ತಲ್ಲದೇ ತನ್ನ ನಗರಗಳ ಮಧ್ಯ ಸಂಪರ್ಕ ಹೊಂದಿತ್ತೆಂದು ಈ ಸಂಸ್ಕೃತಿಯನ್ನು ಅಧ್ಯಯನ ಮಾಡಿದ ಎಲ್ಲಾ ವಿದ್ವಾಂಸರು ಒಕ್ಕೊರಲಿನ ಅಭಿಪ್ರಾಯವನ್ನು ದಾಖಲಿಸದ್ದಾರೆ[8]. ಇರಾನಿನ ಎಲ್ಲೆಯಾದ ಸುತ್ತಗಿಂದೋರ್‌ನಿಂದ ಆರಂಭ ಮಾಡಿ ದೆಹಲಿಯ ಪೂರ್ವದ ಆಲಿಂಗಿರ್ ಪುರವರೆಗೆ ಜಮ್ಮುವಿನ ಮಾಂಡದಿಂದ ಮಹಾರಾಷ್ಟ್ರದ ದೈಮಾಬಾದ್‌ವರೆಗೆ ಈ ಸಂಸ್ಕೃತಿ ವಿಸ್ತರಿಸಿದ್ದಿತು. ಇದೇ ಕಾಲಘಟ್ಟದಲ್ಲಿ ದಕ್ಷಿಣ ಭಾರತದ ನೂತನ ಶಿಲಾಯುಗದ ನೆಲೆಗಳೊಂದಿಗೆ ಈ ಸಂಸ್ಕೃತಿ ಸಂಪರ್ಕ ಸಾಧಿಶಿತ್ತೆಂದು ಈಗಾಗಲೇ ಗುರುತಿಸಲಾಗಿದೆ[9]. ಈ ಎಲ್ಲಾ ಹಿನ್ನೆಲೆಯಲ್ಲಿ ನೋಡಿದಾಗ ಭಾರತೀಯ ಸಂಸ್ಕೃತಿಯು ವಿಶ್ವದ ಇತರ ಮಾನವ ಸಂಸ್ಕೃತಿಗಳಾದ ಈಜಿಪ್ಟ್, ಮೆಸಪಟೋಮಿಯ, ಸಂಸ್ಕೃತಿಗಳೊಂದಿಗೆ ಸಂಪರ್ಕ ಹೊಂದಿದ್ದುದನ್ನು ಗುರುತಿಸ ಬಹುದಾಗಿದೆ.

ಭಾರತೀಯರಲ್ಲವೇ ಸುಮೇರಿಯನ್ ನಾಗರೀಕತೆಯೂ ಕೂಡ ಇತರ ಸಂಸ್ಕೃತಿಗಳೊಂದಿಗೆ ಸಂಪರ್ಕ ಸಾಧಿಸಿದನ್ನು ವಿದ್ವಾಂಸರು ಗುರುತಿಸಿದ್ದಾರೆ. ಬ್ಯಾಬಿಲೋನಿಯಾದ ಅರಸನಾದ ಸುರ್ಗಿಯು ರಸ್ತೆಯುದ್ದಕ್ಕು ಛತ್ರಗಳನ್ನು ಮತ್ತು ಪ್ರವಾಸಿಗರ ಅನುಕೂಲಕ್ಕಾಗಿ ರಸ್ತೆಗಳನ್ನು ನಿರ್ಮಿಸಿದನೆಂದು ತಿಳಿದುಬರುತ್ತದೆ[10]. ಹಾಗಾಗಿ ಸುಮೇರಿಯನ್ನರು ಪ್ರವಾಸೋದ್ಯಮದ ವ್ಯಾಖ್ಯಾನದಡಿಯಲ್ಲಿ ಪ್ರವಾಸಿಗರೆನಿಸಿದ ಪ್ರಥಮ ಎನಿಸಿದ್ದಾರೆ[11]. ಪರ್ಶಿಯನ್ನರು ಪ್ರಪಂಚದಾದ್ಯಂತ ಹೆಸರಾದ ವಣಿಕರು. ಇವರು ವ್ಯಾಪಾರದ ಉದ್ದೇಶಕ್ಕಾಗಿ ಪ್ರಪಂಚದ ಹಲವು ಪ್ರದೇಶಗಳನು ಸಂದರ್ಶಿಸಿದ್ದುದು ಇತಿಹಾಸ ಪುಟಗಳಲ್ಲಿ ದಾಖಲಾಗಿದೆ.

ಹೋಮರನು ತನ್ನ ಓಡೆಸಿ ಗ್ರಂಥದಲ್ಲಿ ಗ್ರೀಕರ ಪ್ರವಾಸ ಮನೋಭಾವನೆಯನ್ನು ದಾಖಲಿಸಿದ್ದಾನೆ[12]. ಹೆರೊಟೊಟಸನ ತನ್ನ ಕೃತಿಯಾದ ಟ್ರಾವಲ್ಸ್‌ನಲ್ಲಿ ತನ್ನ ಯಾತ್ರೆಯ ಅನುಭವಗಳನ್ನು ದಾಖಲಿಸಿದ್ದಾನೆ[13]. ಗ್ರೀಕ್ ತಜ್ಞರಾದ ಪ್ಲೇಟೋ, ಅರಿಸ್ಟಾಟಲ್ ಪ್ರವಾಸವನ್ನು ಕೈಗೊಂಡದ್ದು ಕೂಡ ದಾಖಲಾಗಿದೆ[14]. ಗ್ರೀಕರು ಸಾಮಾನ್ಯವಾಗಿ ದೇವತಾ ಆರಾಧನೆ ಮತ್ತು

ಆಟೋಟಗಳಲ್ಲಿ ಭಾಗವಹಿಸಲು ಅಲ್ಲದೆ ಹಬ್ಬಗಳು ಮತ್ತು ಜಾತ್ರೆಗಳಲ್ಲಿ ಪಾಲ್ಗೊಳ್ಳಲು ಪ್ರವಾಸವನ್ನು ಕೈಗೊಳ್ಳುತ್ತಿದ್ದರು.

ಅಲೆಗ್ಸಾಂಡರನ ದಂಡಯಾತ್ರೆಯ ಕಥಾನಕವಂತು ಅಂದಿನ ಕಾಲದ ಪ್ರವಾಸದ ವಿವಿಧ ಮಜಲುಗಳನ್ನು ಪರಿಚಯಿಸುತ್ತದೆ[15]. ಅಂದರೆ ಪ್ರಯಾಣಿಕರು ಬಳಸುತ್ತಿದ್ದ ಭೂಸಾರಿಗೆ, ರಸ್ತೆ ಬದಿಯ ಮರಗಳು, ಅನ್ನ ಛತ್ರಗಳು ದಾರಿಯುದ್ದಕ್ಕೂ ಇದ್ದ ಅಥವಾ ತೋಡಿದ ಬಾವಿಗಳು ಯಾತ್ರೆಗಾಗಿ ಬಳಸಿದ ಕುದುರೆಗಳು, ಆನೆ, ಒಂಟೆ ಹಾಗೂ ವಿವಿಧ ಮಾದರಿಯ ಹಡಗುಗಳ ಮಾದರಿಯ ವಿವರಣೆಗಳನ್ನು ಒಳಗೊಂಡಿದೆ.

'ಜೆನೋಫೋನ' ತನ್ನ ಕೃತಿ 'Anabasis' ನಲ್ಲಿ ಹತ್ತು ಸಾವಿರ ಗ್ರೀಕರು ಪರ್ಶಿಯದಿಂದ ಸಿರಿಯಾ ಮಾರ್ಗವಾಗಿ ಗ್ರೀಕ್‌ಗೆ ನಡೆಸಿದ ಪ್ರಯಾಣವನ್ನು ದಾಖಲಿಸಿದ್ದಾನೆ[16]. ಪ್ರಾಚೀನ ಕಾಲದಲ್ಲಿ ಮಾನವ ಜನಾಂಗಕ್ಕೆ ಯಾತ್ರೆ ಅಥವಾ ಪ್ರಯಾಣ ಗೊತ್ತಿರದ ಸಂಸ್ಕೃತಿಯಾಗಿರಲಿಲ್ಲ. ಎಲ್ಲಾ ಸಂಸ್ಕೃತಿಗಳ ಜನರು ನೂತನ ವ್ಯಾಖ್ಯಾನದಡಿ ಅಂದರೆ ವ್ಯಾಪಾರಕ್ಕಾಗಿ, ತೀರ್ಥಯಾತ್ರೆಗಾಗಿ, ಜಾತ್ರೆ ಮತ್ತು ಹಬ್ಬ ಹರಿದಿನಗಳ ಆಚರಣೆಯಲ್ಲಿ ಪಾಲ್ಗೊಳ್ಳಲು ಮುಂತಾದ ಉದ್ದೇಶಗಳಿಗಾಗಿ ಪ್ರದೇಶದಿಂದ ಪ್ರದೇಶಕ್ಕೆ ಪ್ರಯಾಣ ಕೈಗೊಳ್ಳುತ್ತಿದ್ದರು. ಹೀಗಾಗಿ ಪ್ರಾಚೀನ ಮಾನವನು ಪ್ರವಾಸೋದ್ಯಮದ ಮೂಲ ಧ್ಯೇಯೋದ್ದೇಶಗಳೊಂದಿಗೆ ಸಂಚಾರ ಕೈಗೊಂಡಿದ್ದು ಖಚಿತವಾಗುತ್ತದೆ. ಆದರೆ ನಿಜ ಅರ್ಥದಲ್ಲಿ ಪ್ರವಾಸ ಎಂಬುದು ಪ್ರಾರಂಭವಾದುದು ಎರಡನೇ ಮಹಾಯುದ್ದದ ನಂತರವೇ ಪ್ರಾಚೀನ ಕಾಲ ಘಟ್ಟದಲ್ಲಿ ಅದರಲ್ಲೂ ಯೂರೋಪಿನಾದ್ಯಂತ ವ್ಯಕ್ತಿಗಳು ಪ್ರದೇಶದಿಂದ ಪ್ರದೇಶಕ್ಕೆ ಮನೋಲ್ಲಾಸಕ್ಕಾಗಿ ಮತ್ತು ಇತರ ಕಾರಣಗಳಿಗೆ ಸಂಚಾರ ಕೈಗೊಳ್ಳಲು ಪ್ರೇರಣೆಯಾದದು ರೋಮನ್ ಸಾಮ್ರಾಜ್ಯದ ಶಾಂತಿ ಮತ್ತು ಸುವ್ಯವಸ್ಥೆ ಸಾರ್ವಜನಿಕರಲ್ಲಿ ನೆಲೆಸಿದ ಸಂಪತ್ತು ಮತ್ತು ಜ್ಞಾನ ಸಂವರ್ದನೆ ಹಾಗೂ ಸರ್ಕಾರ ಒದಗಿಸಿದ ಸಾರಿಗೆ ಮತ್ತು ರಕ್ಷಣೆ ಇದು ರೋಮನ್ನರು ಜ್ಞಾನ ಮತ್ತು ವಿಲಾಸ ಜೀವನಕ್ಕಾಗಿ ನಗರದಿಂದ ನಗರಕ್ಕೆ ರೋಮನ್ ಸಾಮ್ರಾಜ್ಯದಾದ್ಯಂತ ಪ್ರವಾಸ ಕೈಗೊಳ್ಳುವಂತೆ ಅವರನ್ನು ಪ್ರೇರೇಪಿಸಿತು. ಈಜಿಪ್ಟ್‌ನ ಪಿರಮಿಡ್ ಮೇಲೆ ಕಂಡುಬರುವ ರೋಮನ್ ಶಾಸನಗಳು ಈ ಮೇಲಿನ ವಿಚಾರವನ್ನು ಪುಷ್ಟೀಕರಿಸುತ್ತವೆ.

## 2.4 ಭಾರತದಲ್ಲಿ ಐತಿಹಾಸಿಕ ಪ್ರವಾಸೋದ್ಯಮದ ಹಿನ್ನೆಲೆ

ಭಾರತ ವೈವಿಧ್ಯತೆಯ ಆಗರ ಭೌಗೋಳಿಕವಾಗಿ, ಐತಿಹಾಸಿಕವಾಗಿ, ಸಾಂಸ್ಕೃತಿಕವಾಗಿ ಮತ್ತು ಪ್ರಾಕೃತಿಕ ಪರಿಸರ ವಿಷಯದಲ್ಲಿ ಹಲವು ವೈವಿಧ್ಯತೆಯನ್ನು ಹೊಂದಿರುವ ದೇಶವಾಗಿದೆ. ಎತ್ತರದ ಹಿಮಾಲಯ ಪರ್ವತ ಶ್ರೇಣಿಗಳು, ಪಶ್ಚಿಮ ಘಟ್ಟಗಳು, ಪೂರ್ವಘಟ್ಟಗಳು, ಅಭಯಾರಣ್ಯಗಳು, ವಿಂಧ್ಯಾ ಸಾತ್ಪುರ ಬೆಟ್ಟಗಳಲ್ಲಿನ ಅಭಯಾರಣ್ಯಗಳು, ಕರಾವಳಿ ತೀರಗಳು. ಹಲವಾರು ಗಿರಿಧಾಮಗಳು ನೂರಾರು ಸಾಂಸ್ಕೃತಿಕ ನೆಲೆಗಳು. ಸಾವಿರಾರು ಐತಿಹಾಸಿಕ ಸ್ಮಾರಕಗಳು ಮುಂತಾದವು ವಿಶ್ವದ ಹಲವು ರಾಷ್ಟ್ರಗಳ ಪ್ರವಾಸಿಗರನ್ನು ಭಾರತದೆಡೆಗೆ ಆಕರ್ಷಿಸುವಂತೆ ಮಾಡುವಲ್ಲಿ ಯಶಸ್ವಿಯಾಗಿದೆ.

ಭಾರತದಲ್ಲಿ ಪ್ರವಾಸೋದ್ಯಮದ ಬೆಳವಣಿಗೆಯನ್ನು ಈ ಪ್ರಾಚೀನ ಕಾಲದಿಂದಲೇ ಗುರುತಿಸಬಹುದು. ಭಾರತದಲ್ಲಿ ಕಂಡುಬರುವ ಹಳೆ ಶಿಲಾಯುಗದ ಮಾನವನ ನೆಲೆಗಳಿಂದ ನೂತನ ಶಿಲಾಯುಗದ ಮತ್ತು ಹರಪ್ಪ ಸಂಸ್ಕೃತಿಯ ಕಾಲದವರೆಗಿನ ಮಾನವನ ಪ್ರಯಾಣವನ್ನು ವಲಸೆ ಎಂದು ಪರಿಗಣಿಸಿರುವ ಹಿನ್ನೆಲೆಯಲ್ಲಿ ಪ್ರಾಗಿತಿಹಾಸ ಕಾಲದ ಈ ಕಾಲಘಟ್ಟದ ಪ್ರವಾಸವನ್ನು ಆಧುನಿಕ ಪ್ರವಾಸೋದ್ಯಮದ ಕಾಲಘಟ್ಟದಡಿ ತರಲಾಗದಿಲ್ಲವಾದರೂ ಆ ಕಾಲದಲ್ಲಿ ಮಾನವನು ಉನ್ನತ ಮತ್ತು ಉತ್ತಮ ಅವಕಾಶಗಳಿಗಾಗಿ ಉತ್ತಮ ವಸತಿ ಪ್ರದೇಶಗಳ ಹುಡುಕಾಟದಲ್ಲಿ ಸ್ಥಳದಿಂದ ಸ್ಥಳಕ್ಕೆ ವಲಸೆ ಹೋದುದನ್ನು ಪ್ರಯಾಣಿಸಿದ್ದನು ತಳ್ಳಿಹಾಕುವಂತಿಲ್ಲ. ಆದರೆ ಹರಪ್ಪ ಸಂಸ್ಕೃತಿಯ ಕಾಲದಲ್ಲಿ ಅಂದರೆ ತಾಮ್ರ ಶಿಲಾಯುಗದ ಕಾಲದಲ್ಲಿ ನೂತನ ಶಿಲಾಯುಗದ ಕಾಲದಲ್ಲಿ ಮಾನವನು ಒಂದೆಡೆ ನೆಲೆನಿಂತು ಜೀವನ ನಡೆಸಲು ಪ್ರಾರಂಭಿಸಿದನು. ನೂತನ ಶಿಲಾಯುಗದ ಆವಿಷ್ಕಾರವಾದ ಚಕ್ರ ಮಾನವನ ಚಲನೆಗೆ ಇಂಬುಕೊಟ್ಟಿತ್ತು.

ಹರಪ್ಪ ಸಂಸ್ಕೃತಿಯ ಜನರು ಹರಪ್ಪ ಸಂಸ್ಕೃತಿಯ ಇತರ ಪಟ್ಟಣಗಳೊಂದಿಗೆ ಮತ್ತು ಸಮಕಾಲೀನ ಸಂಸ್ಕೃತಿಯೊಂದಿಗೆ ಸಂಪರ್ಕ ಸಾಧಿಸಿದುದ್ದನ್ನು ಹಲವಾರು ವಿದ್ವಾಂಸರು ಪುರಾತತ್ವದ ಆಧಾರದ ಮೇಲೆ ಗುರುತಿಸುತ್ತಾರೆ. ಈ ಹಿನ್ನೆಲೆಯಲ್ಲಿ ಗಮನಿಸಿದಾಗ ಹರಪ್ಪ ಸಂಸ್ಕೃತಿಯ ಜನ ಪ್ರದೇಶದಿಂದ ಪ್ರದೇಶಕ್ಕೆ ವ್ಯಾಪಾರದ ಉದ್ದೇಶಕ್ಕೆ ಪ್ರಯಾಣ ಕೈಗೊಳ್ಳುತಿದ್ದುದು ನಿರ್ವಿವಾದವಾಗಿ ಖಚಿತವಾಗುವುದರಿಂದ ಆ ಕಾಲದಲ್ಲಿ ಭಾರತದಲ್ಲಿ ಪ್ರವಾಸೋದ್ಯಮ ಅಥವಾ ಪ್ರವಾಸೋದ್ಯಮದ ಉದ್ದೇಶಕ್ಕೆ ಅನುಗುಣವಾಗಿ ಮಾನವನು ಸಂಚಾರದಲ್ಲಿ ತೊಡಗಿದ್ದನೆಂದು ಹೇಳಬಹುದು[17]. ಹರಪ್ಪ ಸಂಸ್ಕೃತಿಯು ಮುಂದುವರೆದ ವೇದ ಕಾಲದ ಸಂಸ್ಕೃತಿಯಲ್ಲೂ ನಮಗೆ ಜನರು ಸ್ಥಳದಿಂದ ಸ್ಥಳಕ್ಕೆ ವಿದ್ಯಾರ್ಜನೆಗಾಗಿ, ವ್ಯಾಪಾರಕ್ಕಾಗಿ ಉತ್ತಮ ಅವಕಾಶಗಳಿಗಾಗಿ, ಪ್ರವಾಸವನ್ನು ಕೈಗೊಳ್ಳುತ್ತಿದ್ದರೆಂದು ದಾಖಲಿತವಾಗಿದೆ. ಪಣಿಗಳನ್ನು ವರ್ಗಕ ಸಮೂಹವೆಂದು

ಗುರುತಿಸಿ ಅವರು ಪ್ರದೇಶದಿಂದ ಪ್ರದೇಶಕ್ಕೆ ವ್ಯಾಪಾರಕ್ಕಾಗಿ ಸಂಚರಿಸುತ್ತಿದ್ದರೆಂದು ಹಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ[18].

ಶ್ರೀನಿವಾಸರಿತ್ತಿಯವರು ತಮ್ಮ ಒಂದು ಲೇಖನದಲ್ಲಿ ವೇದಕಾಲಿನ ಆರ್ಯರಿಗೆ ಸಮುದ್ರಯಾನ ಗೊತ್ತಿತ್ತೆಂದು ಮತ್ತು ಅವರು ಸಮುದ್ರಯಾನವನ್ನು ಕೈಗೊಳ್ಳುತ್ತಿದ್ದರೆಂದು ರಾಜ ತುಗ್ರಾನ ಮತ್ತು ಅವನ ಮಕ್ಕಳ ನೌಕಯಾನದ ಬಗೆಗೆ ಬರೆಯುತ್ತಾ ವ್ಯಾಖ್ಯಾನಿಸಿದ್ದಾರೆ[19].

ವೇದಯುಗದ ನಂತರದ ಕಾಲದಲ್ಲಿ ಬುದ್ಧನ ಮತ್ತು ಮಹಾವೀರನ ಕಾಲದಲ್ಲಿ ಪ್ರಯಾಣವು ಸಾಕಷ್ಟು ಬೆಳವಣಿಗೆಯನ್ನು ಹೊಂದಿತು. ಬುದ್ಧನ ಜಾತನ ಕಥೆಗಳಲ್ಲಿ ಸಮುದ್ರ ಮಾರ್ಗದ ಯಾನ ಮತ್ತು ಭೂ ಸಂಚಾರದ ಹಲವಾರು ನಿದರ್ಶನಗಳು ದಾಖಲಾಗಿವೆ. ಜಾತಕ ಕಥೆಗಳಲ್ಲಿ ಸುಪ್ಪಾರಕರನು ಏಳು ಬಾರಿ ಆಗ್ನೇಯ ಏಷ್ಯಾ ರಾಜ್ಯಗಳಿಗೆ ಯಾತ್ರೆ ಕೈಗೊಂಡಿದ್ದನು ದಾಖಲಿಸುತ್ತದೆ. ಇದಲ್ಲದೆ ರಾಜಕೀಯ ಜನಕಜಾತಕ ಮುಂತಾದವು ಬುದ್ಧನ ಕಾಲದಿಂದ ಜನರು ಕೈಗೊಳ್ಳುತ್ತಿದ್ದ ಯಾನ ಮತ್ತು ಇತರೆ ಯಾನಗಳನ್ನು ದಾಖಲಿಸುತ್ತವೆ[20]. ಇದಲ್ಲದೆ ಹಲವು ಬಗೆಯ ಹೆದ್ದಾರಿಗಳನ್ನು ಮತ್ತು ಇತರ ದಾರಿಗಳನ್ನು ಗ್ರಂಥಗಳಲ್ಲಿ ಗುರುತಿಸಲಾಗಿದೆ. ಇದೆಲ್ಲದರ ಆಧಾರದ ಮೇಲೆ ಆ ಕಾಲದಲ್ಲಿ ಭೂ ಸಾರಿಗೆ ಮತ್ತು ಜಲ ಸಾರಿಗೆಯ ಮೂಲಕ ಗಣನೀಯ ಪ್ರಮಾಣದ ವ್ಯಾಪಾರ ಮತ್ತು ಪ್ರಯಾಣ ನಡೆಯಿತ್ತೆಂಬುದನ್ನು ದಾಖಲಿಸಬಹುದು.

ಬುದ್ಧನ ಮತ್ತು ಮಹಾವೀರನ ನಂತರದ ಸಮಯದಲ್ಲಿ ಪ್ರಮುಖವಾಗಿ ಪಾಣಿನಿಯು ತನ್ನ ಕೃತಿಯಾದ ಅಷ್ಟಾಧ್ಯಾಯಿಯಲ್ಲಿ ಹಲವು ಬಗೆಯ ಪಥಗಳಲ್ಲಿ ಪ್ರವಾಸಿಗರು ಪ್ರಯಾಣಿಸುತ್ತಿದುದನ್ನ ವಿವರವಾಗಿ ದಾಖಲಿಸಿದ್ದಾನೆ[21]. ಈತನ ರಾಜ ಮಾರ್ಗಗಳು ಮಹಾಪತ ಮತ್ತು ಭೂಸಾರಿಗೆ ವ್ಯವಸ್ಥೆಯನ್ನು ಗುರುತಿಸುತ್ತಾನೆ. ಈತನ ಗ್ರಂಥದಲ್ಲಿ ಸೈನಿಕರಿಗೆ ಮಾರ್ಗದರ್ಶಿಗಳ ಬಗ್ಗೆ ಉಲ್ಲೇಖಗಳು ಕಂಡುಬರುತ್ತದೆ. ರಾಮಾಯಣದ ಕಾಲದಲ್ಲಿ ಈ ಬಗೆಗೆ ಸಾಕಷ್ಟು ಉಲ್ಲೇಖಗಳು ದೊರೆಯುತ್ತವೆ. ರಾಮನ ವನವಾಸ ಕಾಲದ ಯಾತ್ರೆ, ರಾವಣ ಯಾತ್ರೆಗಳು ಮುಂತಾದ ಹಲವು ಸಂದರ್ಭದಲ್ಲಿ ಪ್ರಯಾಣದ ವಿವರ ಜೊತೆಗೆ ಆ ಕಾಲದಲ್ಲಿ ಎದುರಿಸಬೇಕಿದ್ದ ಸಂಕಷ್ಟಗಳನ್ನು ಪುರಾಣಗಳ ಆಧಾರದಿಂದ ತಿಳಿಯಬಹುದು. ಮಹಾಭಾರತದ ಕಾಲದಲ್ಲಿ ಅದರಲ್ಲೂ ಧರ್ಮರಾಯನ ರಾಜಸುಯಾಗ ಸಂದರ್ಭ ಮತ್ತು ಅರ್ಜುನನ ತೀರ್ಥಯಾತ್ರೆ, ಬಲರಾಮನ ತೀರ್ಥಯಾತ್ರೆ ನಮಗೆ ಭಾರತದ ವಿವಿಧ ಪ್ರದೇಶಗಳ ಅಂದಿನ ಸ್ಥಿತಿಗತಿಗಳನ್ನು ಪರಿಚಯ ಮಾಡಿಕೊಡುತ್ತವೆ. ಅದರಲ್ಲೂ ಬಲರಾಮ ತೀರ್ಥಯಾತ್ರೆಯಂತು ಸಿಂಧೂ, ಸರಸ್ವತಿ ನದಿ ಬಯಲಿನ ಯಾತ್ರಾ ಸ್ಥಳಗಳನ್ನು ಸರಸ್ವತಿ ನದಿಯ ವಸ್ತು ಸ್ಥಿತಿಯನ್ನು ತೆರೆದಿಡುತ್ತದೆ.

ಮೌರ್ಯ ಶಾತವಾಹನ ಯುಗದಲ್ಲಂತೂ ಭಾರತದಲ್ಲಿ ಸಂಪರ್ಕ ಕ್ರಾಂತಿಯೇ ನಡೆಯುತ್ತೆಂದು ಹೇಳಬಹುದು. ಪಾಟ್ನಾ–ಉಜ್ಜೈನಿ, ಪಾಟ್ನಾ–ತಕ್ಷಶಿಲೆ, ಪಾಟ್ನಾ–ಕಳಿಂಗ, ಪಾಟ್ನಾ–ಸುವರ್ಣಗಿರಿ ಮುಂತಾದ ಸ್ಥಳಗಳನ್ನು ಸಂಪರ್ಕಿಸುವ ಸುವ್ಯವಸ್ಥಿತವಾದ ಭೂಸಾರಿಗೆ ವ್ಯವಸ್ಥೆ ಮತ್ತು ರಸ್ತೆ ಇದ್ದುದನ್ನು ಕೌಟಿಲ್ಯನ ಅರ್ಥಶಾಸ್ತ್ರದಿಂದ ತಿಳಿಯಬಹುದಾಗಿದೆ[22].

ಈ ಹಿನ್ನೆಲೆಯಲ್ಲಿ ಗಮನಿಸಿದಾಗ ಮಧ್ಯಯುಗೀನ ಭಾರತದಲ್ಲಿ ಪ್ರವಾಸವು ವ್ಯಾಪಾರಕ್ಕಾಗಿ, ತೀರ್ಥಯಾತ್ರೆಗಾಗಿ, ಜ್ಞಾನಾರ್ಜನೆಗಾಗಿ ನಡೆಯುತ್ತಿತ್ತೆಂದು ದಾಖಲಿಸಬಹುದು. ತಕ್ಷಶಿಲೆ, ಉಜ್ಜೈನಿ, ಕಾಶಿ, ಕಾಂಚಿ ಮಥುರ, ಮುಂತಾದವು ಶೈಕ್ಷಣಿಕ ಕೇಂದ್ರಗಳಾಗಿ ಭಾರತದಾದ್ಯಂತ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಆಕರ್ಷಿಸುತ್ತಿದ್ದವು. ಮಯೂರಶರ್ಮನು ತಾಳಗುಂದದಿಂದ ಕಂಚಿಗೆ ಶಿಕ್ಷಣಕ್ಕಾಗಿ ತೆರಳಿದ್ದುದನ್ನು ನಾವು ತಿಳಿಯಬಹುದಾಗಿದೆ. ವಿಜಯನಗರದ ಸ್ಥಾಪನೆಯಲ್ಲಿ ಸಹಕರಿಸಿದರೆನ್ನಲಾದ ವಿದ್ಯಾರಣ್ಯರು ಕಾಶಿಯಲ್ಲಿ ಶಿಕ್ಷಣ ಪಡೆದವರೆಂದು ದಾಖಲಾಗಿದೆ. ಶಂಕರವಿಜಯ, ಮಧ್ವವಿಜಯ, ರಾಮಾನುಜವಿಜಯ ಕೃತಿಗಳು ಅವರು ಕೈಗೊಂಡ ಯಾತ್ರೆಯನ್ನು ಮತ್ತು ಆಕಾಲದಲ್ಲಿನ ಸಾಂಸ್ಕೃತಿಕ ಕೇಂದ್ರಗಳು ಮತ್ತು ವಿದ್ಯಾಕೇಂದ್ರಗಳ ಚಿತ್ರಣವನ್ನು ನೀಡುತ್ತದೆ. ಈ ಹಿನ್ನೆಲೆಯಲ್ಲಿ ನೋಡುವುದಾದರೆ ಭಾರತೀಯರಿಗೆ ಪ್ರಯಾಣ ಮತ್ತು ಜ್ಞಾನಾರ್ಜನೆ ವಸಾಹತುಶಾಯಿ ಪದ್ಧತಿ ಕಾಲಘಟ್ಟದ ಪೂರ್ವದಲ್ಲಿಯೇ ಪರಿಚಿತವಾಗಿತ್ತೆಂದು ಹೇಳಬಹುದು.

ವಿಶ್ವದ ಪ್ರವಾಸೋದ್ಯಮವನ್ನು ದಾಖಲಿಸುತ್ತಾ ಮಧ್ಯಯುಗದ ಪ್ರವಾಸೋದ್ಯಮ ತೀರ್ಥಯಾತ್ರೆಗೆ ಸಂಬಂಧಿಸಿದೆಂದು ನಾವು ಈಗಾಗಲೇ ಗುರುತಿಸಿದ್ದೇವೆ. ಭಾರತದಲ್ಲಿ ಕೂಡ ಇದಕ್ಕೆ ಪರಿಸ್ಥಿತಿ ಭಿನ್ನವಾಗಿರಲಿಲ್ಲ. ಭಾರತೀಯ ಶಿಕ್ಷಣವು ಧಾರ್ಮಿಕ ಹಿನ್ನೆಲೆಯ ಶಿಕ್ಷಣವಾಗಿದ್ದರಿಂದ ಧಾರ್ಮಿಕ ಕ್ಷೇತ್ರಗಳಲ್ಲಿಯೇ ಹೆಚ್ಚಿನ ಶಿಕ್ಷಣ ದೊರೆಯುತ್ತಿದ್ದಿತು. ಅಲ್ಲದೆ ಕಾಶಿ, ರಾಮೇಶ್ವರಯಾತ್ರೆ ಪವಿತ್ರ ನದಿಗಳ ಸಂದರ್ಶನ ಮತ್ತು ಅವುಗಳಲ್ಲಿನ ಸ್ನಾನ ಹಾಗೂ ಪುಣ್ಯ ಸಂಪಾದನೆಗಾಗಿ ಭಾರತೀಯರನ್ನು ಪ್ರದೇಶದಿಂದ ಪ್ರದೇಶಕ್ಕೆ ಪ್ರಯಾಣಿಸುವಂತೆ ಇವು ಅತೀ ಪ್ರಾಚೀನ ಕಾಲದಿಂದ ಪ್ರೇರೇಪಿಸುತ್ತಾ ಬಂದಿವೆ.

## 2.5 ಕರ್ನಾಟಕದಲ್ಲಿ ಐತಿಹಾಸಿಕ ಪ್ರವಾಸೋದ್ಯಮದ ಹಿನ್ನೆಲೆ

ಕರ್ನಾಟಕವು ಭಾರತದೇಶದ ದಕ್ಷಿಣ ಭಾಗದಲ್ಲಿದ್ದು, ಪಶ್ಚಿಮದ ಕರಾವಳಿಯನ್ನು ಒಳಗೊಂಡಂತೆ ಸಹ್ಯಾದ್ರಿಗಿರಿ ಶ್ರೇಣಿ ಮತ್ತು ಬಯಲು ಸೀಮೆಯಲ್ಲಿ ಹರಡಿದೆ. ಉತ್ತರದಲ್ಲಿ ಬೀದರ್‌ನಿಂದ ಪ್ರಾರಂಭವಾಗಿ ದಕ್ಷಿಣದಲ್ಲಿ ಕೋಲಾರದ ವರೆಗೆ ಹಬ್ಬಿದ್ದು ವಿಸ್ತಾರದಲ್ಲಿ ಭಾರತದಲ್ಲಿ

8ನೇ ದೊಡ್ಡರಾಜ್ಯವಾಗಿದೆ. ಉತ್ತರ ದಕ್ಷಿಣವಾಗಿ 760 ಕಿ.ಮೀ. ಪೂರ್ವ ಪಶ್ಚಿಮವಾಗಿ 420 ಕಿ.ಮೀ ಅಗಲವಾಗಿದ್ದು 319200 ಚ.ಕೀ.ಮಿ ವಿಸ್ತಾರವಾಗಿದೆ[23]. ಭಾರತದಲ್ಲಿ ಮಳೆ ಬೀಳುವ 2ನೇ ಪ್ರದೇಶವನ್ನು ಕರ್ನಾಟಕ ತನ್ನದಾಗಿಸಿಕೊಂಡಿದೆ. ಆಗುಂಬೆ ತನ್ನ ಪ್ರದೇಶದಲ್ಲಿ ವಾರ್ಷಿಕ ಸರಾಸರಿ 7600 ಮೀ.ಮೀ. ಮಳೆಯಾಗುತ್ತದೆ. ಅಲ್ಲದೆ ಈ ಪ್ರದೇಶ ಅತೀ ಪ್ರಾಚೀನ ಕಾಲದಿಂದಲೂ ಮಾನವನ ವಸತಿಯ ಕೇಂದ್ರವಾಗಿದುದ್ದನ್ನು ಘಟಪ್ರಭ ಮತ್ತು ಮಲಪ್ರಭ ನದಿ, ಭೀಮಾ ನದಿಪ್ರದೇಶ, ಕೃಷ್ಣನದಿಯ ಉಪನದಿಗಳು, ತುಂಗಭದ್ರಾ ನದಿಯ ಪ್ರದೇಶ, ಕಾವೇರಿ ಮತ್ತು ಇತರ ನದಿ ಪ್ರದೇಶಗಳಲ್ಲಿ ನಡೆದಿರುವ ಉತ್ಖನನಗಳು ಖಚಿತಪಡಿಸುತ್ತವೆ. ಕರ್ನಾಟಕದಲ್ಲಿ ಮಾನವ ಸಂಸ್ಕೃತಿಯ ಅತಿ ಪ್ರಾಚೀನ ಸಂಸ್ಕೃತಿಗಳನ್ನು ಅಂದರೆ ಹಳೆಯ ಶಿಲಾಯುಗದ ನೆಲೆಗಳು ಸೂಕ್ಷ್ಮಶಿಲಾಯುಗದ ನೆಲೆಗಳು. ಕಬ್ಬಿಣದ ಯುಗದ ನೆಲೆಗಳು ದೊರೆತಿವೆ. ಇವುಗಳೆಲ್ಲಕ್ಕೂ ಸಾಕ್ಷಿಯಾಗಿ ಸಾಕಷ್ಟು ಉತ್ಖನನದ ವರದಿಗಳು ಲೇಖನಗಳ, ಗ್ರಂಥಗಳು ಪ್ರಕಟವಾಗಿವೆ. ಇವುಗಳೆಲ್ಲವನ್ನೂ ಅಭ್ಯಸಿಸಿ ಸಾಗರೋತ್ತರ ಸಂಪರ್ಕದ ಬಗ್ಗೆ ಲ. ನ. ಸ್ವಾಮಿಯವರ ಪ್ರಕಟಿಸಿರುವ ಲೇಖನದಲ್ಲಿ ಕರ್ನಾಟಕದ ನೂತನ ಶಿಲಾಯುಗ ನೆಲೆಗಳು ಹರಪ್ಪ ನೆಲೆಗಳೊಂದಿಗೆ ಹೇಗೆ ಸಂಪರ್ಕ ಸಾಧಿಸಿದ್ದವೆಂಬುದನ್ನು ಗುರುತಿಸಿದ್ದಾರೆ. ಇದಲ್ಲದೆ ನೂತನ ಶಿಲಾಯುಗದ ಕಾಲದಲ್ಲಿಯೇ ದಕ್ಷಿಣ ಕರ್ನಾಟಕದ ನೆಲೆಗಳಾದ ಮುತ್ತಲವಾಡಿ, ಟಿ.ನರಸೀಪುರ, ಹೆಮ್ಮಿಗೆ, ಮುಂತಾದ ಪ್ರದೇಶಗಳು ಆಫ್ರಿಕಾದ ತೀರದೊಂದಿಗೆ ಅದರಲ್ಲೂ ವಿಶೇಷವಾಗಿ ಆಫ್ರಿಕಾ ಈಜಿಪ್ಟ್ ದೇಶದೊಂದಿಗೆ ಸಂಪರ್ಕ ಸಾದಿಸಿತ್ತೆಂದು ದಾಖಲಿಸುತ್ತಾರೆ[24]. ಈ ವಿವರಗಳನ್ನು ಗಮನಿಸಿದರೆ ವ್ಯಾಪಾರ ಮತ್ತು ವಾಣಿಜ್ಯಕ್ಕಾಗಿ ಇತರ ಸಂಸ್ಕೃತಿಯ ಸಂವಹನಕ್ಕಾಗಿ ಆ ಕಾಲದಲ್ಲಾಗಲೇ ಪ್ರವಾಸಗಳು ನೆರವೇರುತ್ತಿದ್ದವೆಂದು ಹೇಳಬಹುದು ಇದನ್ನು ಗಮನಿಸಿದಾಗ ಈ ನಿಟ್ಟಿನಲ್ಲಿ ಮತ್ತಷ್ಟು ಸಂಶೋಧನೆಗಳ ಅವಶ್ಯಕತೆ ಎದ್ದುಕಾಣುತ್ತದೆ.

ದಕ್ಷಿಣ ಭಾರತದ ಬೃಹತ್ ಶಿಲಾಯುಗ ಸಂಸ್ಕೃತಿಯ ಬಗ್ಗೆ ಅಧ್ಯಯನ ಮಾಡಿರುವ ಡಾ॥ ಅ. ಸುಂದರ್, ಡಾ॥ ಬಿ. ಕೆ. ಗುರುರಾಜರಾವ್, ಡಾ॥ ಬಿ. ನರಸಿಂಹಯ್ಯ, ಡಾ॥ ಕೆ ರಾಜನ್, ಡಾ॥ ವಿ. ವಿ. ಕೃಷ್ಣಶಾಸ್ತ್ರಿ ಮುಂತಾದ ವಿದ್ವಾಂಸರು ಬೃಹತ್ ಶಿಲಾಯುಗದ ಸಂಸ್ಕೃತಿಯ ಸಮುದ್ರ ಮಾರ್ಗವಾಗಿ ಭಾರತವನ್ನು ಪ್ರವೇಶಿಸಿತ್ತೆಂದು ಆ ಕಾಲಕ್ಕಾಗಲೇ ಸಮುದ್ರ ಮಾರ್ಗದ ವ್ಯಾಪಾರ ವಹಿವಾಟು ಬೆಳೆದಿತ್ತೆಂದು ದಾಖಲಿಸುತ್ತಾರೆ[25]. ಈ ದಿಸೆಯಲ್ಲಿ ಹರಪ್ಪ ಸಂಸ್ಕೃತಿಯು ಸಾಧಿಸಿದ್ಧ ಸಾಧನೆಯನ್ನು ಗಮನಿಸಿದಾಗ ಈ ಎಲ್ಲಾ ಚಟುವಟಿಕೆಗಳು ಮತ್ತು ವಿದ್ವಾಂಸರ ಹೇಳಿಕೆಗಳು ನಿಜವೆಂದು ಕಂಡುಬರುತ್ತದೆ. ಕ್ರಿ.ಶ.1ನೇ ಶತಮಾನದ ಪ್ರವಾಸಿಗ್ರಂಥ "ದಿ ಪಿರಿಪ್ಲಸ್ ಆಫ್ ಎರಿತ್ರಿಯನ್ ಸೀ". ಕರ್ನಾಟಕದ ಹಲವಾರು ಬಂದರುಗಳನ್ನು ಮತ್ತು ಆ ಬಂಧರುಗಳಲ್ಲಿ

ದೊರೆಯುತ್ತಿದ್ದ ಉತ್ಪನ್ನಗಳನ್ನು ಉಲ್ಲೇಖಿಸುತ್ತದೆ[26]. ಇದನ್ನು ಆಧರಿಸಿ ಹೇಳುವುದಾದರೆ ಕ್ರಿ.ಪೂ.6ನೇ ಶತಮಾನದಲ್ಲಿ ಅಂದರೆ ಬುದ್ಧನ ಕಾಲಕ್ಕಾಗಲೇ ಭಾರತೀಯರು ವ್ಯಾಪಾರ ವಾಣಿಜ್ಯದಲ್ಲಿ ತೊಡಗಿಕೊಂಡಿದ್ದರೆಂದು ಬೌದ್ಧ ಜಾತಕ ಕಥೆಗಳು ಖಚಿತಪಡಿಸುತ್ತವೆ. ಈ ಎಲ್ಲಾ ಹಿನ್ನೆಲೆಯನ್ನು ಗಮನಿಸಿದಾಗ ಕರ್ನಾಟಕದಲ್ಲಿ ಪ್ರವಾಸೋದ್ಯಮ ಬೆಳವಣಿಗೆಯನ್ನು ಅತೀ ಪ್ರಾಚೀನ ಕಾಲಕ್ಕೆ ಕೊಂಡೊಯ್ಯಬಹುದಾದರೂ ನೂತನ ಶಿಲಾಯುಗದ ಕಾಲದಿಂದ ವ್ಯಾಪಾರ ಮತ್ತು ವಹಿವಾಟಿಗಾಗಿ ಕರ್ನಾಟಕದ ಜನ ಇತರ ಪ್ರದೇಶಗಳೊಂದಿಗೆ ಸಂಪರ್ಕ ಸಾಧಿಸಿದುದನ್ನು ತಿಳಿಯಬಹುದು.

ಕರ್ನಾಟಕ ಮೌರ್ಯ ಸಾಮ್ರಾಜ್ಯದ ಭಾಗವಾಗಿತ್ತು. ಬನವಾಸಿ ಪ್ರದೇಶಕ್ಕೆ ಆತ ಬೌದ್ಧ ಬಿಕ್ಷುಗಳನ್ನು ಧರ್ಮ ಪ್ರಚಾರಕ್ಕೋಸ್ಕರ ಕಳುಹಿಸಿದನು. ಇತ್ತೀಚಿಗೆ ಶರಾವತಿ ನದಿ ಪಾತ್ರದಲ್ಲಿ ಅಧ್ಯಯನ ಕೈಗೊಂಡ ಕೆಲವರು ಈ ಪ್ರದೇಶದಲ್ಲಿ ಮೌರ್ಯ ಶಾತವಾಹನ ಯುಗಕ್ಕೆ ಸೇರಿದ ಬೌದ್ಧನೆಲೆಗಳನ್ನು ಗುರುತಿಸಲಾಗಿದೆ. ಈ ಪ್ರದೇಶದಲ್ಲಿ ಅಶೋಕನ ಮಕ್ಕಳಾದ ಮಹೇಂದ್ರ ಮತ್ತು ಸಂಗಮಿತ್ರರು ಶ್ರೀಲಂಕಕ್ಕೆ ತೆರಳಿದುದರ ಬಗ್ಗೆ ತಿಳಿಯಬಹುದು[27]. ಗುಲ್ಬರ್ಗ ಜಿಲ್ಲೆಯ ಸನ್ನತಿ, ಬಳ್ಳಾರಿ ಜಿಲ್ಲೆಯ ಹಂಪಿ ಮುಂತಾದ ಪ್ರದೇಶಗಳಲ್ಲಿ ದೊರೆತಿರುವ ಬೌದ್ಧ ನೆಲೆಗಳು ಪೂರ್ವಕಡಲ ತೀರದೊಂದಿಗೆ ಅಂದರೆ ಅಮರಾವತಿ ನಾಗಾರ್ಜುನಕೊಂಡ ಪ್ರದೇಶದೊಂದಿಗೆ ಸಂಪರ್ಕ ಸಾಧಿಸಿದುದನ್ನು ಗುರುತಿಸಬಹುದಾಗಿದೆ. ಮೌರ್ಯ ಸಾಮ್ರಾಜ್ಯದ ನಂತರ ಗುಪ್ತರ ಪ್ರಾಬಲ್ಯದವರೆಗೆ ದಕ್ಷಿಣದಲ್ಲಿ ಶಾತವಾಹನ ನಂತರ ಅವರ ಉತ್ತರಾಧಿಕಾರಿಗಳು ಕರ್ನಾಟಕವನ್ನು ಆಳಿದ್ದನ್ನು ಕಾಣಬಹುದಾಗಿದೆ[28].

ಸಮುದ್ರ ಗುಪ್ತನ ದಕ್ಷಿಣ ದಂಡಯಾತ್ರೆ ಪಲ್ಲವರ ಪ್ರಾಬಲ್ಯಕ್ಕೆ ಅಂತ್ಯ ಹಾಡಿತ್ತಲ್ಲದೆ ಕರ್ನಾಟಕ ಎರಡು ರಾಜಮನೆತನಗಳ ಉದಯಕ್ಕೆ ಕಾರಣವಾಯಿತು. ಹಾಗೇ ಉದಯಿಸಿದ ಗಂಗಾ ಮತ್ತು ಕದಂಬ ಸಾಮ್ರಾಜ್ಯಗಳ ಕರ್ನಾಟಕದ ವ್ಯಾಪಾರ ಮತ್ತು ವಹಿವಾಟನ್ನು ನೋಡಿಕೊಂಡವೆಂದು ಹೇಳಬಹುದು. ಈ ಕಾಲಘಟ್ಟದಲ್ಲಿ ಗಂಗಾವಾಡಿ 96000. ಕದಂಬ ಪ್ರದೇಶಗಳು ಸಾಕಷ್ಟು ವ್ಯಾಪಾರ ಮತ್ತು ವಾಣಿಜ್ಯದಲ್ಲಿ ತೊಡಗಿಸಿಕೊಂಡಿದ್ದವು. ಆ ಕಾಲದಲ್ಲಿ ಶಿಕ್ಷಣಕ್ಕಾಗಿ ಜನ ಪ್ರದೇಶದಿಂದ ಪ್ರದೇಶಕ್ಕೆ ಸಂಚರಿಸುತ್ತಿದುದ್ದನ್ನು ಶಾಸನದಲ್ಲಿ ದಾಖಲಿಸಿದ್ದಾನೆ. ಈ ಕಾಲಘಟ್ಟದಲ್ಲಿ ಜೈನರು ಉತ್ತರದಿಂದ ದಕ್ಷಿಣಕ್ಕೆ, ದಕ್ಷಿಣದಿಂದ ಉತ್ತರಕ್ಕೆ ಯಾತ್ರಾರ್ಥಿಗಳಾಗಿ ಹಲವು ನಿಶಿಧಿ ಶಾಸನಗಳನ್ನು ದಾಖಲಿಸುತ್ತವೆ[29]. ಬಾದಾಮಿ ಚಾಲುಕ್ಯರ ಕಾಲದಲ್ಲಂತೂ ದಕ್ಷಿಣ ಮತ್ತು ಉತ್ತರ ಸಾಮ್ರಾಜ್ಯಗಳ ನಡುವೆ ಯುದ್ಧ ಪರಂಪರೆ ತೀವ್ರಗೊಂಡಿತು. ಹಾಗಾಗಿ ಬಾದಾಮಿ ಮತ್ತು ಕಂಚಿಯ ನಡುವೆ, ಬಾದಾಮಿ–ಕನೌಜ್, ಬಾದಾಮಿ–ವೆಂಗಿ, ಬಾದಾಮಿ ಮತ್ತು ಬ್ರಾಚ್

(ಗುಜರಾತ್) ನಡುವೆ ಸಾಕಷ್ಟು ಸೈನಿಕ ಹೊಡೆದಾಟಗಳು ಜರುಗಿತ್ತು. ಈ ಪರಂಪರೆಯನ್ನು ಚಾಲುಕ್ಯರ ನಂತರ ಅಧಿಕಾರಕ್ಕೆ ಬಂದ ರಾಷ್ಟ್ರಕೂಟರು ಮುಂದುವರಿಸಿಕೊಂಡು ಬಂದರು. ರಾಷ್ಟ್ರಕೂಟ ಅಮೋಘವರ್ಷನ ಕಾಲದಲ್ಲಿ ಸ್ವಲ್ಪಕಾಲ ಸೌಹಾರ್ದಯುತ ವಾತಾವರಣ ಕಂಡು ಬಂದಿತು. ಆದರೂ ದಕ್ಷಿಣ ಕರ್ನಾಟಕದಲ್ಲಿ ಶಾಂತಿ ಮತ್ತು ಸುವ್ಯವಸ್ಥೆ ನೆಲೆಸಿದುದು ಚೋಳರು ಗಂಗರನ್ನು ಸೋಲಿಸಿ ಗಂಗವಾಡಿಯನ್ನು ಆಕ್ರಮಿಸಿದ ನಂತರ. ಇದಾದ ನಂತರ ಹೋಯ್ಸಳರು ದಕ್ಷಿಣ ಕರ್ನಾಟಕ, ಉತ್ತರ ತಮಿಳುನಾಡು ಪ್ರದೇಶಗಳನ್ನು ತಮ್ಮ ಅಧೀನಕ್ಕೆ ತೆಗೆದುಕೊಂಡರು. ಉತ್ತರದಲ್ಲಿ ದೆಹಲಿ ಸುಲ್ತಾನರ ಅಧಿಪತ್ಯ ಆರಂಭದ ಕೆಲವೇ ದಿನಗಳಲ್ಲಿ ದಕ್ಷಿಣ ಭಾರತ ಮುಸಲ್ಮಾನರ ಧಾರ್ಮಿಕ ನೀತಿ ಮತ್ತು ಐಶ್ವರ್ಯದ ಆಸೆಗೆ ಬಲಿಯಾಯಿತು.

ಅಲ್ಲಾವುದ್ದೀನ್ ಖಿಲ್ಜಿಯ ಕಾಲದಲ್ಲಿ ಆತನ ಸೇನಾನಿ ಮಲ್ಲಿಕಾಫರನು ದಕ್ಷಿಣ ಭಾರತದ ಹಿಂದೂ ರಾಜ್ಯಗಳಾದ ದೇವಗಿರಿಯ ಯಾದವರು ವಾರಂಗಲ್ಲಿನ ಕಾಕತೀಯರು. ಕಂಪಿಲ ರಾಜ್ಯ ಮತ್ತು ದ್ವಾರಸಮುದ್ರದ ಹೋಯ್ಸಳರನ್ನು ಲೂಟಿ ಮಾಡಿ ದಕ್ಷಿಣದ ಮಧುರೆಯವರೆಗೆ ತಮ್ಮ ಪ್ರಾಬಲ್ಯ ಮೆರೆದರು. ಇದಾದ ನಂತರ ವಿಜಯನಗರ ಸಾಮ್ರಾಜ್ಯದ ಸ್ಥಾಪನೆ ಈ ಎಲ್ಲಾ ಅಮಂಗಳಗಳಿಗೆ ಮಂಗಳ ಹಾಡಿ ಇಡೀ ದಕ್ಷಿಣ ಭಾರತವನ್ನು ರಾಜಕೀಯವಾಗಿ ಒಗ್ಗೂಡಿಸಿ ಮತ್ತೆ ಸಾಂಸ್ಕೃತಿಕ ಮತ್ತು ಧಾರ್ಮಿಕ ಪರಂಪರೆಯನ್ನು ಬೆಳೆಸಿತು. 1565ರ ತಾಳಿಕೋಟೆ ಯುದ್ದದಲ್ಲಿ ವಿಜಯನಗರ ಪತನವಾದರೂ ದಕ್ಷಿಣದ ರಾಜ್ಯಗಳು ಇದರಿಂದ ಹೆಚ್ಚಿಗೆ ಪೀಡಿತವಾಗಲಿಲ್ಲ. ಆನಂತರದ ರಾಜಕೀಯ ಬೆಳವಣಿಗೆಯಾಗಲು ಹಲವಾರು ಸಣ್ಣಪುಟ್ಟ ರಾಜಮನೆತನಗಳು ಏಳಿಗೆಯಾದವು. ಅವು ಕರ್ನಾಟಕದ ಸಂಸ್ಕೃತಿ ಮತ್ತು ಪರಂಪರೆಯನ್ನು ಅಭಿವೃದ್ದಿಪಡಿಸಿದವೇ ಹೊರತು ಅದರ ವಿನಾಶಕ್ಕೆ ಕಾರಣವಾಗಲಿಲ್ಲ. ಇಂದಿನ ಕರ್ನಾಟಕದ ಉತ್ತರದ ಭಾಗದಲ್ಲಿ ಕ್ರಿ.ಶ 1347ರ ಸುಮಾರಿನಲ್ಲಿ ಪ್ರಾರಂಭವಾದ ಬಹುಮನಿ ಸಾಮ್ರಾಜ್ಯ ಕರ್ನಾಟಕಕ್ಕೆ ಮುಸ್ಲಿಂರ ಆಡಳಿತ ಪದ್ದತಿಯನ್ನು ಪರಿಚಯಿಸಿತು ಇದು ತಾಳಿಕೋಟೆ ಯುದ್ದದ ನಂತರ ಪ್ರಭಾವ ಬೀರಿತು. ದಕ್ಷಿಣದಲ್ಲಿ 17 ಮತ್ತು 18ನೇ ಶತಮಾನಗಳಲ್ಲಿ ಬಿಜಾಪುರದಲ್ಲಿ ಅರಸರು ಕೈಗೊಂಡ ದಂಡಯಾತ್ರೆಗಳು ತಮ್ಮ ಧರ್ಮದ ಸಾಂಸ್ಕೃತಿಕ ನೆಲೆಗಟ್ಟನ್ನು ಈ ಪ್ರದೇಶದಲ್ಲಿ ಹರಡುವಂತೆ ಮಾಡಿದರು ಹೀಗಾಗಿ ಈ ವಿಶಾಲವಾದ ಕರ್ನಾಟಕದಲ್ಲಿ ಐತಿಹಾಸಿಕ ಪ್ರವಾಸೋದ್ಯಮ ಬೆಳೆಯಲು ಅವಶ್ಯಕವಾದ ಹಲವು ಬಗೆಯ ವೈವಿದ್ಯಮಯ ಸ್ಮಾರಕಗಳನ್ನು ಬೀದರ್‌ನಿಂದ ದಕ್ಷಿಣ ಕರ್ನಾಟಕದ ಕೋಲಾರ ಮತ್ತು ಬೆಂಗಳೂರು ಜಿಲ್ಲೆಯವರೆಗೆ ಕಾಣಬಹುದು.

ವಿಜಾಪುರ, ಬೀದರ್, ಗುಲ್ಬರ್ಗ, ಸಿರಾ, ಬೆಂಗಳೂರು ಮುಂತಾದ ಕೇಂದ್ರಗಳಲ್ಲಿ ಇಂಡೋ ಇಸ್ಲಾಮಿಕ್ ಮಾದರಿಯ ಸ್ಮಾರಕಗಳನ್ನು ಬಾದಾಮಿ, ಐಹೊಳೆ, ಪಟ್ಟದಕಲ್ಲು ಮಹಾಕೂಟಗಳಲ್ಲಿ ಬಾದಾಮಿಚಾಲುಕ್ಯರ ಸ್ಮಾರಕಗಳನ್ನು ಗದಗ್‌ನ ಲಕ್ಕುಂಡಿ, ಇಟಗಿ, ಲಕ್ಷ್ಮೇಶ್ವರ ಮುಂತಾದ ಕಡೆಗಳಲ್ಲಿ ಕಲ್ಯಾಣಿ ಚಾಲುಕ್ಯರ ದೇವಾಲಯಗಳನ್ನು ಶಿರವಾಳ, ಪಟ್ಟದಕಲ್ಲು, ಐಹೊಳೆ, ಗುಲ್ಬರ್ಗ ಜಿಲ್ಲೆಯ ಮಾಳಖೇಡ ಮುಂತಾದ ಕಡೆಗಳಲ್ಲಿ ರಾಷ್ಟ್ರಕೂಟರ ಸ್ಮಾರಕಗಳನ್ನು ತಲಕಾಡು ನಂದಿ ಶ್ರವಣಬೆಳಗೊಳ, ಕೋಲಾರ, ಬೆಂಗಳೂರು ಗ್ರಾಮಾಂತರ, ಬೆಂಗಳೂರು ನಗರ ಮುಂತಾದ ಪ್ರದೇಶಗಳು ಗಂಗರ ಸ್ಮಾರಕಗಳನ್ನು ಮುಂತಾದ ಜಿಲ್ಲೆಗಳಲ್ಲಿ ಹೋಯ್ಸಳರ ದೇವಾಲಯಗಳನ್ನು ಕೃಷ್ಣನದಿಯಿಂದ ದಕ್ಷಿಣಕ್ಕೆ ಅದರಲ್ಲೂ ತುಂಗಭದ್ರಾ ನದಿಯಿಂದ ರಾಮೇಶ್ವರದವರೆಗೆ ವಿಜಯನಗರದ ದೇವಾಲಯಗಳನ್ನೂ ವಿಶೇಷವಾಗಿ ಬಳ್ಳಾರಿ ಜಿಲ್ಲೆಯ ಇಂದಿನ ಹಂಪೆಯಲ್ಲಿ ವಿಜಯನಗರದ ಸ್ಮಾರಕಗಳನ್ನು ನೋಡಬಹುದು.

ವಿಜಯನಗರದ ತರುವಾಯ ಇಕ್ಕೇರಿ ಅರಸರ ಸ್ಮಾರಕಗಳನ್ನು ಶಿವಮೊಗ್ಗದ ಸುತ್ತಮುತ್ತಲಿನ ಪ್ರದೇಶದಲ್ಲಿ ಚಿತ್ರದುರ್ಗ ಅರಸ ಸ್ಮಾರಕಗಳನ್ನು ಮೈಸೂರು ಪ್ರದೇಶದಲ್ಲಿ ಕಾಣಬಹುದಾಗಿದೆ. ಈ ಸ್ಮಾರಕಗಳಷ್ಟೇ ಅಲ್ಲದೆ ಕರ್ನಾಟಕದ ಪ್ರಕೃತಿ ಸಂಪತ್ತು ಅರಣ್ಯ ಸಂಪತ್ತು ಸಹಸ್ರಾರು ಯಾತ್ರಿಕರನ್ನು ತನ್ನೆಡೆಗೆ ಆಕರ್ಷಿಸುತ್ತದೆ. ಕಳೆದ ವರ್ಷ ಅಂದರೆ 2012ರಲ್ಲಿ ಯುನೆಸ್ಕೋ, ಕರ್ನಾಟಕ ಪಶ್ಚಿಮ ಘಟ್ಟಗಳ ಅರಣ್ಯವನ್ನು ವಿಶ್ವ ಪರಂಪರೆಯ ತಾಣವಾಗಿ ಘೋಷಿಸಿದೆ[30] ಜೀವ ವೈವಿದ್ಯ ಮತ್ತು ಸಸ್ಯ ವೈವಿದ್ಯ ಹೊಂದಿರುವ ಈ ಅರಣ್ಯಪ್ರದೇಶ ಹಲವಾರು ನೈಸರ್ಗಿಕ ತಾಣಗಳ ಕೇಂದ್ರವಾಗಿದೆ. ವನ್ಯಜೀವಿ ಪ್ರವಾಸೋದ್ಯಮಕ್ಕೆ ಕರ್ನಾಟಕ ಹೆಸರುವಾಸಿಯಾಗಿದೆ. ನಾಗರಹೊಳೆ ಬಂಡೀಪುರ, ಬಿಳಿಗಿರಿರಂಗನಬೆಟ್ಟ, ಕುದುರೆಮುಖ, ಕೊಲ್ಲೂರು ಮುಕಾಂಬಿಕೆ ಅರಣ್ಯ, ಡಾಂಡೇಲಿ ಅರಣ್ಯ ಪ್ರದೇಶ, ವನ್ಯ ಜೀವಿ ಪ್ರವಾಸೋದ್ಯಮದ ಪ್ರಮುಖ ಕೇಂದ್ರಗಳಾಗಿವೆ. ಯಾಣ, ಜೋಗಜಲಪಾತ, ಗಗನಚುಕ್ಕಿ, ಬರಚುಕ್ಕಿ, ಡಾಂಡೇಲಿಯ ಸಮೀಪವಿರುವ ಜಲಪಾತ, ಮಡಿಕೇರಿಯ ಅಬ್ಬಿಜಲಪಾತ, ಹೊಗೆನಕಲ್ ಜಲಪಾತ, ಕಾವೇರಿ ನದಿಕಣಿವೆ ಮುಂತಾದ ಪ್ರವಾಸೋದ್ಯಮ ಮತ್ತು ನೈಸರ್ಗಿಕ ಪ್ರವಾಸಿ ತಾಣವಾಗಿವೆ. ಕರ್ನಾಟಕವು 3 ಪ್ರಮುಖ ವಿಶ್ವಪರಂಪರೆ ತಾಣಗಳನ್ನು ಹೊಂದಿದೆ. ಪಟ್ಟದಕಲ್ಲು ಮತ್ತು ಹಂಪಿ ಐತಿಹಾಸಿಕ ಸ್ಮಾರಕಗಳು, ಪಶ್ಚಿಮಘಟ್ಟ ಅರಣ್ಯ ಪ್ರದೇಶ ನೈಸರ್ಗಿಕ ರಕ್ಷಿತ ಅರಣ್ಯ ಪ್ರದೇಶವಾಗಿದೆ. ಇದಲ್ಲದೆ ಕರ್ನಾಟಕವು ಧಾರ್ಮಿಕ ಯಾತ್ರೆಗೂ ಕೂಡ ಹೆಸರುವಾಸಿಯಾಗಿದೆ.

ಕರ್ನಾಟಕದ ಪ್ರವಾಸೋದ್ಯಮವನ್ನು ವಾರ್ತಾ ಮತ್ತು ಪ್ರಚಾರ ಇಲಾಖೆಯು ನಿರ್ವಹಿಸುತ್ತಿತ್ತು. 1965 ನಂತರ ಪ್ರತ್ಯೇಕ ಇಲಾಖೆಯಾಗಿ ಸ್ಥಾಪಿಸಲಾಯಿತು ಆದರೂ

ಕರ್ನಾಟಕದ ಪ್ರವಾಸೋದ್ಯಮವು ಹೆಚ್ಚಿನ ರೀತಿಯಲ್ಲಿ ಕಾರ್ಯ ಪ್ರವೃತ್ತಿಯಾದದ್ದು ಇತ್ತೀಚಿನ ದಿನಗಳಲ್ಲಿ. 1970ರಲ್ಲಿ ಕರ್ನಾಟಕ ಸರ್ಕಾರವು, "ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಅಭಿವೃದ್ಧಿ ನಿಗಮವನ್ನು" ಸ್ಥಾಪಿಸಿದ[31] ನಂತರ ಈ ನಿಗಮವು ಜಿಲ್ಲಾ ಕೇಂದ್ರಗಳನ್ನು ತೆರೆದು ಆಯಾ ಜಿಲ್ಲೆಗಳ ಪ್ರಮುಖ ಆಕರ್ಷಣೆಯನ್ನು ಜನರಿಗೆ ತಿಳಿಸುವ ಮತ್ತು ಪ್ರವಾಸಿಗರಿಗೇ ಮೂಲಭೂತ ಸೌಕರ್ಯಗಳನ್ನು ಒದಗಿಸುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತವಾಗಿದೆ. ಹೀಗಾಗಿ ಕರ್ನಾಟಕದಾದ್ಯಂತ ಹಲವಾರು ಕೇಂದ್ರಗಳಲ್ಲಿ ಪ್ರವಾಸೋದ್ಯಮವು ಅತ್ಯುತ್ತಮವಾಗಿ ಕಾರ್ಯನಿರ್ವಹಿಸುತ್ತಿರುವುದನ್ನು ಕಾಣಬಹುದು.

ಕರ್ನಾಟಕದ 30 ರಾಜ್ಯಗಳಲ್ಲಿ ಪ್ರವಾಸೋದ್ಯಮದ ಪ್ರವಾಸಿಗರ ಆಕರ್ಷಣೆಯನ್ನು ಗಳಿಸುವಲ್ಲಿ ಮೊದಲ 10 ಸ್ಥಾನಗಳನ್ನು ಈ ಕೆಳಗಿನ ಜಿಲ್ಲೆಗಳು ಪಡೆದುಕೊಂಡಿವೆ. ಮೊದಲ ಸ್ಥಾನವನ್ನು ಮೈಸೂರು ಜಿಲ್ಲೆ ಪಡೆದುಕೊಂಡಿದೆ. ಕರ್ನಾಟಕ ರಾಜ್ಯದ ಶೇಕಡಾವಾರು, ಪ್ರವಾಸಿಗರ ಪಟ್ಟಿಯಲ್ಲಿ ಮೈಸೂರು ಪ್ರಥಮಸ್ಥಾನವನ್ನು ಗಳಿಸಿರುತ್ತದೆ.

ಇದಕ್ಕೆ ಜಿಲ್ಲೆಯು ಹೊಂದಿರುವ ಪ್ರವಾಸಿ ಪೂರಕ ವ್ಯವಸ್ಥೆಯೇ ಕಾರಣವೆಂದು ಹೇಳಿದರು ತಪ್ಪಾಗಲಾರದು. ಅಧ್ಯಾಯ 4 ರಲ್ಲಿ ಜಿಲ್ಲೆಯು ಹೊಂದಿರುವ ರಸ್ತೆ ಮತ್ತು ರೈಲು ಸಾರಿಗೆ ಭೌಗೋಳಿಕ ಲಕ್ಷಣಗಳು, ಊಟ, ವಸತಿ ಮುಂತಾದ ವಿವರಗಳನ್ನು ಈ ಬೆಳವಣಿಗೆಯನ್ನಾಧರಿಸಿ ನೀಡಲಾಗಿದೆ. ಅದನ್ನು ಗಮನಿಸಿದರೆ ಇನ್ನು ಆಗಬೇಕಾದ ಬೆಳವಣಿಗೆಯ ಹಂತಗಳು ಬಹಳಷ್ಟಿವೆ ಆದರೂ ಸಾಧಿಸಿರುವ ಪ್ರಗತಿ ತೃಪ್ತಿದಾಯಕವಾಗಿದೆ ಎಂದು ಹೇಳಬಹುದು.

2011ರಲ್ಲಿ ಕರ್ನಾಟಕ ರಾಜ್ಯದ ಪ್ರವಾಸೋದ್ಯಮವು ಆಕರ್ಷಿಸುತ್ತಿರುವ ದೇಶಿ ಮತ್ತು ವಿದೇಶಿಪ್ರವಾಸಿಗರ ಸಂಖ್ಯೆಯ ಮಾಹಿತಿಯ ಜಿಲ್ಲಾವಾರು ಪಟ್ಟಿಯು ಕೆಳಕಂಡಂತಿವೆ[32].

**ಕೋಷ್ಟಕ – 2**

| ಕ್ರ. ಸಂ. | ಜಿಲ್ಲೆ | ದೇಶಿಯ | ವಿದೇಶಿಯ | ಒಟ್ಟು |
|---|---|---|---|---|
| 1 | ಬೆಂಗಳೂರು ನಗರ ಜಿಲ್ಲೆ | 59,59,529 | 89,597 | 60,49,126 |
| 2 | ಬೆಂಗಳೂರು ಗ್ರಾಮಾಂತರ | 5,71,265 | – | 5,71,265 |
| 3 | ಮೈಸೂರು | 1,32,60,373 | 1,14,160 | 1,33,74,533 |
| 4 | ದಕ್ಷಿಣಕನ್ನಡ | 87,69,681 | 2,577 | 87,72,258 |
| 5 | ಚಿಕ್ಕಮಗಳೂರು | 80,91,428 | 464 | 80,91,892 |
| 6 | ಕೊಡಗು | 18,10,960 | 5,297 | 1,86,257 |
| 7 | ಬಳ್ಳಾರಿ | 25,04,034 | 81,900 | 25,85,934 |
| 8 | ಶಿವಮೊಗ್ಗ | 20,05,769 | 36,533 | 23,06,787 |
| 9 | ಕೊಪ್ಪಳ | 26,44,331 | 51,938 | 26,96,269 |
| 10 | ತುಮಕೂರು | 43,83,594 | – | 43,83,594 |

| | | | | |
|---|---|---|---|---|
| 11 | ಉಡುಪಿ | 27,51,891 | 10,477 | 27,62,368 |
| 12 | ಚಾಮರಾಜನಗರ | 39,43,593 | 1,983 | 39,51,576 |
| 13 | ಬೆಳಗಾವಿ | 27,59,800 | – | 27,59,800 |
| 14 | ಹಾಸನ | 34,00,014 | 1,06,846 | 35,06,860 |
| 15 | ರಾಮನಗರ | 27,74,533 | 6,337 | 22,780,910 |
| 16 | ಹಾವೇರಿ | 7,300 | – | 7,300 |
| 17 | ರಾಯಚೂರು | 7,900 | – | 7,900 |
| 18 | ವಿಜಯಪುರ | 16,47,931 | 2,808 | 16,50,739 |
| 19 | ಚಿತ್ರದುರ್ಗ | 6,28,369 | 582 | 6,28,951 |
| 20 | ಗುಲ್ಬರ್ಗ | 7,52,262 | – | 7,52,262 |
| 21 | ಯಾದಗಿರಿ | 64,045 | – | 64,045 |
| 22 | ಚಿಕ್ಕಬಳ್ಳಾಪುರ | 13,32,173 | – | 13,32,173 |
| 23 | ದಾವಣಗೆರೆ | 4,18,432 | – | 4,18,432 |
| 24 | ಬಿದರ್ | 13,87,474 | – | 13,87,474 |
| 25 | ಗದಗ್ | 2,84,919 | 437 | 2,85,356 |
| 26 | ದಾರವಾಡ | 3,24,707 | 1,941 | 3,26,648 |
| 27 | ಕೋಲಾರ | 3,29,856 | – | 3,29,856 |
| 28 | ಮಂಡ್ಯ | 70,40,670 | 31,283 | 70,71,953 |
| 29 | ಉತ್ತರಕನ್ನಡ | 2005769 | 36533 | 20,42,302 |
| 30 | ಬಾಗಲಕೋಟೆ | 19,44,865 | 23,706 | 19,68,571 |
| | **ಒಟ್ಟು** | **8,38,07,467** | **6,05,399** | **10,30,53,391** |

## 2.6 ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಐತಿಹಾಸಿಕ ಹಿನ್ನೆಲೆ

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರ ಹಾಗೂ ದೇವನಹಳ್ಳಿ ತಾಲ್ಲೂಕುಗಳು ಬೃಹತ್ ಶಿಲಾಯುಗ ಸಂಸ್ಕೃತಿಗೆ ಸೇರಿರುತ್ತದೆ ಮತ್ತು ನೆಲೆಗಳೂ ಸಹ ಪತ್ತೆಯಾಗಿವೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಐತಿಹಾಸಿಕ ನೆಲೆಯಾಗಿದೆ ಎಂಬುದು ತಿಳಿಯಬಹುದು. ದೊಡ್ಡಬಳ್ಳಾಪುರ ತಾಲ್ಲೂಕಿನ ಮಡಗು ಗ್ರಾಮದಲ್ಲಿ ಮತ್ತು ಸೂಲುಕುಂಟೆ ಗ್ರಾಮದ ಪಕ್ಕ ಕಾಡಿನ ಮಧ್ಯ 13 ಅಡಿ ಉದ್ದ ಹಾಗೂ 03 ಅಡಿ ಅಗಲದ 'ನಿಲುವುಗಲ್ಲು' ಹೊಂದಿದೆ[33] ಈ ಸ್ಮಾರಕ ಸ್ಥಂಬದ ಪರಿಸರದಲ್ಲಿ 150ಕ್ಕೂ ಹೆಚ್ಚು ಕಲ್ಲುಪ್ಪೆ ಸಮಾಧಿಗಳಿವೆ ಸ್ಥಳೀಯರು ಇದನ್ನು ಪಾಂಡವರ ದಿಣ್ಣೆ ಎಂದು ಕರೆಯುವರು[34]. ಇಲ್ಲಿ ಶಿಲಾಯುಗ ಜನರ ಯೋಗ್ಯವಾದ ನೆಲೆ ಇದಾಗಿದೆ ಎಂಬುದಕ್ಕೆ ಸಾಕಷ್ಟು ಕುರುಹುಗಳು ದೊರಕಿರುತ್ತದೆ.

ರಾಜಘಟ್ಟ ಗ್ರಾಮದ ಬಳಿ ಬೂದಿ ಗುಂಡಿಯಲ್ಲಿ ನಾಲ್ಕು ಆದಿ ಕೋಟೆ ಸಮಾಧಿಗಳು, ಒಂದು ಹಾಳಾದ ಕೋಗ ಸಮಾಧಿ ಇದ್ದರೆ ಬೈರಾಪುರ ಗ್ರಾಮದ ಹೊಲಗಳಲ್ಲಿ 32 ಶಿಲಾವೃತ್ತಿ ಸಮಾಧಿಗಳಿವೆ. ದೊಡ್ಡಬೆಳವಂಗಲ, ಸಕ್ಕರೆ ಗೊಲ್ಲಹಳ್ಳಿ ಮದ್ಯ ಅಕ್ಕ ತಮ್ಮನ ಹಳ್ಳಿ ಸಮೀಪದಲ್ಲಿ

ಸಮಾಧಿಗಳು ದೊರಕಿರುತ್ತದೆ. ಭಕ್ತರಹಳ್ಳಿಯಲ್ಲಿ 14 ಅಡಿ ಎತ್ತರ 4 ಅಡಿ ಅಗಲದ ನೀಲಸುಗಲ್ಲು ಇದೆ. ಇದೇ ಪ್ರದೇಶದಲ್ಲಿ 17 ಬೃಹತ್ ಶಿಲಾ ಶಾಸನಗಳಿವೆ[35].

ಹಲ್ಲುಕುಡಿ ಬೆಟ್ಟ ಮಾಕಳಿದುರ್ಗ ಮತ್ತು ಉಜ್ಜಯಿನಿ ಬೆಟ್ಟಗಳ ಆವರಣಗಳಲ್ಲಿ ಕೆಲವು ಕಲ್ಲಿನ ಮಂಟಪಗಳಿವೆ. ಶ್ರೀ ರಾಮನ ಹಳ್ಳಿಯ ಕಾಡಿನ ಗುಡ್ಡದಲ್ಲಿ ಬಂಡೆಗಳ ಮೇಲೆ ಕೆಲವು ರೇಖಾ ಚಿತ್ರಗಳು ದೊರತಿವೆ ಮತ್ತು ಮಡಿಕೆ ಚೂರುಗಳು ದೊರೆತಿದ್ದು. ಇಲ್ಲಿಯ ಶಿಲಾಯುಗದ ಕಾಲದಲ್ಲಿ ಜನರು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವಲಸೆಯನ್ನು ಮಾಡುತ್ತಿದ್ದರು ಎಂದು ತಿಳಿಯಬಹುದು[36].

ಬೆಂಗಳೂರು ದಂಡಕಾರಣ್ಯದ ಒಂದು ಭಾಗವಾಯಿತೆಂಬ ನಂಬಿಕೆ ಇದೆ ರಾಮನಗರ ಬಳಿಯ ರಾಮಗಿರಿ ಬೆಟ್ಟ ಪ್ರದೇಶ ಸುಗ್ರೀವನ ಸ್ಥಳವಾಗಿತ್ತಂತೆ ನೆಲಮಂಗಲ ಹೆಗ್ಗುಂದ ಸ್ಥಳಕ್ಕೆ ರಾಮನ ಅಶ್ವಮೇಧ ಯಾಗದ ಕುದುರೆ ಬಂದಿತ್ತಂತೆ[37]. ಇವತ್ತಿಗೂ ಈ ಸ್ಥಳವು ಐತಿಹಾಸಕ ಸ್ಥಳವಾಗಿದೆ. ಪಾಂಡವರು ಮಹಾಭಾರತದ ಯಕ್ಷಪ್ರಶ್ನೆ ನಡೆದಿದ್ದು ಹೊಸಕೋಟೆಯ ಕೊಂಡರಹಳ್ಳಿ ಸರೋವರದಲ್ಲಿ. ಆದ್ದರಿಂದ ಐತಿಹಾಸಿಕ ಹಿನ್ನೆಲೆಯನ್ನು ಒಳಗೊಂಡಿದೆ[38].

ಕ್ರಿ.ಶ 2ನೇ 3ನೇ ಶತಮಾನಕ್ಕೆ ಸೇರಿದ ಶಾತವಾಹನರ ಕಾಲದ ಬೌಧ ಚೈತ್ಯಾಲಯಗಳೊಂದರ ಅವಶೇಷಗಳು ಹಾಗೂ ಮಣ್ಣಿನ ಮುದ್ರೆಯ ಮೇಲೆ ಬರಹವನ್ನು ಹೊಂದಿರುವ ಮುನ್ನೂರಕ್ಕೂ ಹೆಚ್ಚಿನ ಸಂಖ್ಯೆಯ ಅರಕೆಯ ಸ್ತೂಪಗಳು ಐತಿಹಾಸಿಕ ದೊಡ್ಡಬಳ್ಳಾಪುರ ತಾಲ್ಲೂಕಿನ ರಾಜಘಟ್ಟದಲ್ಲಿ ಪತ್ತೆಯಾಗಿದೆ[39].

ಕರ್ನಾಟಕ ಚಕ್ರವರ್ತಿಗಳಾದ ಬಾದಾಮಿ ಚಾಲುಕ್ಯರು ಮತ್ತು ಗಂಗರು ಚೋಳರ ವಿರುದ್ಧ ಹೋರಾಟ ಮಾಡಿ ಸಾಮ್ರಾಜ್ಯವನ್ನು ರಕ್ಷಿಸಿದರು. ಆದ್ದರಿಂದ ಬೆಂಗಳೂರು ಗ್ರಾಮಾಂತರ ಪ್ರದೇಶವು ಈ ಸಾಮ್ರಾಜ್ಯಕ್ಕೆ ಸೇರಿತ್ತು. ಸುಮಾರು ವರ್ಷಗಳ ಕಾಲ ಈ ಪ್ರದೇಶವು ಚೋಳರ ವಶದಲ್ಲಿತ್ತು ಆ ಸಮಯದಲ್ಲಿ ಅವರು ಹಲವಾರು ಐತಿಹಾಸಿಕ ದೇವಾಲಯಗಳನ್ನು ನಿರ್ಮಾಣ ಮಾಡಿದ್ದಾರೆ ಅದರಲ್ಲೂ ಚೋಳರ ಕಾಲದ ಪ್ರಮುಖ ಅರಸ ರಾಜೇಂದ್ರ ಚೋಳರ ಕಾಲದಲ್ಲಿ ಹಲವಾರು ಐತಿಹಾಸಿಕ ದೇವಾಲಯಗಳನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಕಾಣಬಹುದಾಗಿದೆ[40].

ಗಂಗರ ಆಳ್ವಿಕೆಗೆ ಒಳಪಟ್ಟಿದ್ದ ಪ್ರದೇಶವು 'ಗಂಗವಾಡಿ–96,000'ವೆಂದೇ ಖ್ಯಾತಿ ಪಡೆದಿದ್ದು, ಅದು ಕರ್ನಾಟಕದ ಇಂದಿನ ಕೋಲಾರ, ಚಿಕ್ಕಬಳ್ಳಾಪುರ, ತುಮಕೂರು, ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಮೈಸೂರು, ಚಾಮರಾಜನಗರ, ಮಂಡ್ಯ ಹಾಗೂ ಕೊಡಗು ಜಿಲ್ಲೆಗಳೂ ಸೇರಿದಂತೆ ನೆರೆಯ ತಮಿಳುನಾಡಿನ ಕೆಲವು ಪ್ರದೇಶಗಳನ್ನು ಒಳಗೊಂಡಿತ್ತು.

ಅಲೆಗ್ಸಾಂಡರನ ಕಾಲಕ್ಕೆ ಸಂಬಂಧಪಟ್ಟ ಗ್ರೀಕ್ ವೃತ್ತಾಂತಗಳಲ್ಲಿ 'ಗಂಗಾರಿಡೀ' ಎಂಬ ಪ್ರದೇಶದ ಉಲ್ಲೇಖವಿದೆ.[41] ಗ್ರೀಕ್ ಪ್ರವಾಸಿ ಟಾಲೆಮಿ ತನ್ನ ಬರಹದಲ್ಲಿ 'ಗಂಗಾರಿಡೀ' ಜನಾಂಗ ಅಥವಾ ಪ್ರದೇಶವನ್ನು ಮತ್ತು ಅದರ ರಾಜಧಾನಿ 'ಗಂಗೇ' ಎಂಬುದನ್ನು ಕುರಿತು ಪ್ರಸ್ತಾಪಿಸಿದ್ದಾನೆ. ಪ್ಲೀನಿ ಎಂಬ ಮತ್ತೊಬ್ಬ ವಿದೇಶಿಯರು ಗಂಗರಾಜ್ಯದ ಜನರನ್ನು 'ಗಂಗಾರಿಡೀ' ಎಂದೇ ಸಂಬೋಧಿಸಿದ್ದಾನೆ.[42]

ಗಂಗದೊರೆ ಶ್ರೀಪುರುಷನ ಆಳ್ವಿಕೆಯಲ್ಲಿ ಗಂಗರ ರಾಜ್ಯಕ್ಕೆ 'ಶ್ರೀರಾಜ್ಯ' ಎಂದೇ ಕರೆಯಲಾಗುತ್ತಿತ್ತು. ಗಂಗರು ತಮ್ಮ ಸುದೀರ್ಘ ಆಳ್ವಿಕೆಯ ಕಾಲದಲ್ಲಿ ದಕ್ಷಿಣ ಭಾರತವನ್ನಾಳಿದ ರಾಜಮನೆತನಗಳಾದ ಪಲ್ಲವರು, ಕದಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು ಮತ್ತು ಚೋಳ ರಾಜಮನೆಗನಗಳೊಡನೆ ರಾಜಕೀಯ ಸಂಬಂಧದ ಜೊತೆಗೆ ಹಲವು ವೇಳೆ ರಕ್ತಸಂಬಂಧವನ್ನೂ ಹೊಂದಿದ್ದರೆಂದು ತಿಳಿಯುತ್ತದೆ[43]. ಗಂಗರ ಆಳ್ವಿಕೆಯಡಿ ದಕ್ಷಿಣ ಕರ್ನಾಟಕವು ಸರ್ವಾಂಗೀಣ ಪ್ರಗತಿ ಸಾಧಿಸಿತು. ನೂತನ ಕೆರೆಕಟ್ಟೆ, ಕಾಲುವೆಗಳ ನಿರ್ಮಾಣ ಸಾಗುವಳಿಯಲ್ಲಿ ಪ್ರಗತಿ, ಗುಡಿಗೋಪುರಗಳ ನಿರ್ಮಾಣ, ಅಸ್ತಿತ್ವದಲ್ಲಿದ್ದ ಗ್ರಾಮಗಳ ಅಭಿವೃದ್ಧಿ ಹಾಗೂ ನೂತನ ಗ್ರಾಮಗಳ ಸ್ಥಾಪನೆಗೂ ಇವರ ಆಡಳಿತ ದಾರಿಮಾಡಿಕೊಟ್ಟಿತು. ಅಲ್ಲದೆ ಈ ಪ್ರದೇಶಗಳ ಸಾಂಸ್ಕೃತಿಕ ಬೆಳವಣಿಗೆಗೂ ಅವಕಾಶ ಕಲ್ಪಿಸಿತು. ಈ ಅಂಶವನ್ನು ಅವರ ಆಳ್ವಿಕೆಯ ಪ್ರದೇಶದಲ್ಲಿ ದೊರೆತಿರುವ ಅವರ ಕಾಲದ ಅಸಂಖ್ಯಾತ ಶಾಸನಗಳು ಸಮರ್ಥಿಸುತ್ತವೆ.

ಕ್ರಿ. ಶ 1400 ವಿಜಯನಗರದ ಅರಸರ ಶಾಸನಗಳಿಗೆ ಬಹುಮಟ್ಟಿಗೆ ವಿಜಯನಗರ ಕಾಲದಲ್ಲಿ 'ನಾಡು'ಗಳಿಗೆ ಪರ್ಯಾಯವಾಯಿತು ಸೀಮೆಗಳು ಸ್ಥಾನ ಪಡೆದವು ಅವುಗಳಲ್ಲಿ ಹುಲ್ಲಾರು ಸೀಮೆ ಹಾಣೆಬಿಯಾ ಸೀಮೆ ಹೊಸಕೋಟೆ ಸೀಮೆ ನೆಲಮಂಗಲ ಸೀಮೆ ಮುಂತಾದವು ಶಾಸನೋಕ್ತವಾಗಿದೆ[44]. ಇದರಿಂದ ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಐತಿಹಾಸಿಕವಾದಂತಹ ಸ್ಥಳವಾಗಿದೆ ಎಂದು ತಿಳಿಯಬಹುದು. ವಿಜಯನಗರದ ಅರಸರ ಕಾಲದಲ್ಲಿ ಶಾಸನಗಳಲ್ಲಿ ಪ್ರಮುಖವಾಗಿ ಕ್ರಿ.ಶ 1408 ಮಯಸಂದ್ರ ಗ್ರಾಮದ ಶಾಸನವು ಅಂಜುಡು ನಾಡು ಒಳಾಂಗಣ ಮಾಗಸಂದ್ರ ಎಂದು ಉಲ್ಲೇಖಿಸುತ್ತದೆ[45]. ಬೆಂಗಳೂರು ನಗರ ಜಿಲ್ಲೆಯ ಉತ್ತರಕ್ಕೆ ದೇವನಹಳ್ಳಿ ತಾಲ್ಲೂಕಿಗೆ ಹೊಂದಿಕೊಂಡಿರುವ ಪ್ರದೇಶ ವಿಜಯನಗರ ಕಾಲಕ್ಕೆ ಆಡಳಿತಕ್ಕೆ ಒಳಪಟ್ಟಿತು.

ಕ್ರಿ.ಶ 1638ರಲ್ಲಿ ವಿಜಯಪುರದ ಸೇನಾನಿ ರಣದುಲ್ಲಾ ಖಾನನ ಆಕ್ರಮಣ ನಡೆಯಿತು ಬೆಂಗಳೂರು, ಹೊಸಕೋಟೆ, ದೇವನಹಳ್ಳಿ ಪ್ರದೇಶಗಳ ಮೇಲೆ ದಾಳಿ ನಡೆಯಿತು. ಈ ಐತಿಹಾಸಿಕ ಸ್ಥಳಗಳು ಮರಾಠರ ಶಹಜಿಗೆ ಜಾಗೀರಾಗಿ ಹೋದವು. ನಂತರ ದಿನಗಳಲ್ಲಿ ಮೊಗಲರ ಸೇನೆ ಕ್ರಿ.ಶ

1687ರಲ್ಲಿ ಸಿರಾ, ಬೆಂಗಳೂರು ಸುತ್ತಮುತ್ತಲಿನ ಪ್ರದೇಶಗಳನ್ನು ವಶಪಡಿಸಿಕೊಂಡಿತು. (1673–1704)ರವರೆಗೆ ಬೆಂಗಳೂರಿನ ಆಡಳಿತವನ್ನು ಮೈಸೂರು ರಾಜರು ಆಳ್ವಿಕೆಯನ್ನು ಮಾಡಲಾಯಿತು[46].

ಬೆಂಗಳೂರು ನಿರ್ಮಿಸಿದ ಒಂದನೇ ಕೆಂಪೇಗೌಡ ಯಲಹಂಕ ನಾಡಪ್ರಭುಗಳ ರಾಜವಂಶಸ್ಥ ಕೆಂಪೇಗೌಡನು ಬೆಂಗಳೂರನ್ನು ನಿರ್ಮಾಣ ಮಾಡಿದನು ಐತಿಹಾಸಿಕ ಸ್ಥಳಗಳನ್ನು ಬೆಂಗಳೂರು ಸುತ್ತಮುತ್ತಲಿನ ಪ್ರದೇಶಗಳಲ್ಲಿ ದೇವಾಲಯಗಳನ್ನು ನಿರ್ಮಾಣ ಮಾಡಲಾಗಿ ಮತ್ತು ಕೋಟೆಗಳನ್ನು ಕಟ್ಟಲಾಗಿದೆ. ಐತಿಹಾಸಿಕವಾಗಿ ಬೆಂಗಳೂರು ಸುತ್ತಮುತ್ತಲಿನ ಪ್ರದೇಶಗಳನ್ನು ತಿಳಿಯಬಹುದು. ಕೆಂಪೇಗೌಡರ ವಂಶಸ್ಥರನ್ನು ಪಾಳೆಯಗಾರರೆಂದು ಹೋಯ್ಸಳರ ಸಾಮಂತರೆಂದು ಹಾಗೂ ನಂತರದಲ್ಲಿ ವಿಜಯನಗರ ಅರಸರ ಸಾಮಂತರೆಂದು ಮತ್ತು ಮೈಸೂರು ಅರಸರ ಸಾಮಂತರೆಂದು ಗುರುತಿಸಲಾಗಿದೆ[47].

ಕ್ರಿ.ಶ 1550ರಲ್ಲಿ ಶಿವಗಂಗೆಯನ್ನು ಕೆಂಪೇಗೌಡನಿಗೆ ಸ್ವಾದೀನವಾಯಿತು. ಶಿವಗಂಗೆ ಗಿರಿಯ ಭವ್ಯ ಪ್ರಕೃತಿಯ ಸೌಂದರ್ಯ ಮನ ಮಿಡಿದುದರ ಫಲವಾಗಿ ಭಕ್ತಿಪೂರ್ವಕವಾಗಿ ಗಿರಿಯ ಸುತ್ತೆಲ್ಲಾ ಹಲವು ಗುಡಿ ಗೋಪುರಗಳನ್ನು ಕಟ್ಟಿಸಿ ಆ ಗುಡಿಗಳಲ್ಲಿ ನಿತ್ಯಾರಾಧನೆಗೆ ಪೂಜೆ ಪುನಸ್ಕಾರಗಳಿಗೆ ಸೂಕ್ತ ವ್ಯವಸ್ಥೆಯನ್ನು ಮಾಡಿದರು. ತದನಂತರ ಶಿವಗಂಗೆ ಕ್ಷೇತ್ರವು ಐತಿಹಾಸಿಕ ಸ್ಥಳವಾಗಿದ್ದು ನಂತರದ ದಿನಗಳಲ್ಲಿ ಕೆಂಪೇಗೌಡನ ಕಾಲದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಐತಿಹಾಸಿಕ ಸ್ಥಳವಾಗಲು ಹಲವಾರು ರೀತಿ ಕೊಡುಗೆಗಳನ್ನು ನೀಡಿದರು.

ಬೆಂಗಳೂರು ಗ್ರಾಮಾಂತರ ಜಿಲ್ಲೆಯನ್ನು ಮೈಸೂರು ಅರಸರ ಅಧೀನದಲ್ಲಿದ್ದು ನಂತರದ ದಿನಗಳಲ್ಲಿ ಹೈದರಾಲಿ ವಶಪಡಿಸಿಕೊಂಡನು ಹೈದರಾಲಿಯು ದೇವನಹಳ್ಳಿಯನ್ನು ವಶಪಡಿಸಿಕೊಂಡು 1753ರಲ್ಲಿ ಟಿಪ್ಪು ಸುಲ್ತಾನ್ ಜನಿಸಿದನು. (ಹುಟ್ಟಿದ ನೆನಪಿಗೋಸ್ಕರ) ಈ ಸ್ಥಳಕ್ಕೆ ಯುಸೋಫ್‌ಬಾದ್ ಎಂಬ ನಾಮಕರಣ ಮಾಡಿದನು. ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಕಾಲದಲ್ಲಿ ದೇವನಹಳ್ಳಿಯೆಂಬ ಸ್ಥಳವು ಮುಖ್ಯವಾದ ಪಟ್ಟಣವಾಯಿತು. ನಂತರದ ದಿನಗಳಲ್ಲಿ ಬ್ರಿಟೀಷರು ದೇವನಹಳ್ಳಿ ತಾಲ್ಲೂಕನ್ನು ವಶಪಡಿಸಿಕೊಂಡರು[48].

ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಹಳೆ ಶಿಲಾಯುಗ ಬೃಹತ್ ಶಿಲಾಯುಗ ಪ್ರಾಚೀನ ಕಾಲ ಮಧ್ಯಕಾಲೀನ ಆಧುನಿಕ ಕಾಲದಲ್ಲಿ ಈ ಜಿಲ್ಲೆಯು ಐತಿಹಾಸಿಕ ಹಿನ್ನೆಲೆಯನ್ನು ಪಡೆದುಕೊಂಡಿದೆ ಇಲ್ಲಿ ಪಾಳೇಯಗಾರರು ಯುದ್ದ ಮಾಡುವಾಗ ಜನರು ವಲಸೆಯನ್ನು

ಮಾಡುತ್ತಿದ್ದರು. ಅಂತಹ ಸಂದರ್ಭದಲ್ಲಿ ಈ ಜಿಲ್ಲೆಯಲ್ಲಿ ಒಂದೊಂದು ಐತಿಹಾಸಿಕ ದೇವಾಲಯಗಳನ್ನು ನಿರ್ಮಾಣ ಮಾಡಲಾಯಿತು ಅದರಿಂದ ಇಂತಹ ದೇವಾಲಯಗಳನ್ನು ಬೆಳಕಿಗೆ ತರುವುದರಲ್ಲಿ ಬಹಳಷ್ಟು ಅಭಿವೃದ್ದಿಯನ್ನು ಪಡಿಸುವ ಉದ್ದೇಶದಿಂದ ಐತಿಹಾಸಿ ಸ್ಥಳಗಳನ್ನು ಗುರುತಿಸಿ ಈ ಜಿಲ್ಲೆಯಲ್ಲಿ ರಾಜರು, ಪಾಳೇಯಗಾರರು, ಮತ್ತು ಬ್ರಿಟೀಷರು ಆಳ್ವಿಕೆಮಾಡಿ ಈ ಜಿಲ್ಲೆಯನ್ನು ಐತಿಹಾಸಿಕವಾಗಿ ಕೊಟ್ಟಂತಹ ಒಂದು ಕೊಡುಗೆಯನ್ನು ನೋಡಬಹುದಾಗಿದೆ.

## 2.7 ಆಧುನಿಕ ಪ್ರವಾಸೋದ್ಯಮದ ಹಿನ್ನೆಲೆ

ಎರಡನೇ ಜಾಗತಿಕ ಯುದ್ಧ ಪ್ರಾರಂಭವಾಗುವ ಮುನ್ನವೇ ಪ್ರವಾಸೋದ್ಯಮದ ಬಗೆಗೆ ಮತ್ತು ಅದರ ಪ್ರಾಮುಖ್ಯತೆಯನ್ನು ಆಡಳಿತಾಂಗ ಗಮನಿಸಿತ್ತು. ಎರಡನೇ ಜಾಗತಿಕ ಮಹಾಯುದ್ಧವು ಈ ನಿಟ್ಟಿನಲ್ಲಿ ಕೈಗೊಳ್ಳಬೇಕಾದ ಕ್ರಮಗಳನ್ನು ತಡೆಮಾಡುವಂತೆ ಪ್ರೇರೇಪಿಸುತ್ತಿದೆ ಜನರು ಪ್ರವಾಸೋದ್ಯಮದಿಂದ ಹಿಂದೆ ಸರಿಯುವಂತೆ ಮಾಡಿತ್ತು. ನಾಡಿನ ಪ್ರವಾಸಿ ಸಂಚಾರದ ಆಗುಹೋಗುಗಳ ಬಗೆಗೆ ಸಮೀಕ್ಷಿಸುವುದು ಮತ್ತು ಸಂಚಾರವನ್ನು ಉತ್ತಮಗೊಳಿಸಲು ಮತ್ತು 1945ರ ನಂತರ ಭಾರತದ ಪ್ರವಾಸೋದ್ಯಮ ಯಾವ ರೀತಿ ಬೆಳೆಯಬಹುದೆಂಬುದು ಈ ಅಂಶಗಳಿಂದ ನಮಗೆ ತಿಳಿಯಬಹುದು.

ಮಹಾಯುದ್ಧ ಅಂತ್ಯವಾದ ನಂತರ ದೇಶಿಯ ಮತ್ತು ವಿದೇಶಿಯ ಪ್ರವಾಸ ಸಂಚಾರದ ಸ್ವರೂಪವನ್ನು ಅವಲೋಕಿಸಿ, ಪ್ರವಾಸಿಗರ ಸಂಚಾರವನ್ನು ಅಭಿವೃದ್ಧಿಪಡಿಸಲು ಭಾರತದಲ್ಲಿರುವ ಅವಕಾಶಗಳನ್ನು ಪರಿಶೀಲಿಸುವುದು.

1. ಭಾರತವು ಹೊಂದಿರುವ ಐತಿಹಾಸಿಕ ನೆಲೆಗಳು ಧಾರ್ಮಿಕ ಕ್ಷೇತ್ರಗಳು ಅಥವಾ ತೀರ್ಥಯಾತ್ರಾ ಕ್ಷೇತ್ರಗಳು, ನಿಸರ್ಗ ತಾಣಗಳು, ಉತ್ತಮ ಹವಾಗುಣ ಹೊಂದಿರುವ ರಜಾ ದಿನಗಳನ್ನು ಕಳೆಯುವ ತಾಣಗಳನ್ನು ಗುರುತಿಸುವುದು ಮತ್ತು ಈ ಸ್ಥಳಗಳಿಗೆ ವಿದೇಶಿಯ ಪ್ರವಾಸಿಗರನ್ನು ಆಕರ್ಷಿಸಲು ಅಗತ್ಯವಾದ ಕರ್ಮಗಳನ್ನು ಸೂಚಿಸುವುದು.
2. ಸ್ವದೇಶಿ ಮತ್ತು ವಿದೇಶಿಯ ಪ್ರವಾಸಿಗರಿಗೆ ಮೇಲೆ ಉಲ್ಲೇಖಿಸಿದ ಪ್ರವಾಸಿ ಸ್ಥಳಗಳಲ್ಲಿ ಸೌಲಭ್ಯಗಳನ್ನು ಒದಗಿಸುವುದು. ಇಂತಹ ತಾಣಗಳಿಗೆ ಮಾರ್ಗದರ್ಶಿ ಸಾಹಿತ್ಯವನ್ನು ಒದಗಿಸುವ ಮುಂತಾದ ಕ್ರಮಗಳನ್ನು ಸೂಚಿಸಲು ಭಾರತ ಸರ್ಕಾರವು ಪ್ರಾಂತ್ಯ ಸರ್ಕಾರಕ್ಕೆ ಮತ್ತು ಸ್ಥಳೀಯ ಸರ್ಕಾರದ ವಿವಿಧ ಇಲಾಖೆಗಳ ಸಮನ್ವಯದೊಂದಿಗೆ ಪ್ರವಾಸಿಗರಿಗೆ ಒದಗಿಸಬಹುದಾದ ಸೌಲಭ್ಯಗಳೊಂದಿಗೆ ಶಿಫಾರಸ್ಸು ಮಾಡುವ ಮತ್ತು ಈ ಮೇಲೆ

ಉಲ್ಲೇಖಿಸಿದ ನಿಬಂಧನೆಗಳಲ್ಲಿ ಸೇರ್ಪಡೆಯಾಗದ ಪ್ರವಾಸಿಗರಿಗೆ ಅನುಕೂಲವಾಗುವ ಇತರ ಯೋಜನೆಗಳನ್ನು ಸೂಚಿಸುವ ಅಧಿಕಾರ ವ್ಯಾಪ್ತಿಯನ್ನು ಹೊಂದಿತ್ತು.

ಭಾರತ ಸ್ವಾತಂತ್ರ್ಯ ಗಳಿಸುವ ಸಂದರ್ಭದಲ್ಲಿ ದೇಶಿಯ ಮತ್ತು ವಿದೇಶಿಯ ಪ್ರವಾಸಿಗರನ್ನು ಅವರ ಅವಶ್ಯಕತೆಗೆ ಸಂಬಂಧಿಸಿದಂತೆ ಸ್ಥಾನಿಕ ಸೌಲಭ್ಯಗಳನ್ನು ಒದಗಿಸುವ ಹೋಟೆಲ್‌ಗಳು, ಛತ್ರಗಳು, ಸಾರಿಗೆ ಮತ್ತು ರೈಲ್ವೆ ವ್ಯವಸ್ಥೆ ಇದ್ದಿತಾದರೂ ಇವೆಲ್ಲವೂ ಪರಸ್ಪರ ಸಹಕಾರದೊಂದಿಗೆ ಕಾರ್ಯನಿರ್ವಹಿಸುತ್ತಿರಲಿಲ್ಲ.

ಸ್ವಾತಂತ್ರ್ಯ ನಂತರದ ಭಾರತ ಸಂಚಾರ ವ್ಯವಸ್ಥೆಯ ಬೆಳವಣಿಗೆ. ಇತ್ತೀಚಿನ ದಿನಗಳಲ್ಲಿ ವೈಮಾನಿಕ ಸಂಚಾರ ಕ್ಷೇತ್ರದಲ್ಲಿ ಉಂಟಾದ ಪ್ರಗತಿ, ಪ್ರವಾಸೋದ್ಯಮದ ಮೇಲೆ ಗಾಢವಾದ ಪ್ರಭಾವವನ್ನು ಬೀರಿದೆ. ಹೀಗಾಗಿ ಭಾರತದಲ್ಲಿ ಪ್ರವಾಸೋದ್ಯಮವು ಅಭಿವೃದ್ಧಿಯಾಗುತ್ತಿರುವ ಪ್ರಮುಖ ಕ್ಷೇತ್ರವಾಗಿ ಬೆಳೆದಿದೆ.

ಭಾರತದ ಮಟ್ಟಿಗೆ ಹೇಳುವುದಾದರೆ 1963ರಲ್ಲಿ ಸರ್ಕಾರದಿಂದ ರಚಿತವಾದ ತತ್ಪೂರ್ಥಿ ಪ್ರವಾಸ ಸಂಚಾರ ಸಮಿತಿ ಅಥವಾ **ಜಾ ಕಮಿಟಿ** ಎಂದು ಹೆಸರಾಗಿರುವ ಸಮಿತಿಯ ಶಿಫಾರಸ್ಸಿನಂತೆ 1964–65ರಲ್ಲಿ ಹಣಕಾಸಿನ ವರ್ಷದಲ್ಲಿ ಭಾರತ ಸರ್ಕಾರ – ಭಾರತದಲ್ಲಿ ಪ್ರವಾಸೋದ್ಯಮವನ್ನು ಅಭಿವೃದ್ಧಿಪಡಿಸಲು ಮೂರು ಪ್ರಮುಖ ನಿಗಮಗಳನ್ನು ಸ್ಥಾಪಿಸಿಗ್ಗಿ[49]. 1964ರ ಜನವರಿಯಲ್ಲಿ ಭಾರತೀಯ ಪ್ರವಾಸೋದ್ಯಮ ಹೋಟೆಲ್ ಕಾರ್ಪೋರೇಷನ್ ಇದು ನಂತರದ ದಿನಗಳಲ್ಲಿ ಹೋಟೆಲ್ ಕಾರ್ಪೋರೇಷನ್ ಇಂಡಿಯಾ ಎಂದು ಮರುನಾಮಕರಣಗೊಂಡಿತು. 1964 ಡಿಸೆಂಬರ್‌ನಲ್ಲಿ **"ಇಂಡಿಯಾ ಟೂರಿಸಂ ಟ್ರಾನ್ಸ್‌ಪೋರ್ಟ್ ಅಂಡರ್‌ಟೇಕನ್ ಲಿಮಿಟೆಡ್"** ಎಂಬ ನಿಗಮ ಸ್ಥಾಪನೆಯಾಯಿತು. ಆನಂತರ 1965ರ ಮಾರ್ಚ್‌ನಲ್ಲಿ ಇಂಡಿಯಾ ಟೂರಿಸಂ ಕಾರ್ಪೋರೇಷನ್ ಸ್ಥಾಪಿತವಾಯಿತು[50]. 1966ರಲ್ಲಿ ಈ ಮೂರು ವಿವಿಧ ನಿಗಮಗಳನ್ನು ಅಂದರೆ ವಸತಿ, ಸಾರಿಗೆ, ಪ್ರವಾಸೋದ್ಯಮದ ಪ್ರಚಾರವನ್ನು ನೋಡಿಕೊಳ್ಳುತ್ತಿದೆ. ಮೇಲೆ ಹೇಳಿದ ಮೂರು ಪ್ರತ್ಯೇಕ ನಿಗಮಗಳನ್ನು ಇಂಡಿಯಾ ಟೂರಿಸಂ ಡೆವಲಪ್‌ಮೆಂಟ್ ಕಾರ್ಪೋರೇಷನ್ (ಭಾರತೀಯ ಪ್ರವಾಸೋದ್ಯಮ ಅಭಿವೃದ್ಧಿ ನಿಗಮ) ಎಂಬ ಹೆಸರಿನೊಂದಿಗೆ ಒಂದೇ ನಿಗಮವಾಗಿ ಪರಿವರ್ತಿಸಲಾಯಿತು. ಈ ಸಂಸ್ಥೆ 1966 ಅಕ್ಟೋಬರ್ 1 ರಿಂದ ಇದೇ ಹೆಸರಿನಿಂದ ಭಾರತದಾದ್ಯಂತ ಪ್ರವಾಸಿಗರಿಗೆ ಸೇವೆಯನ್ನು ಒದಗಿಸುತ್ತದೆ[51].

ಪ್ರವಾಸಿಗರನ್ನು ಪ್ರವಾಸ ಕ್ಷೇತ್ರಗಳಿಗೆ ಕೊಂಡೊಯ್ಯಲು ಸಾರಿಗೆ ವ್ಯವಸ್ಥೆಯನ್ನು ಮಾಡುವ ಪ್ರವಾಸಿಗರಿಗೆ ಮನರಂಜನೆಯನ್ನು ನೀಡುವ ಸಲುವಾಗಿ ಸಾಂಸ್ಕೃತಿಕ ಕಾರ್ಯಕ್ರಮಗಳು, ಸಂಗೀತ ಕಛೇರಿಗಳು ಭಾರತೀಯ ಇತಿಹಾಸ ಮತ್ತು ಪರಂಪರೆಯ್ನು ಬಿಂಬಿಸುವ ಬೆಳಕು ಮತ್ತು ಶಬ್ಧದ

ಸಂಯೋಜನೆಯ ಕಾರ್ಯಕ್ರಮಗಳನ್ನು ಆಯೋಜಿಸುತ್ತಿದೆ ಪ್ರವಾಸಿಗರು ಭಾರತೀಯ ಮಾರುಕಟ್ಟೆಯಲ್ಲಿ ದೊರೆಯುವ ಕರಕುಶಲ ವಸ್ತುಗಳನ್ನು ಮತ್ತು ಅವಶೇಷ ಉತ್ಪನ್ನಗಳನ್ನು ಇಚ್ಚೆ ಪಟ್ಟುಕೊಳ್ಳಲು ಅಪೇಕ್ಷಿಸಿದಾಗ ಅದಕ್ಕೆ ಅನುಕೂಲವಾಗುವಂತೆ ಆಯಾ ಸ್ಥಳಗಳಲ್ಲಿ ಮೇಲೆ ಹೇಳಿದ ವಸ್ತುಗಳ ಮಳಿಗೆಗಳನ್ನು ತೆರೆಯುವುದು ಅಲ್ಲದೆ, ಪ್ರವಾಸೋದ್ಯಮವನ್ನು ಅಭಿವೃದ್ಧಿಪಡಿಸಲು ಪ್ರಾದೇಶಿಕ ಮತ್ತು ರಾಷ್ಟ್ರೀಯ ವಿಶೇಷತೆಯನ್ನು ಪ್ರಚಾರಮಾಡುವ ಉದ್ದೇಶಗಳನ್ನೊಂದಿದೆ. ಅಲ್ಲದೇ ಈ ನಿಗಮವು ಭಾರತದಲ್ಲಿ ಖಾಸಗಿ ಒಡೆತನದ ಪ್ರವಾಸಿ ಸಂಸ್ಥೆಗಳು ಈ ಮೇಲ್ಕಂಡ ಉದ್ಯೋಗಗಳನ್ನು ನಿರ್ವಹಿಸುವವರಿಗೆ ಅಂದರೆ ಉತ್ತಮ ವಸತಿ ಸೌಕರ್ಯವನ್ನು ನೀಡುವ ವಸತಿ ಗೃಹಗಳು ಪಿ.ಎ.ಟಿ.ಎ ಪುರಸ್ಕಾರವನ್ನು ನೀಡಿ ಪ್ರೋತ್ಸಾಹಿಸುತ್ತದೆ ವಿನೂತನತೆಗೆ ಉತ್ತಮ ಆಡಳಿತ ನಿರ್ವಹಣೆಗೆ ಉತ್ಪಾದಕತೆಗೆ ಮತ್ತು ಉತ್ಪಾದಕತೆಯಲ್ಲಿ ಉತ್ತಮ ಗುಣಮಟ್ಟವನ್ನು ಕಾಯ್ದುಕೊಳ್ಳುವಂತೆ ನೋಡುತ್ತವೆ. ದಿವಂಗತ ರಾಜೀವ್ ಗಾಂಧಿಯವರ ಹೆಸರಿನಲ್ಲಿ ರಾಷ್ಟ್ರಮಟ್ಟದ ಅತ್ಯುತ್ತಮ ಸೇವೆಗಳಿಗೆ ರಾಷ್ಟ್ರೀಯ ಪುರಸ್ಕಾರವನ್ನು ನೀಡುತ್ತದೆ. ಹೀಗಾಗಿ ಭಾರತದಲ್ಲಿ ಪ್ರವಾಸೋದ್ಯಮ ಕಳೆದೆರಡು ದಶಕಗಳಲ್ಲಿ ಮತ್ತಷ್ಟು ಅಭಿವೃದ್ಧಿಗೊಳ್ಳುತ್ತಿದೆ[52].

## 2.8 ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪ್ರವಾಸೊದ್ಯಮದ ತಾಣಗಳ ವಿವರಣೆ

ಇತಿಹಾಸವು ಪ್ರವಾಸೋದ್ಯಮವನ್ನೆ ಸೃಷ್ಟಿಸುವ ಪ್ರಮುಖವಾದ ಅಂಶವಾಗಿರಬಹುದು. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಐತಿಹಾಸಿಕ ಸ್ಥಳಗಳನ್ನೆ ಕೆಲವೊಂದು ಗುರುತಿಸಬಹುದು. ದೇವಾಲಯಗಳು, ಮಸೀದಿಗಳು, ಕೋಟೆಗಳು, ಶಿಲ್ಪಕಲೆ, ಬೆಟ್ಟಗುಡ್ಡ, ಚರ್ಚ್‌ಗಳು ಇತ್ಯಾದಿ ಇದ್ದರಿಂದ ಪ್ರವಾಸಿಗರನ್ನ ಸೆಲೆಯುವ ಶಕ್ತಿ ಹೊಂದಿದೆ. ಜಿಲ್ಲೆಯಲ್ಲಿ ಅತಿ ಹೆಚ್ಚಾಗಿ ಐತಿಹಾಸಿಕ ಹಿನ್ನೆಲೆಯುಳ್ಳ ಸ್ಥಳಗಳನ್ನ ನೋಡಬಹುದು. ಅತಿ ಹೆಚ್ಚಾಗಿ ಪ್ರವಾಸಿಗರು ಐತಿಹಾಸಿಕ ಪ್ರವಾಸವನ್ನೆ ಅತಿ ಹೆಚ್ಚಾಗಿ ಕೈಗೊಳ್ಳುತ್ತಾರೆ. ಮೂಲತಃ ಪ್ರವಾಸೋದ್ಯಮ ಆರಂಭವಾದದೇ ಈ ಐತಿಹಾಸಿಕ ಸ್ಥಳದಿಂದಲೇ ಪ್ರವಾಸೋದ್ಯಮ ಬೆಳೆದರೆ ಇತಿಹಾಸವು ಬೆಳೆಯುತ್ತದೆ. ಇದೇ ರೀತಿಯಲ್ಲಿ ಮುಂದಿನ ದಿನಗಳು ಇತಿಹಾಸವು ಪ್ರವಾಸೋದ್ಯಮಕ್ಕೆ ಹೆಚ್ಚಿನ ಕೊಡುಗೆ ನೀಡಿದ್ದು, ಅದರ ಸಿಂಹಪಾಲು ಉತ್ಪನ್ನಗಳಲ್ಲಿ ಹಂಚಿಕೊಂಡಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಒಂದು ಸಂಸ್ಕೃತಿಕ ಪರಂಪರೆಯುಳ್ಳ ಜಿಲ್ಲೆಯಾಗಿದೆ. ಇದರಲ್ಲಿ ಅಲ್ಪಸಂಖ್ಯಾತ ದೇವಾಲಯಗಳು, ಕೋಟೆಗಳು, ಗೋಪುರಗಳು, ಶಿಲ್ಪಕಲೆ, ಮಸೀದಿಗಳು, ಚರ್ಚ್‌ಗಳು ಇವೆಲ್ಲಾ ಪ್ರವಾಸಿಗರನ್ನ ಸೆಳೆಯುತ್ತಿವೆ. ಇವೆಲ್ಲಾ ಇತಿಹಾಸದಿಂದಾದ

ಪ್ರವಾಸ ಉತ್ಪನ್ನಗಳಾಗಿವೆ. ಇದರಿಂದ ಈ ಜಿಲ್ಲೆಗೆ ಪ್ರವಾಸಿಗರು ಬರುತ್ತಿದ್ದಾರೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ದೇವಾಲಯಗಳು ಇತಿಹಾಸದ ಮೇರು ಉತ್ಪನ್ನಗಳು ಅವನ್ನು ನೋಡಲು ಪ್ರವಾಸಿಗರು ಬರುತ್ತಾರೆ.

ಅದರಲ್ಲಿ ಪ್ರಮುಖವಾಗಿ ಶಿವಗಂಗೆ (ಗವಿಸಿದ್ದಲಿಂಗೇಶ್ವರ ದೇವಾಲಯ), ಮಧುರೆ ಶನಿಮಹತ್ಮಾ ದೇವಾಲಯ, ಘಾಟಿ ಸುಬ್ರಹ್ಮಣ್ಯ ದೇವಾಲಯ, ಸೊಮೇಶ್ವರ ದೇವಾಲಯ, ವೇಣುಗೋಪಾಲಸ್ವಾಮಿ ದೇವಾಲಯ ದೇವನಹಳ್ಳಿ, ಬಸವನಹಳ್ಳಿಯ ವೆಂಕಟರಮಣ ದೇವಾಲಯ, ವಿಜಯ ವಿಠಲ ದೇವಾಲಯ, ಇಲ್ಲಿರುವಂತೆ ದೇವಾಲಯಗಳನ್ನು ನೊಡಲು ಪ್ರವಾಸಿಗಳ ಮನ ಸೆಳೆಯುತ್ತಿವೆ. ಇವೆಲ್ಲವೂ ಐತಿಹಾಸಿಕ ದೇವಾಲಯ ಆಗಿರುತ್ತಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಹಲವಾರು ನೈಸರ್ಗಿಕದಿಂದ ಕೂಡಿರುವಂತಹ ಸ್ಥಳಗಳನ್ನೆ ಒಳಗೊಂಡಿರುತ್ತದೆ. ಅವು ಯೋಗವ ಬೆಟ್ಟ, ಕೆಂಗಲ್ ಬೆಟ್ಟ, ಮಾಕಳಿ ದುರ್ಗ, ಹಲ್ಲತಿ ಬೆಟ್ಟ, ಕುಂದಾನ ಬೆಟ್ಟ, ಜೈನ ಮಂದಿರ, ಬರಡಿ ರಾಮೇಶ್ವರ ಬೆಟ್ಟ, ಸ್ಕಂದಗಿರಿ ಬೆಟ್ಟ ಇವೆಲ್ಲವು ಐತಿಹಾಸಿಕ ಹಿನ್ನೆಲೆಯನ್ನು ಒಳಗೊಂಡಿರುವ ನೈಸರ್ಗಿಕ ಪ್ರವಾಸಿ ತಾಣಗಳಾಗಿವೆ ಮತ್ತು ಅರಣ್ಯ ಪ್ರದೇಶಗಳು, ರೈತರ ತೋಟಗಳು, ಕೈಗಾರಿಕೆ ಪ್ರದೇಶಗಳು ಇವೆಲ್ಲವು ಬೆಂಗಳೂರು ಗ್ರಾಮಾಂತರ ಪ್ರದೇಶದಲ್ಲಿ ಪ್ರಮುಖವಾದ ಪ್ರವಾಸಿ ಸ್ಥಳಗಳಾಗಿವೆ.

ಜಿಲ್ಲೆಯಲ್ಲಿ ಅತ್ಯಂತ ಪ್ರಾಚೀನ ದೇವಾಲಯಗಳನ್ನು ಒಳಗೊಂಡಿದ್ದು ಅದನ್ನು ಗಂಗರು, ಹೊಯ್ಸಳರು, ಕೆಂಪೇಗೌಡರ ಕಾಲದಲ್ಲಿ ನಿರ್ಮಾಣ ಮಾಡಲಾಗಿದ್ದು, ಅವುಗಳ ಐತಿಹಾಸಿಕ ಪ್ರವಾಸಕ್ಕೆ ಯೋಗ್ಯವಾದ ತಾಣವಾಗಿದೆ. ಮತ್ತು ಅದ್ದರಿಂದ ಗ್ರಾಮಾಂತರ ಜಿಲ್ಲೆಯ ಪ್ರವಾಸೋದ್ಯಮ ಬೆಳೆಯುವುದಕ್ಕೆ ಪ್ರಮುಖವಾದ ಕಾರಣವಾಗಿದೆ. ಗ್ರಾಮಾಂತರ ಪ್ರದೇಶ ಸಾಂಸ್ಕೃತಿಕ ಒಂದು ಅಂಶ ಪ್ರಮುಖವಾಗಿರುತ್ತಿದೆ. ಹಳ್ಳಿಗಳಲ್ಲಿ ಪ್ರಾಚೀನತೆಯ ಜೀವನ ಶೈಲಿ ಬೆಳೆಸಿಕೊಂಡಿರುತ್ತದೆ. ಗ್ರಾಮಾಂತರ ಭಾಗದಲ್ಲಿ ಐತಿಹಾಸಿಕ ಉತ್ಸವಗಳು, ಜಾತ್ರೆ, ಹಬ್ಬಗಳು, ಸ್ಥಳೀಯ ಕಾರ್ಯಗಳು, ನಾಟಕಗಳು, ಸಂಗೀತ ಮನರಂಜನೆಯ ಸ್ಥಳದಲ್ಲಿ ಸಂಸ್ಕೃತಿಯನ್ನು ಮಾಡಿಸುತ್ತಿದೆ. ಜನರು ಉಡುಗೆಗಳು, ಭಾಷೆ, ಧರ್ಮ, ವೇಷಭೂಷಣಗಳು ಇವೆಲ್ಲವು ಪ್ರವಾಸಿಗರ ಮೇಲೆ ಗಾಢವಾದ ಪರಿಣಾಮವನ್ನು ಬೀರುತ್ತಿದೆ.

ಗ್ರಾಮಾಂತರ ಭಾಗದಲ್ಲಿ ರಾಜ ಮನೆತನದವರು, ಹಲವಾರು ಅರಮನೆಗಳನ್ನು ಪ್ರಾಚೀನ ಕೋಟೆಗಳನ್ನು, ರಾಜರ ಮೂರ್ತಿಗಳನ್ನು, ನಾಣ್ಯಗಳನ್ನು, ಕಲಾತ್ಮಕ ವಸ್ತುಗಳನ್ನು, ದಿನಬಳಕೆ ವಸ್ತುಗಳನ್ನು ಸಂಗ್ರಹಿಸಿ ಆ ಸ್ಥಳದಲ್ಲಿ ಜೋಡಿಸಲಾಗುತ್ತಿದೆ. ಉದಾ:– ಶಿವಗಂಗೆಬೆಟ್ಟ

ಗವಿಗಂಗಾಧರೇಶ್ವರ ದೇವಾಲಯದಲ್ಲಿ ಕೆಂಪೇಗೌಡರ ಮೂರ್ತಿ ಇದೆ ಅದರಲ್ಲಿ ಅವನ ಕಾಲದ ಶಶಸ್ತ್ರಗಳು, ವೇಷ ಭೂಷಣ ಬಟ್ಟೆಗಳನ್ನ ಇಲ್ಲಿ ನೋಡಬಹುದು.

ಇತಿಹಾಸ ಪ್ರವಾಸೋದ್ಯಮವನ್ನು ಅಭಿವೃದ್ದಿಯನ್ನು ಮಾಡಲು ಒಂದು ಅಂಶವನ್ನು ಒಳಗೊಂಡಿರುತ್ತದೆ. ಇತಿಹಾಸದ ನಿರ್ಮಾಣವಾಗಲು ದೇವಾಲಯಗಳು, ಕೋಟೆಗಳು, ಅರಮನೆಗಳು, ಮಸೀದಿ, ಚರ್ಚ್‌ಗಳ ಶಿಲ್ಪಕಲೆ, ಚಿತ್ರಕಲೆ ಮುಂತಾದವು ಉತ್ಪಾದನೆಯಾಗಿವೆ. ಅವುಗಳಲ್ಲಿ ಪ್ರವಾಸಿಗರನ್ನು ಸೆಳೆಯುವ ಶಕ್ತಿ ಇದೆ. ಅವು ಪ್ರವಾಸಿಗರನ್ನು ಅವು ನೋಡಬಯಸುತ್ತಿವೆ. ಕೆಲವರು ಗತಕಾಲದ ನೆನಪಿಗಾಗಿ ಪ್ರವಾಸಿಗರು ಅದನ್ನೆ ನೋಡ ಬಯಸುತ್ತಾರೆ.

ಪ್ರವಾಸಿಗರು ನಾನಾ ಉದ್ದೇಶಗಳಿಂದ ಪ್ರವಾಸವನ್ನ ಕೈಗೊಂಡು ಅವರು ಉದ್ದೇಶ ಐತಿಹಾಸಿಕ ಸ್ಥಳಗಳನ್ನು ಭೇಟಿಯನ್ನು ನೀಡುತ್ತಾರೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಐತಿಹಾಸಿಕ ಸ್ಥಳಗಳಿಂದಲೇ ನಿಜವಾದ ಪ್ರವಾಸದ ಆಕರ್ಷಣೆ ಇರುವುದು ಅವುಗಳು ಶಿವಗಂಗೆಬೆಟ್ಟ, ನಿಜಗಲ್ ಬೆಟ್ಟ, ಹೆಗೊಂದ ಬೆಟ್ಟ, ಕೆಂಗಲ್ ಬೆಟ್ಟ, ಬರದಿರಾಮೇಶ್ವರ ಬೆಟ್ಟ, ಮಣ್ಣೆ ಸೋಮೇಶ್ವರ ದೇವಾಲಯ, ಹುಲ್ಲಡಿ ಬೆಟ್ಟ, ಕುಂದನಾ ಬೆಟ್ಟ, ದೇವನಹಳ್ಳಿ ಕೋಟೆ, ದೇವನಹಳ್ಳಿ ಜೈನ ಮಂದಿರ, ಮಧುರೆ ಶನಿಮಹಾತ್ಮ ದೇವಾಲಯ, ಅವತಿ ಬೆಟ್ಟ ಇವೆಲ್ಲವು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಬರುವಂತಹ ಐತಿಹಾಸಿಕ ದೇವಾಲಯ ಆಕರ್ಷಣೆಯಿಂದ ಪ್ರವಾಸಿ ಕೇಂದ್ರಗಳಾಗಿ ಬೆಳೆದಿರುವುದು ಇತಿಹಾಸದಿಂದಲೇ ಇತಿಹಾಸವಿಲ್ಲದೆ ಪ್ರವಾಸೋದ್ಯಮದಲ್ಲಿ ಹೀಗೆ ಇತಿಹಾಸವು ಪ್ರವಾಸೋದ್ಯಮಕ್ಕೆ ಹೆಚ್ಚಿನ ಕೊಡುಗೆ ನೀಡಿದ್ದು ಅದರ ಸಿಂಹಪಾಲು ಉತ್ಪನ್ನಗಳನ್ನು ಹಂಚಿಕೊಂಡಿದೆ.

**ಉದಾ:–** ಗವಿಗಂಗಾಧರೇಶ್ವರ ದೇವಾಲಯ, ಘಾಟಿ ಸುಬ್ರಹ್ಮಣ್ಯ, ಮಧುರೆ ಶನಿಮಹಾತ್ಮ ದೇವಾಲಯ, ಸೋಮೇಶ್ವರ ದೇವಾಲಯ, ಧರ್ಮರಾಯಸ್ವಾಮಿ ದೇವಾಲಯ, ಆಂಜನೇಯಸ್ವಾಮಿ ದೇವಾಲಯ ಇವೆಲ್ಲವು ಪ್ರಮುಖ ಐತಿಹಾಸಿಕ ಪ್ರವಾಸಿ ತಾಣಗಳಾಗಿ ಬೆಳೆದುಕೊಂಡಿರುತ್ತದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ರಾಷ್ಟ್ರೀಯ ಹೆದ್ದಾರಿಗಳಲ್ಲಿ ಮತ್ತು ತಾಲ್ಲೂಕಿನ ಪ್ರಮುಖವಾದ ಸ್ಥಳಗಳಲ್ಲಿ ಹೋಟೆಲ್‌ಗಳು ಮತ್ತು ರೆಸ್ಟೋರೆಂಟ್‌ಗಳು ಸ್ಥಾಪನೆಗೊಂಡಿದ್ದು ಪ್ರವಾಸಿಗರಿಗೆ ಬೇಕಾದ ಊಟ, ವಸತಿ ಸೌಲಭ್ಯಗಳು ಸಿಗುವಂತಹ ಸೌಲಭ್ಯ ದೊರೆಯುತ್ತಿದೆ. ಒಟ್ಟಿನಲ್ಲಿ ಈ ಜಿಲ್ಲೆಯ ಪ್ರವಾಸವನ್ನು ಕೈಗೊಳ್ಳಬಹುದಾದ ಮೂಲಭೂತ ಸೌಕರ್ಯಗಳು ಒಳಗೊಂಡಿರುತ್ತದೆ.

# ಕೊನೆ ಟಿಪ್ಪಣಿ


1. ಸ್ವಾಮಿ, ಲ. ನ. 2012 *ಪ್ರಾಗೈತಿಹಾಸ ಕಾಲದಲ್ಲಿ ಕರ್ನಾಟಕದ ಸಾಗರೋತ್ತರ ಸಂಬಂಧಗಳು*, ಇತಿಹಾಸ ಧರ್ಪಣ ತ್ರೈಮಾಸಿಕ, (ಸಂ). ಎಸ್ ಕೆ ಅರುಣಿ ಮತ್ತು ಇತರರು, ಸಂಪುಟ 12–13. ಪು.ಸಂ. 109–129
2. ಅದೇ, ಪು.ಸಂ. 111
3. Buchanan Francis 1801 *Journey from Madras, Through the countries of Mysore Canara and Malabar* - vol 01 Londan.
4. http://shodhganga.inflibnet.ac.in/bitstream/10603/61560/11/11_chapter%203.
5. http://www.intach.org/pdf/heritage-tourism.
6. Shankar, S. 2015. Impact of Heritage Tourism in India – A Case Study.*International Journal of Innovative Research in Information Security, 2(6),* P. 59-61.
7. Sudesh Lahori 2000– *India Tourism Destination for all seasons*, Adhyana Publish 2004 P. 05-06, Delhi.
8. ಸ್ವಾಮಿ, ಲ. ನ. 2012 *ಪ್ರಾಗೈತಿಹಾಸ ಕಾಲದಲ್ಲಿ ಕರ್ನಾಟಕದ ಸಾಗರೋತ್ತರ ಸಂಬಂಧಗಳು*, ಇತಿಹಾಸ ಧರ್ಪಣ ತ್ರೈಮಾಸಿಕ, (ಸಂ). ಎಸ್ ಕೆ ಅರುಣಿ ಮತ್ತು ಇತರರು, ಸಂಪುಟ 12–13. ಪು.ಸಂ. 109–129
9. ಅದೇ, ಪು.ಸಂ. 110
10. ಅದೇ, ಪು.ಸಂ. 111
11. ನಾಗಪತಿ.ಕೆ.ಎಸ್. 2012 *ಟೂರಿಸಂ ಡೆವಲಪ್‌ಮೆಂಟ್ ಎ ನ್ಯೂ ಅಪ್ರೋಚ್*, ಜೈಪುರ. ಪು.ಸಂ. 01–05
12. Singhal, Tiwary Awadh and Agarwal Meera 2004 *Glimpses of Tourism in India*. New Delhi. Krishna Publish P. 14-15.
13. ಅದೇ, ಪು.ಸಂ. 14
14. ಅದೇ, ಪು.ಸಂ. 14–15
15. ಅದೇ,
16. ಅದೇ,

ಈ ದೇವರು ಸುತ್ತಮುತ್ತಲಿನ ನೂರಾರು ಕುಟುಂಬಗಳಿಗೆ ಕುಟಂಬ ದೇವತೆ. ವೀರಭದ್ರ ದೇವಾಲಯದ ಪ್ರವೇಶ ದ್ವಾರದಲ್ಲಿ ರಾಯಗೋಪುರವಿದೆ, ದೇವಾಲಯವನ್ನು ನವೀಕರಿಸಲಾಗಿದೆ. 'ನವರಂಗ'ದಲ್ಲಿ ವಿಜಯನಗರ ಸ್ತಂಭಗಳು ಅನೇಕ ಪರಿಹಾರ ಶಿಲ್ಪಗಳನ್ನು ಹೊಂದಿವೆ. ಈ ಸ್ಥಳದ ಇತರ ದೇವಾಲಯಗಳು ದ್ರೌಪದಿ, ಆಂಜನೇಯ, ಮಾರಮ್ಮ ಇತ್ಯಾದಿ.

ಸಾ.ಶ 1331ರ ತಮಿಳು ಭಾಷೆಯ ಕೊಡಿಗೆ ಅರಸನ ಕೆರೆಯ  ಸ್ತಂಭದ ಮೇಲೆ ಈ ಸ್ಥಳವು ಇತರ ಮೂರು ಶಾಸನಗಳನ್ನು ಹೊಂದಿದೆ. ಮೂರನೆ ಬಲ್ಲಾಳ ಅಳ್ವಿಕೆ ನಡೆಸುತ್ತಿದ್ದಾಗ, ಒಬ್ಬ ಅಧಿಕೃತ ಅಮ್ಮನಾಯಕ ಈ ಕೆರೆ ಮತ್ತು ಕಟ್ಟೆಯನ್ನು ನಿರ್ಮಿಸಿದಾನೆ. ಸಾ.ಶ 1337ರ ಮತ್ತೊಂದು ಉದ್ಯಾನವನವು ಅದೇ ರಾಜನ ತಮಿಳು ಭಾಷೆಯ ಖಾಸಗಿ ಉದ್ಯಾನವನದಲ್ಲಿ ಕಂಡು ಬಂದಿದೆ. 'ತುರಗೋಳ್' ಅನ್ನು ಚಿತ್ರಿಸುವ ಒಂದು ವೀರಗಲ್ಲು ಇದ್ದು, ಒಬ್ಬ ಇರಮರಾಸನು ತಮ್ಮರಿಕೈನಲ್ಲಿ ಹಸುಗಳನ್ನು ಸಾಗಿಸುತ್ತಿದ್ದನೆಂದು ಉಲ್ಲೇಖಿಸುತ್ತಾನೆ. ನಲ್ಲೂರು ಪಲ್ಲಿಯ ಪೂರ್ವಕ್ಕೆ ಕೆರೆ ಮಾಡಿ ಗುಂಡೆಟಿಗೆ ಮೃತನಾದನು. ಕೊನೆಯ ದಾಖಲೆಯು ಅದೇ 'ತುರುಗೋಳ್' ಘಟನೆಯ ಮತ್ತೊಂದು ವೀರಗಲ್ಲು ಆಗಿದೆ.

ಇದು ಹೊಸಕೋಟೆಯಿಂದ ಎಂಟು ಕಿ.ಮೀ ದೂರದಲ್ಲಿದೆ. ಅದೇ ಸ್ಥಳದಿಂದ ಸಾ.ಶ 1377 ರ ತಮಿಳು ದಾಖಲೆಯಲ್ಲಿ 'ಪಾಸಿಗೈಪಲ್ಲಿ'ಎಂದು ಉಲ್ಲೇಖಿಸಲಾಗಿದೆ. ಈ ಸ್ಥಳವು ಸೋಮೇಶ್ವರಕ್ಕೆ ಮೀಸಲಿರುವ ಹಳೆಯ ದೇವಾಲಯಕ್ಕೆ ಹೆಸರು ವಾಸಿಯಾಗಿದೆ. ಇದರ ಗರ್ಭಗೃಹ ಮತ್ತು ಅರ್ಧಮಂಟಪ ಗಂಗ ಮನೆತನದ ಕಾಲದವರಂತೆ ಕಂಡು ಬಂದರೆ, ನವರಂಗ ಮತ್ತು ಮುಖಮಂಟಪವನ್ನು ನಂತರ ವಿಜಯನಗರ ಆಡಳಿತಗಾರರು ಸೇರಿಸಿದರು. ನವರಂಗದ ಹೊರ ಗೋಡೆಗಳಲ್ಲಿ ಶಿವತಾಂಡವ, ನರಸಿಂಹವತಾರ, ವಿಷ್ಣು ಮುಂತಾದವರ ಉತ್ತಮ ಪರಿಚಾರಕ ಶಿಲ್ಪಗಳಿವೆ. ಗರ್ಭಗೃಹವು ಹಳೆಯ ಶಿವಲಿಂಗವನ್ನು ಹೊಂದಿದೆ.

ಪಾರ್ವತಿ, ಕಾಲಭೈರವ ಮತ್ತು ವೀರಭದ್ರ ಶಿಲ್ಪಗಳನ್ನು ನವರಂಗದಲ್ಲಿ ಇಡಲಾಗಿದೆ. ನವರಂಗದ ದ್ವಾರದಲ್ಲಿ ನೃತ್ಯ ಮಾಡುವ ಹುಡುಗಿಯರ ಶಿಲ್ಪಗಳು ಮತ್ತು ಶೈವ ಕಂತುಗಳಿವೆ. ನವರಂಗದ ಕಂಬಗಳು ವಿಜಯನಗರ ವೈಶಿಷ್ಟ್ಯಗಳನ್ನು ಹೊಂದಿವೆ. ಈ ಸ್ಥಳವು ಎರಡು ಶಾಸನಗಳನ್ನು ಹೊಂದಿದೆ ಸಾ.ಶ 900 ರಲ್ಲಿ ಕೆರೆಯ ಕಟ್ಟೆಯ ಮೇಲೆ ಹಳ್ಳಿಯ ಪ್ರವೇಶ ದ್ವಾರದಲ್ಲಿ ದೊರೆತ ಮತ್ತೊಂದು ದಾಖಲೆಯು ಎರಡನೇ ಬುಕ್ಕನ ಕಾಲ ಸಾ.ಶ 1379ಕ್ಕೆ ಸೇರಿದೆ.[59] ಒಂದನೇ ನಾಗಣ್ಣ ಒಬ್ಬ ಪೆಟಿಯಾರಾಸ ಮಂತ್ರಿ ವರದಕ್ಷಿಣೆ ರೂಪದಲ್ಲಿ ನಾನು ಪಾಸಿಗೈಪಲ್ಲಿ ಗ್ರಾಮವನ್ನು ವರದಕ್ಷಿಣೆ ರೂಪದಲ್ಲಿ ನೀಡಿದ್ದೇನೆ ಎಂದು ಘೋಷಿಸಿದೆ.

ಪುಲಿಯುರುನಾಡು ತನ್ನ ಮಗಳ ಪುತ್ರ ಕೇಶವಸೆಟ್ಟಿಯಾರ್‌ಗೆ, ಇಸೇವಣ್ಣನ್ ಮತ್ತು ಇತರರು, ಹಸಿಗಾಲದಿಂದ ಎರಡು ಕಿ.ಮೀ ದೂರದಲ್ಲಿರುವ ಕಮ್ಮಸಂದ್ರದಲ್ಲಿ ವೆಂಕಟರಮಣ ಸೋಮೇಶ್ವರ ಮರಿಯಮ್ಮ ಮುಂತಾದ ದೇವಾಲಯಗಳಿವೆ.

ವೆಂಕಟರಮಣ ದೇವಸ್ಥಾನವು ಕೇಶವನ ಒಂದು ಸಡಿಲವಾದ ಚಿತ್ರಣವನ್ನು ಪ್ರಯೋಗ ಚಕ್ರ ಮತ್ತು ಶಂಖವನ್ನು ಮೇಲಿನ ಕೈಯಲ್ಲಿ ಮತ್ತು ಕೆಳಗಿನ ಕೈಗಳನ್ನು ಅಭಯ ಮತ್ತು ಹಸ್ತ ಭಂಗಿಗಳಲ್ಲಿ ಹೊಂದಿದೆ. ಈ ಶಿಲ್ಪವು ಚೋಳ ವೈಶಿಷ್ಟಗಳನ್ನು ಹೊಂದಿದೆ. ಸೋಮೇಶ್ವರ ದೇವಸ್ಥಾನವನ್ನು ಗಂಗ ಶೈಲಿಯಲ್ಲಿ ಸಣ್ಣ ಸ್ತಬ್ದ ಗರ್ಭಗೃಹದೊಂದಿಗೆ ನಿರ್ಮಿಸಲಾಗಿದೆ. ದೇವಾಲಯದ ಹೊರಗೆ ಆರು ಅಥವಾ ಏಳು ಸಂಖ್ಯೆಯ ಕೆಲವು ವೀರಗಲ್ಲುಗಳಿವೆ. ಮತ್ತು ಅವುಗಳಲ್ಲಿ ಒಂದು ಮಹಿಳೆ ನಡೆಸುವ ಸಿಡಿಯನ್ನು ಚಿತ್ರಿಸುತ್ತದೆ. ಚೋಳರ ಕಾಲದ ಅರ್ಧ ಮೀಟರ್ ಎತ್ತರವನ್ನು ಅಳೆಯುವ ಸೂರ್ಯನ ಶಿಲ್ಪವೂ ಇದೆ.

ನವರಂಗದ ಒಳಗೆ ಗಣಪತಿ, ಬ್ರಹ್ಮ ಮತ್ತು ಸ್ಕಂದ (ಗಂಗಾ ಶೈಲಿ) ಶಿಲ್ಪಗಳನ್ನು ಅರ್ಧ ಮೀಟರ್ ಎತ್ತರದಲ್ಲಿ ಇರಿಸಲಾಗಿದೆ. ಮಕರ ಸಂಕ್ರಾಂತಿಯ ಸಮಯದಲ್ಲಿ ಗ್ರಾಮದೇವತೆಯ ಜಾತ್ರೆಯನ್ನು ನಡೆಸಲಾಗುತ್ತದೆ. ಎರಡು ಶಾಸನಗಳು ಕಂಡು ಬಂದು ಒಂದು ರಾಜರಾಜ ಚೋಳರ ಸಾ.ಶ 997 ರಲ್ಲಿ ಖಾಸಗಿ ಮನೆಯ ಹಿಂದೆ, ಇಬ್ಬರು ಅಧಿಕಾರಿಗಳು ಪುನ್ನಿಸಿಯಮ್ಮ ಮತ್ತು ಮರಯ್ಯ ಚಮುಂಡಯ್ಯ ಅವರಿಗೆ ತಮಲೋಪಡಿ ಗ್ರಾಮವನ್ನು ಮಂಜೂರು ಮಾಡಿದ್ದಾರೆ ಎಂದು ಹೇಳಿದ್ದಾರೆ. ಕ್ಷೇತ್ರಗಳ ಮಧ್ಯೆ ಇರುವ ಮತ್ತೊಂದು ಶಾಸನವನ್ನು ಎರಡನೇ ಬಲ್ಲಾಳ ಕಾಲದಾಗಿದೆ, ತಮಿಳು ಭಾಷೆಯಲ್ಲಿ 1343 ಎಂದು ನಮೂದಿಸಲಾಗಿದೆ. ಇದು ಅವರ ಮಹಾನ್ ಮಂತ್ರಿ ವೆಟ್ಟರಸ ದನ್ನಾಯಕ ಅವರು ಕೆಲವು ಅಧಿಕಾರಿಗಳನ್ನು ನಂಬಿರವಿ ಸೆಟ್ಟಿಯಾರ್ ಎಂಬ ಅಧಿಕಾರಿಗೆ ನೀಡಿದ್ದಾರೆ ಎಂದು ಘೋಷಿಸುತ್ತದೆ.

## ಹೊಸಕೋಟೆ ಸ್ಥಳೀಯ ಐತಿಹಾಸಿಕ ಹಿನ್ನೆಲೆ

ವೀರಶೈವ ಮಠಕ್ಕೆ ನೀಡಲಾದ ಸಾ.ಶ 1494ರ ತಾಮ್ರ ಶಾಸನವು ಹೇಳುವಂತೆ ಅನುದಾನದ ಪ್ರಕಾರ ಈ ಸ್ಥಳವನ್ನು ಸುಗತೂರಿನ ಮುಖ್ಯಸ್ಥ ತಮ್ಮೇಗೌಡ ಸ್ಥಾಪಿಸಿದರು. ಎರಡು ಮೈಲಿಗಳಷ್ಟು ಉದ್ದದ ಒಡ್ಡು ಹೊಂದಿರುವ ದೊಡ್ಡ ಕೆರೆಗೆ ಈ ಸ್ಥಳವು ಹೆಸರುವಾಸಿಯಾಗಿದೆ.[60] ಮತ್ತು ಪೂರ್ಣಗೊಂಡಾಗ 12 ಕಿ.ಮೀ ಗಿಂತಲೂ ಕಡಿಮೆ ಸುತ್ತಳತೆಯ ನೀರಿನ ಹಾಳೆಯನ್ನು ರೂಪಿಸುತ್ತದೆ. ತಮ್ಮೆಗೌಡ ಈ ಕೆರೆಯನ್ನು ನಿಮಿಸಿದನೆಂದು ಹೇಳಲಾಗುತ್ತದೆ. ಮತ್ತು ಸಶಸ್ತ್ರ ಪಡೆಗಳನ್ನು ಬೆಳೆಸುವ ಮೂಲಕ ಅವನು ಅನೇಕಲ್, ಮುಳಬಾಗಿಲು ಮತ್ತು ಪುಂಗನೂರಿನಂತಹ

ಸ್ಥಳಗಳನ್ನು ಸ್ವಾದೀನಪಡಿಸಿಕೊಂಡನು. ಅವನ ನಂತರ ಆತನ ಉತ್ತರಾಧಿಕಾರಿಗಳು ಸಾ.ಶ 1683 ರವರೆಗೆ ಆಳ್ವಿಕೆ ನಡೆಸಿದರು. ಸ್ವಲ್ಪ ಸಮಯದ ನಂತರ ಈ ಪ್ರದೇಶವನ್ನು ಬಿಜಾಪುರ ಸೈನ್ಯವು ವಶಪಡಿಸಿಕೊಂಡಿತು ಮತ್ತು ತರುವಾಯ ಬೆಂಗಳೂರಿನಲ್ಲಿ ನೆಲೆಸಿದ್ದ ಶಾಹಜಿಗೆ ಜಹಗೀರ್ ಆಗಿ ನೀಡಿ ಗೌರವಿಸಲಾಯಿತು. ಅವನು ಯಶವಂತ್‌ರಾವ್ ಎಂಬ ಅಧಿಕಾರಿಯನ್ನು ಇಲ್ಲಿ ನೇಮಕ ಮಾಡಲಾಗಿತ್ತು.

ಸಾ.ಶ 1687ರಲ್ಲಿ ಖಾಸಿಮ್ ಖಾನ್ ನೇತೃತ್ವದಲ್ಲಿ ಮೊಘಲ್ ಸೈತ್ಯವು ಈ ಜಿಲ್ಲೆಗಳನ್ನು ವಶಪಡಿಸಿಕೊಂಡಾಗ ಅವರು ಸಿರಾ ಪ್ರಾಂತ್ಯದ ಭಾಗವಾದರು. ಸಾ.ಶ 1756ರಲ್ಲಿ ಹೊಸಕೋಟೆ ಅನ್ನು ಮೈಸೂರು ಸೈನ್ಯವು ತೆಗೆದುಕೊಂಡಿತು, ಆದರೆ ಅದನ್ನು ಮರಾಠರು ವಶಪಡಿಸಿಕೊಂಡರು. ಅಂತಿಮವಾಗಿ ಇದನ್ನು ಸಾ.ಶ 1761 ರಲ್ಲಿ ಹೈದರ್ ಅಲಿ ಸ್ವಾದೀನಪಡಿಸಿಕೊಳ್ಳುವವರೆಗೂ ಅದು ಹಲವಾರು ಬಾರಿ ದಾಳಿಗಳನ್ನು ಮಾಡಲಾಯಿತು.[61]

## ಲಕೊಂಡಹಳ್ಳಿ

ಲಕೊಂಡಹಳ್ಳಿಯು ಸಾ.ಶ 1380 ರ ದಾಖಲೆಯಲ್ಲಿ ಇದನ್ನು ಹಲ್ಲೂರ್ನಾಡ್ ಲಕ್ಕಗೊಂಡನಹಳ್ಳಿ ಎಂದು ಉಲ್ಲೇಖಿಸಲಾಗಿದೆ.[62] ಈ ಸ್ಥಳವು ಬನ್ನೇಶ್ವರ ಮತ್ತು ವೆಂಕಟರಮಣ ಎಂಬ ಎರಡು ಹಳೆಯ ದೇವಾಲಯಗಳಿಗೆ ಹೆಸರುವಾಸಿಯಾಗಿದೆ. ಬನ್ನೇಶ್ವರ ದೇವಸ್ಥಾನದಲ್ಲಿ ಗರ್ಭಗೃಹ ಮತ್ತು ಅದರ ಮೇಲೆ ನವೀಕರಿಸಿದ ಶಿಖರವಿದೆ. ಈ ದೇವಾಲಯವನ್ನು ಗಂಗ, ಚೋಳ ಶೈಲಿಯಲ್ಲಿ ನಿರ್ಮಿಸಲಾಗಿದೆ. ಎಂದು ಗರ್ಭಗೃಹದ ನಂತರ ವಿಜಯನಗರ ಆಡಳಿತಗಾರರು ಸೇರಿಸಿದ ನವರಂಗಕ್ಕೆ ಕಾರಣವಾಗುವ ಒಂದು ಕುರುಹು ತಿಳಿಸುತ್ತದೆ.

ನವರಂಗದ ಸ್ತಂಬಗಳು ಉತ್ತಮವಾದ ಪರಿಕ್ರಮಗಳನ್ನು ಹೊಂದಿವೆ. ಇದನ್ನು ಎದುರಿಸುವುದು ದೂರದಲ್ಲಿ ಗಂಗ ವೈಶಿಷ್ಟ್ಯಗಳೊಂದಿಗೆ ವೃತ್ತಾಕಾರದ ಕಂಬಗಳನ್ನು ಹೊಂದಿರುವ ಇದು ಬೇರ್ಪಟ್ಟ ಮಂಟಪ ಅದರ ಸಮೀಪದಲ್ಲಿ ಸ್ಥಳೀಯ ಬನ್ನೇಶ್ವರ ದೇವಾಲಯವು ಕೆರೆಯ ದಂಡೆಯಲ್ಲಿ ಮಹೇಶ್ವರಮ್ಮ ಮತ್ತು ಪಟಲಮ್ಮ ಶಿಲ್ಪಗಳನ್ನು ಹೊಂದಿರುವ ದೇವಾಲಯವನ್ನು ಹೊಂದಿದೆ. ನಂತರ ಚೋಳ ಶೈಲಿಯಲ್ಲಿ ನಿರ್ಮಿಸಲಾದ ವೆಂಕಟರಮಣವನ್ನು ವಿಜಯನಗರ ಕಾಲದಲ್ಲಿ ನವೀಕರಿಸಲಾಗಿದೆ.

ಮುಖಮಂಟಪದಲ್ಲಿ ಅನೇಕ ವಿಜಯನಗರ ಸ್ತಂಭಗಳಿದ್ದು, ಸುಂದರವಾದ ಶಿಲ್ಪಗಳನ್ನು ಗಂಡಭೇರುಂಡ ಸೇರಿದಂತೆ ಕೆತ್ತನೆಗಳಿವೆ. ಅವತಿಯಲ್ಲಿ ಮಾಡಲ್ಪಟ್ಟಿದೆ ಎಂದು ಹೇಳಲಾದ

ಕಂಚಿಯ ಸುಂದರವಾದ ಉತ್ಸವಮೂರ್ತಿಗಳು ಇವೆ. ಅಂಜನೇಯ ದೇವಸ್ಥಾನದ ಬಳಿ ತಮಿಳು ಶಾಸನವಿದೆ. ಅಂಜನೇಯ ಅವರ ವಿಗ್ರಹವನ್ನು ಬೃಹತ್ ಚಪ್ಪಡಿ ಮೇಲೆ ಕೆತ್ತಲಾಗಿದೆ. ಒಬ್ಬ ಅಧಿಕಾರಿ ದೇವಪ್ಪ ಒಡಿಯಾರ್ ಅವರು ನಿಕರಲ್ ಚೋಳ ಮಂಡಲದ ಹಲ್ಲೂರ್ನಾಡಿನಲ್ಲಿರುವ ಲಕಗೊಂಡನಹಳ್ಳಿಯ ಮದರಾಚಸಮುದ್ರವನ್ನು ಅನುದಾನ ನೀಡಿದ್ದಾರೆ ಎಂದು ಉಲ್ಲೇಖಿಸಲಾಗಿದೆ.

## ನಂದಗುಡಿ

ಇದು ಮೋಡಿ ಮಾಡುವ ಸುತ್ತಮುತ್ತಲಿನ ಸಣ್ಣ ತಳವಾದ ವಿಧಿ ಬೆಟ್ಟದ ಬುಡದಲ್ಲಿದೆ. ವೊಡರಹಳ್ಳಿಯಿಂದ ಸಾ.ಶ 1530 ದಾಖಲೆಯಲ್ಲಿ ಈ ಸ್ಥಳವು ನಂದಗುಲಿ ಎಂಬ ಆಡಳಿತ ಘಟಕದ ಪ್ರಧಾನ ಕಛೇರಿಯಾಗಿತ್ತು. ಅದೇ ಸ್ಥಳದಿಂದ ಮತ್ತೊಂದು ದಾಖಲೆಯಲ್ಲಿ ಸುಗತೂರ್ ಸೀಮೆ ಅಡಿಯಲ್ಲಿ 'ನಂಜಿಗುಲಿ' ಎಂದು ಉಲ್ಲೇಖಿಸಲಾಗಿದೆ[63]. ತಮಿಳು ದಾಖಲೆಗಳು ಈ ಸ್ಥಳವನ್ನು 'ನೊಂಡಕೊಲ್ಲಿ' ಅಥವಾ 'ನಂಗಂಗುಲಿ' ಎಂದು ಉಲ್ಲೇಖಿಸುತ್ತವೆ. ಮೊದಲು ಚೋಳರ ಅಡಿಯಲ್ಲಿ ಇದು ಕೈವರನಾಡು ಮತ್ತು ಹೊಯ್ಸಳ ನಂದಗುಡಿಯ ಅಡಿಯಲ್ಲಿಯೇ ನಾಡು ಪ್ರಧಾನ ಕಚೇರಿಯಾಯಿತು. ಹಳ್ಳಿಯ ಪಶ್ಚಿಮಕ್ಕೆ ಅಡಬೆಟ್ಟ ಎಂಬ ಬೆಟ್ಟವಿದೆ. ಅದರ ಬುಡದಲ್ಲಿ ಎತ್ತರದ ಸ್ಥಳದಲ್ಲಿ ಮಲ್ಲೇಶ್ವರ ಅಥವಾ ಮಲ್ಲಿಕಾರ್ಜುನ ದೇವಾಲಯವು ಪೂರ್ವಕ್ಕೆ ಇದೆ. ಇದನ್ನು ಸುಗತೂರ್ ಮುಖ್ಯಸ್ಥ ತಮ್ಮಪ್ಪಗೌಡ ಅವರು ಸಾ.ಶ 1550 ರಲ್ಲಿ ಸದಾಶಿವರಾಯರ ಆಳ್ವಿಕೆಯಲ್ಲಿ ನಿರ್ಮಿಸಿದರು. (ಛಾಯಾ ಚಿತ್ರ – 16)

ಈ ದೇವಾಲಯವು ಮೂಲತಃ ಒಂದು ಪ್ರಾಕಾರವನ್ನು ಹೊಂದಿದೆಯೆಂದು ತೋರುತ್ತದೆ. ಅದರಲ್ಲಿ ಸರಳವಾದ ಮಹಾದ್ವಾರ, ತೆರೆದ ಕೋಶ, ಒಂಬತ್ತು ಅಂಕಣಗಳ ನವರಂಗ ಮತ್ತು ಸಣ್ಣ ಮುಖಮಂಟಪ ಮಾತ್ರ ಕಂಡುಬರುತ್ತದೆ. ಕಂಬಗಳು ಘನ ಎಂಟು ಬದಿಯ ಅಂತಸ್ತುಗಳೊಂದಿಗೆ ಸಾಮಾನ್ಯ ವಿಜಯನಗರ ಕಾರ್ಯವೈಖರಿಯ ಚಿಕ್ಕದಾಗಿದೆ. ಘನ ಅಂತಸ್ತುಗಳಲ್ಲಿ ಗಣೇಶ ಇತ್ಯಾದಿಗಳ ಪರಿಹಾರ ಆತ್ಮಗಳನ್ನು ಕೆತ್ತಲಾಗಿದೆ. ದೇವಾಲಯದ ವಾಯುವ್ಯಕ್ಕೆ ಪಾರ್ವತಿಯ ಸಣ್ಣ ದೇವಾಲಯವಿದೆ.

ದೇವಾಲಯದ ಆವರಣದಲ್ಲಿ ಎರಡು ಶಾಸನಗಳಿವೆ. ಸುದತೂರ್ ತಮ್ಮಪ್ಪಗೌಡ ನಂಜಿಗುಲಿಯ ದೇವರ ಮಲ್ಲಿಕಾರ್ಜುನನಿಗೆ ಸಿಮಾಸಂದ್ರ ಎಂಬ ಹಳ್ಳಿಯನ್ನು ಮಂಜೂರು ಮಾಡಿದನೆಂದು ಚಕ್ರವರ್ತಿ ಸದಾಶಿವರಾಯರ ಸಾ.ಶ 1559ರ ಅದೇ ಮತ್ತೊಂದು ದಾಖಲೆಯು ಒಬ್ಬ ಅಧಿಕಾರಿ ನಾರಾಯಣ ರಾಜನು ಮಲ್ಲಿಕಾರ್ಜುನ ದೇವರಿಗೆ ನೀಡಿದ ಹಲವಾರು

ಅನುದಾನಗಳನ್ನು ಪ್ರಕಟಿಸುತ್ತದೆ. ಹತ್ತಿರದಲ್ಲಿ ಒಂದು ಆಂಜನೇಯ ದೇವಾಲಯವಿದೆ. ಇದು ಇತ್ತೀಚಿನ ರಚನೆಯಾಗಿದೆ.

ಹಳ್ಳಿಯ ಸರಿಯಾದ ಸ್ಥಳದಲ್ಲಿ ಶಿವ, ಬಸವೇಶ್ವರ ಇತ್ಯಾದಿ ದೇವಾಲಯಗಳಿವೆ. ಮಲ್ಲಿಕಾರ್ಜುನ ದೇವಸ್ಥಾನದ ಹತ್ತಿರ ವೀರಭದ್ರನ ಆಳ್ವಿಕೆಯನ್ನು ಕೆತ್ತಿದ ಚಪ್ಪಡಿ ಹೊಂದಿರುವ ಪಾಳುಬಿದ್ದ ಮಂಟಪವಿದೆ. ಮರದ ಸಿಡಿಕಾಂಬ ಕೂಡ ಈಗ ಬಿದ್ದಿದೆ. ಬೆಟ್ಟದ ಪಾದದ ಹತ್ತಿರ ಒಂದು ಸಣ್ಣ ಗುಹೆ ಇದೆ. ಈ ಸ್ಥಳವು ಮುತ್ಯಲಮ್ಮನ ದೊಡ್ಡ ನವೀಕರಿಸಿದ ದೇವಾಲಯವನ್ನು ಹೊಂದಿದೆ. ಇದರ ಕಂಬಗಳು ವಿಜಯನಗರ ಶೈಲಿಯಲ್ಲಿ ಅನೇಕ ಪರಿಹಾರ ಶಿಲ್ಪಗಳನ್ನು ಹೊಂದಿವೆ. ಈ ದೇವಾಲಯದ ಹೊರಗೆ ಎರಡು ವೀರಗಲ್ಲುಗಳಿವೆ. ಅವುಗಳಲ್ಲಿ ಒಂದು ಶಾಸನವನ್ನು ಧರಿಸಿದೆ.

**ಶಿವನಪುರ**

ಇದು ಹೊಸಕೋಟೆಯಿಂದ 18 ಕಿ.ಮೀ ದೂರದಲ್ಲಿದೆ. ಇದು ಹಳೆಯ ಸ್ಥಳವಾಗಿದೆ. ಇಲ್ಲಿರುವ ಚವಾಡಿ ಹಳ್ಳಿಯ ಆಗ್ನೇಯ ಕಂಬದ ಮೇಲೆ ಕೊಂಗಲನಿ ಮುಟ್ಟರಸ ಅವರು ಸುಮಾರು ಸಾ.ಶ 752 ಗೆ ಸಂಬಂಧಿಸಿದ ಶಾಸನವೊಂದು ಹಾನಿಗೊಳಗಾಗಿದೆ, ಇದು ಕೋವಲಲಾದ ಕಡುವೆಟ್ಟಿ ಸಿಯಾ ವಲ್ಲವರಸರ ಸೈನ್ಯಕ್ಕೆ ಹೊಡೆದು ಆದೇಶಿಸಿದ್ದಾರೆ[64]. ಒಂದು ಕ್ಷೇತ್ರದಲ್ಲಿ ಸಾಳುವ ಸರಸಿಂಗರಾಯ ಸಾ.ಶ 1495 ರಲ್ಲಿ ಈಶಾನ್ಯಕ್ಕೆ ಇನ್ನು ಒಂದು ಶಾಸನವಿದೆ. ಗಂಡೇಣ್ಣನಾಯಕನ ದಲ್ಲಾಳಿಗಾರರಾದ ಅಧಿಕೃತ ಜಗಪ್ಪ ಮಾಡಿದ ಜಮೀನಿನ ಅನುದಾನವನ್ನು ಪ್ರಕಟಿಸಿದೆ. ಈ ಸ್ಥಳದಲ್ಲಿ ಬಸವೇಶ್ವರ, ಧರ್ಮರಾಯ, ಗಂಗಮ್ಮ, ಮಾರಮ್ಮ, ಭೀಮೇಶ್ವರಿ, ಈಶ್ವರ, ಲಕ್ಷ್ಮೀನಾರಾಯಣ ಮುಂತಾದ ದೇವಾಲಯಗಳಿವೆ. ಬಸವೇಶ್ವರ ದೇವಸ್ಥಾನವು ಹಾಳಾಗಿದೆ. (ಛಾಯಾ ಚಿತ್ರ – 17)

ಧರ್ಮರಾಯ ದೇವಾಲಯವು ಸಾಮಾನ್ಯ ರಚನೆಯಾಗಿದ್ದು ವಾರ್ಷಿಕವಾಗಿ ಕರಗ ಉತ್ಸವ ನಡೆಯುತ್ತದೆ. ಗಂಗಮ್ಮ ದೇವಸ್ಥಾನ ಕುರುಬ ಸಮುದಾಯಕ್ಕೆ ಸೇರಿದೆ. ಈ ಸ್ಥಳವು ಕೈವಾರ ನಾರಾಯಣಪ್ಪನ ಕೊನಪ್ಪ ಮುಂತಾದಂತಹ ಮೂರ್ತಿಗಳು ದೊರೆತಿದೆ. ವಹಿನಿಕುಲ ಕ್ಷತ್ರಿಯರ ಶಿವಮ್ಮನ ಮೂರ್ತಿ ಮತ್ತು ಮೂರು ಸಮಾಧಿಗಳೂ ಇವೆ. ಮತ್ತು ಕೊನೆಯದಾಗಿ ಮುನಿಸ್ವಾಮಾಚಾರ್ಯ (ಆಚಾರ್ಯ) ಮಾತಾ ನೆರೆಯ ಬೀರಹಳ್ಳಿ ಗ್ರಾಮದ ಮೀತಿಯಲ್ಲಿ ಕೆರೆ ಬಂಡಯಲ್ಲಿ ಇನ್ನೂ ಒಂದು ಈಶ್ವರ ದೇವಾಲಯವಿದೆ. ಈ ಸ್ಥಳವು ಹಳೆಯ ಬೃಹತ್ ಅಹುರ್ ಖಾನಾವನ್ನು ಹೊಂದಿದ್ದು, ಬಾಗಿಲುಗಳು ಮತ್ತು ಗಣಿಗಾರರು ಮೇಲೆ ಉತ್ತಮವಾದ ಗಾರೆ

ಕೆಲಸಗಳನ್ನು ಹೊಂದಿದೆ. ಶಿವನಪುರ ಗ್ರಾಮದಲ್ಲಿ ಧರ್ಮರಾಯ ದೇವಾಲಯವು ಪ್ರಾಚೀನ ಕಾಲದಲ್ಲಿದ್ದು ವರ್ಷಕ್ಕೆ ಒಂದುಬಾರಿ ಕರಗ ಮಹೋತ್ಸವ ನಡೆಯುವುದರಿಂದ ಧಾರ್ಮಿಕ ಪ್ರವಾಸಿಗರು ಅಕ್ಕ ಪಕ್ಕದ ಜಿಲ್ಲೆಗಳಿಂದ ದೇವಾಲಯಕ್ಕೆ ಭೇಟಿ ಕೊಡುತ್ತಾರೆ.

## ಸೂಲಿಬೆಲೆ

ಹೊಯ್ಸಳ ದಾಖಲೆಯ ಪ್ರಾಚೀನ ಸುಲಿವಳ್ಳಿ ಹೊಸಕೋಟೆಯಿಂದ 15 ಕಿ.ಮೀ ದೂರದಲ್ಲಿದೆ. ಈ ಸ್ಥಳದಲ್ಲಿ ಸೋಮೇಶ್ವರ ಕಾಶಿವಿಶ್ವೇಶ್ವರ, ಆಂಜನೇಯ, ನಾಗರೇಶ್ವರ ಎಂದು ಕರೆಯಲಾಗುವ ದೇವಾಲಯಗಳಿವೆ. ಇದನ್ನು ಅಮೃತ ಮಲ್ಲಿಕಾರ್ಜುನ, ಪ್ರಸನ್ನ ಪರಮೇಶ್ವರ ಎಂದು ಕರೆಯುತ್ತಾರೆ. ವಿಜಯನಗರ ಶೈಲಿಯಲ್ಲಿರುವ ಕಾಶಿವಿಶ್ವೇಶ್ವರ ದೇವಸ್ಥಾನವು ಸತತವಾಗಿ ಮೂರು ಕೋಶಗಳನ್ನು ಹೊಂದಿದೆ. ಮತ್ತು ಮಧ್ಯದಲ್ಲಿ ಶಿವಲಿಂಗ ಮತ್ತು ಪಾರ್ವತಿ ಚಿತ್ರಗಳು ಬಲ ಕೋಶಗಳು ಕ್ರಮವಾಗಿ ಲಿಂಗವನ್ನು ಸ್ಥಳೀಯವಾಗಿ ಹೇಳಿದಂತೆ ಕಾಶಿ ಸುಬ್ಬಯ್ಯ ಅವರು ವಾರಣಾಸಿಯಿಂದ ತಂದರು. ದೇವಾಲಯದಲ್ಲಿ ಕಂಚಿನ ನಂದಿಯೂ ಇದೆ. ಪ್ರಸಿದ್ದ ಪ್ರಸನ್ನ ಪರಮೇಶ್ವರ ದೇವಸ್ಥಾನದ ಹತ್ತಿರ ಶೈವ ಸಂತ ಮಾರಿಸ್ವಾಮಿಯ ಗಡ್ಡು ಇದೆ.[65] (ಛಾಯಾ ಚಿತ್ರ – 18)

ಈ ಸ್ಥಳವು ವೀರಶೈವರ ಮಹಾಲಿಂಗೇಶ್ವರ ಮಠವನ್ನು ಹೊಂದಿದೆ. ಸೂಲಿಬೆಲೆಯ ನಾಲ್ಕು ಕಲ್ಲಿನ ಶಾಸನಗಳಲ್ಲಿ ಸಾ.ಶ 1330 ರ ಸುಮಾರಿಗೆ ಹೊಯ್ಸಳ ಮೂರನೇ ಬಲ್ಲಾಳ ಕೊಳದ ಮರು ಸುಧಾರಣೆಯನ್ನು ಘೋಷಿಸಿದರು. ಇದು ಅಟ್ಟಿವಳ್ಳಿ ಮತ್ತು ಸುಲಿವಳ್ಳಿ ನಡುವೆ ಇದೆ. ಸತ್ತಿಪುರಂಗೆ ಪಕ್ಕದಲ್ಲಿ ಒಬ್ಬ ದಾತಿ ಸಿಂಗೇಯದಣ್ಣಾಯಕ ಅವರು ಹೊಯ್ಸಳ ಮಂತ್ರಿಗಳ ಸಹಾಯದಿಂದ ಪುಲ್ಲಿರುನಾಡು ನಿವಾಸಿಗಳು ಇಲ್ಲಿ ನೆಲೆಸಿದರು. ಈ ಸ್ಥಳದಲ್ಲಿ ಎರಡು ಮಸೀದಿಗಳಿವೆ. ಮೊದಲನೆಯದನ್ನು ಗುಲಾರ್ ಷಾ ವಾಲಿ ಮತ್ತು ಬಡೆ ಮಲಂಗ್ ಷಾ ಅವರಿಗೆ ಮತ್ತು ಉರುಸ್ ಅನ್ನು ಬಕ್ರಿದ್ ತಿಂಗಳಲ್ಲಿ ನಡೆಸಲಾಗುತ್ತದೆ. ಎರಡನೆಯದನ್ನು ಇರಾಹಿಮ್ ಷಾ ವಾಲಿಗೆ ಹೇಳಲಾಗಿದೆ. ಮೂರನೆಯದನ್ನು ಯಕೀನ್ ಶಾ ಮತ್ತು ಅಕ್ಬರ್ ಷಾ ಎಂದು ಹೇಳಲಾಗುತ್ತದೆ. ಸೂಲಿಬೆಲೆ ಹೋಬಳಿಯಲ್ಲಿರುವ ಸಂತ ಶೈವ ಧರ್ಮದ ಮರಿಸ್ವಾಮಿ ಜಯಂತಿಯು ಅದ್ದೂರಿಯಾಗಿ ನೆಡೆಯುತ್ತದೆ ಮತ್ತು ಬಕ್ರಿದ್ ಹಬ್ಬ ಅದ್ದೂರಿಯಾಗಿ ನೆಡೆಯುವುದರಿಂದ ಧಾರ್ಮಿಕ ಪ್ರವಾಸಿಗರು ಬರುತ್ತಾರೆ. (ಛಾಯಾ ಚಿತ್ರ – 19)

## ವಾಗತ

ವಾಗತವು ಹೊಸಕೋಟೆಯಿಂದ 10 ಕಿ.ಮೀ ದೂರದಲ್ಲಿದೆ. ತಮಿಳು ದಾಖಲೆಗಳಲ್ಲಿ **'ಓವತ್ತಮ್'** ಎಂದು ಉಲ್ಲೇಖಿಸಲಾಗಿದೆ. ಅದು ವರದರಾಜ ಚತುರ್ವೇದಿಮಂಗಲಂ ಎಂಬ ಅಗ್ರಹಾರ. ಕನ್ನಡ ದಾಖಲೆಗಳು ಈ ಸ್ಥಳವನ್ನು ಒಗಟ್ಟಾ ಮತ್ತು ಭಾಗೀರಥಪುರ ಎಂದು ಉಲ್ಲೇಖಿಸಿದೆ. ನಂತರದ ಅವಧಿಯ ಅನೇಕ ಸಾಹಿತ್ಯ ಕೃತಿಗಳಲ್ಲಿ ಇದನ್ನು ಯೋಗವತಪುರಿ ಅಥವಾ ಯೋಗಪುರಿ ಎಂದು ಕರೆಯಲಾಗುತ್ತದೆ. ಈ ಸ್ಥಳವು ಚೋಳ ಕಾಲದ ವರದರಾಜ ದೇವಸ್ಥಾನಕ್ಕೆ ಹೆಸರುವಾಸಿಯಾಗಿದೆ. ಏಕೆಂದರೆ ಹಲವಾರು ಹೊಯ್ಸಳ ದಾಖಲೆಗಳು ವಾಗಟ್ಟದಲ್ಲಿ ಅಸ್ತಿತ್ವದಲ್ಲಿರುವ ದೇವರು ವರದರಾಜರಿಗೆ ಅನುದಾನವನ್ನು ನೀಡುತ್ತವೆ. ಗರ್ಭಗೃಹವು ವಿಶಿಷ್ಟ ದ್ರಾವಿಡ ಶೈಲಿಯಲ್ಲಿ ಚತುರವಾಗಿದೆ.[66]

ಅರ್ಧಮಂಟಪವಿದೆ ಮತ್ತು ಇದರ ನಂತರ ವಿಜಯನಗರ ಶೈಲಿಯಲ್ಲಿ ನವರಂಗವಾಗಿದೆ. ವರದರಾಜರ ಮುಖ್ಯ ದೇವತೆಯು ವಿಶಿಷ್ಟವಾದ ಚೋಳ ವೈಶಿಷ್ಟ್ಯಗಳನ್ನು ಹೊಂದಿರುವ ಒಂದು ಮೀಟರ್ ಎತ್ತರವಾಗಿದೆ. ದೇವಾಲಯದ ಕಪೋತದಲ್ಲಿ ಕೆತ್ತಿದ ಶಾಸನವಿದೆ. ಅದರಲ್ಲಿ ಒಂದು ಕನ್ನಡದಲ್ಲಿ ಸಾ.ಶ 1491 ಯ ಸಚಿವ ಗುರೇಯಾ ದನ್ನಾಯಕ ಅವರು ವಾಗತ ಬ್ರಾಹ್ಮಣರಿಗೆ ಅನುದಾನವನ್ನು ನೀಡಿದ್ದಾರೆ. ಈ ದೇವಾಲಯವು ಉತ್ಸವ ಮೂರ್ತಿಗಳನ್ನು ಹೊಂದಿದೆ. ಯುಗಾದಿ ಹಬ್ಬದ ನಂತರ ಪಂಚಮಿಯಂದು ತೇರು ಉತ್ಸವವನ್ನು ನಡೆಸಲಾಗುತ್ತದೆ. ಸ್ಥಳೀಯ ಕೆರೆಯ ದಂಡೆಯಲ್ಲಿ ಈಶ್ವರ ದೇವಾಲಯವಿದೆ. ಇದು ಸಾಮಾನ್ಯ ರಚನೆಯಾಗಿದೆ.

ದೇವಾಲಯದ ಹೊರಾಂಗಣದ ಸುತ್ತಲೂ ಕೆತ್ತಲಾದ ಶಾಸನಗಳಿವೆ. ಆಂಜನೇಯ ದೇವಸ್ಥಾನವು ಎರಡು ಮೀಟರ್ ಎತ್ತರವನ್ನು ಹೊಂದಿದೆ. ಮೂರನೇ ಬಲ್ಲಾಳ ಸಾ.ಶ 1326ರಲ್ಲಿ ಅಂಜನೇಯ ದೇವಾಲವನ್ನು ನಿರ್ಮಿಸಿದ್ದಾನೆ. ಪೂರ್ವಕ್ಕೆ ಹೊಯ್ಸಳ ದಾಖಲೆ ಇದೆ. ಇದು ಪುಲ್ಯುರುನಾಡಿನ ಅಧೀನದಲ್ಲಿರುವ ಒವಟ್ಟನ್ ಅಲಿಯಾಸ್ ವರದರಾಜ ಚತುರ್ವೇದಿಮಂಗಲಂನ ಬ್ರಾಹ್ಮಣರಿಗೆ ಸಿಂಗೇಯ ದನ್ನಾಯಕನ ಮಗ ವಲ್ಲಪ್ಪ ದನ್ನಾಯಕ ಎಂಬ ಅಧಿಕಾರಿಯು ನೀಡಿದ ಕೆಲವು ಪೂಜಾ ಸೌಲಭ್ಯಗಳನ್ನು ಘೋಷಿಸುತ್ತದೆ. ಬುಡಿಹಲ್ಲಾ ಎಂಬ ಹೊಲದಲ್ಲಿ ಅಗೆಯುವಾದ ವಾಗಟಾದಲ್ಲಿ ಎರಡು ಅಟ್ಟಣಿಗೆ ಕಂಡುಬಂದಿವೆ. ಇವೆರೆಡೂ ಈಗ ಮೈಸೂರಿನ ಪುರಾತತ್ವ ವಸ್ತು ಸಂಗ್ರಹಾಲಯದಲ್ಲಿವೆ. ಅವುಗಳಲ್ಲಿ ಒಂದು ಶ್ರೀ ನಾಗಮರರ ಶಾಸನವನ್ನು 9ನೇ ಶತಮಾನದ ಪತ್ರಗಳಲ್ಲಿ ಹೊಂದಿದೆ. ಈ ಸ್ಥಳದ ಇತರ ದೇವಾಲಯಗಳು ಚೌಡೇಶ್ವರಿ, ಮಾರಮ್ಮ ಇತ್ಯಾದಿ.

ಇದರಿಂದ ಈ ಗ್ರಾಮಕ್ಕೆ ಹಲವಾರು ಪ್ರಾಚೀನ ಕಾಲದ ದೇವಾಲಯಗಳ ಜಾತ್ರೆ ಮಹೋತ್ಸವ ನೆಡೆಯುವುದರಿಂದ ಧಾರ್ಮಿಕ ಪ್ರವಾಸಿಗರು ಬರುತ್ತಾರೆ.

## 3.5 ದೊಡ್ಡಬಳ್ಳಾಪುರ ತಾಲ್ಲೂಕು ಐತಿಹಾಸಿಕ ಪ್ರವಾಸಿ ತಾಣಗಳು

ಇದು ತಾಲ್ಲೂಕು ಕೇಂದ್ರವಾಗಿದ್ದು ಬೆಂಗಳೂರಿನ ವಾಯುವ್ಯ ದಿಕ್ಕಿನಲ್ಲಿದೆ. ಈ ಸ್ಥಳವು ಉತ್ತರ ಮತ್ತು ವಾಯುವ್ಯದಲ್ಲಿ ಪರ್ವತಗಳ ಸರಪಳಿಯಿಂದ ಆವೃತವಾಗಿದೆ. ಭಾಗಶಃ ಸರಳ ಭೂ ಪ್ರದೇಶದೊಂದಿಗೆ ಅಸಮವಾದ ಭೂ-ವ್ಯಾಪ್ತಿಯನ್ನು ಹೊಂದಿದು. ಇದು ಅರ್ಕಾವತಿ ನದಿಯ ದಡದಲ್ಲಿದೆ. ಈ ಸ್ಥಳವನ್ನು ರೈಲ್ವೆ ಮೂಲಕ ನೇರವಾಗಿ ಸಂಪರ್ಕಿಸಲಾಗಿದೆ. ಹೊಯ್ಸಳ ಕಾಲದಿಂದಲೂ ದೊಡ್ಡಬಳ್ಳಾಪುರ ಪ್ರಸಿದ್ದ ವಾಣಿಜ್ಯ ಕೇಂದ್ರವಾಗಿತ್ತು. ಅವತಿ ಕುಲದ ಉಳಿಗಮಾನ್ಯ ಮಾಲೆಭೈರೆಗೌಡ ಅವರು ಈ ಪಟ್ಟಣವನ್ನು ಸ್ಥಾಪಿಸಿದರು ಎಂಬ ಅಭಿಪ್ರಾಯವೂ ಇದೆ. ಬಹುಶಃ ಅವರು ಈಗಿರುವ ಪಟ್ಟಣವನ್ನು ಬಲಪಡಿಸಿದ್ದಾರೆ.

16 ರಿಂದ 17ನೇ ಶತಮಾನಗಳ ನಡುವಿನ ಅವಧಿಯಲ್ಲಿ ದೊಡ್ಡಬಳ್ಳಾಪುರವನ್ನು ಅವತಿ ಕುಲದ ಒಂದು ಶಾಖೆಯಾಗಿ ಕಾರ್ಯನಿರ್ವಹಿಸುತ್ತಿತ್ತು. ಸಾ.ಶ 1637-38ರವರೆಗೆ ಈ ಸ್ಥಳವನ್ನು ಬಿಜಾಪುರ ಕಮಾಂಡರ್ ರಣದೌಲಾ ಖಾನ್ ಆಕ್ರಮಿಸಿಕೊಂಡರು.[67] ಮುಂದಿನ ನಲವತ್ತು ವರ್ಷಗಳವರೆಗೆ, ದೊಡ್ಡಬಳ್ಳಾಪುರವು ವಿಜಾಪುರ ಸುಲ್ತಾನರ ಕೈಯಲ್ಲಿ ಮುಂದುವರಿಯಿತು. ಇದು ಶಹಜಿಯ ಬೆಂಗಳೂರು ಜಹಗೀರ್‌ನ ಒಂದು ಭಾಗವಾಗಿತ್ತು. ಸಾ.ಶ 1689ರಲ್ಲಿ ಇದರ ಆಡಳಿತವು ಮೊಘಲರು ತೆಗೆದುಕೊಳ್ಳುತ್ತಾರೆ. ಈ ಸ್ಥಳವು ಶಿವಾಜಿಯ ಮಗ ಸಂಭಾಜಿಯ ಕೈಯಲ್ಲಿದ್ದಾಗ ಅದನ್ನು ತನ್ನ ಸಹೋದರ ಎಕೋಜಿಯಿಂದ ತೆಗೆದುಕೊಂಡಿದ್ದನು.

ಸಾ.ಶ 1761ರಲ್ಲಿ ಹೈದರ್ ಅಲಿ ಈ ಪ್ರದೇಶವನ್ನು ಸ್ವಾದೀನಪಡಿಸಿಕೊಂಡರು ಮತ್ತು ತರುವಾಯ ಅದು ಮೈಸೂರಿನ ಒಡೆಯರ್‌ಗಳಿಗೆ ತಲುಪಿತು. ಸ್ಥಳಬಲ್ಲಾಪುರ ಎಂಬ ಸ್ಥಳದ ಹೆಸರನ್ನು ಚಿಕ್ಕಬಲ್ಲಾಪುರದಿಂದ ಪ್ರತ್ಯೇಕಿಸಲು ಇದನ್ನು ಹೆಸರಿಸಲಾಗಿದೆ. ಸಾ.ಶ 1598ರ ಸ್ಥಳೀಯ ಆದಿನಾರಾಯಣ ದೇವಸ್ಥಾನದ ದಾಖಲೆಯಲ್ಲಿ ಈ ಸ್ಥಳವನ್ನು ಬಲ್ಲಾಪುರ ಥನ್ಯ ಎಂದು ಹೇಳಲಾಗಿದೆ. ಇದು ಹೊಯ್ಸಳ ಹೆಸರಿನ ಬಲ್ಲಾಳದಿಂದ ಹುಟ್ಟಿಕೊಂಡಿರಬಹುದು ಮತ್ತು ನಂತರ ಬಲ್ಲಾಪುರ ಎಂದು ಭ್ರಷ್ಟಗೊಂಡಿರಬಹುದು.

ಒಂದು ದಂತಕಥೆಯ ಪ್ರಕಾರ ಒಂದು ಹಸು ಒಂದು ನಿರ್ದಿಷ್ಟ ಹುತ್ತದ ಮೇಲೆ ಒಂದು 'ಬಲ್ಲಾ' ಹಾಲನ್ನು ಬೀಳಿಸಲು ಬಳಸಿದ ಸನ್ನಿವೇಶದಿಂದ ಈ ಸ್ಥಳಕ್ಕೆ ಈ ಹೆಸರು ಬಂದಿದೆ. ಮತ್ತು

ಈ ಶಕುನವು ಪಟ್ಟಣದ ಅಡಿಪಾಯಕ್ಕೆ ಕಾರಣವಾಯಿತು. 'ಬಲ್ಲಾ'ದಿಂದ ಬಲ್ಲಾಪುರ ಎಂಬ ಹೆಸರು ಬಂದಿದೆ. ಬಹುಶಃ ಮೊದಲಿನಿಂದಲೂ ಈ ಸ್ಥಳವು ರೇಷ್ಮೆ ನೇಯ್ಗೆ ಉದ್ಯಮಕ್ಕೆ ಹೆಸರುವಾಸಿಯಾಗಿದೆ. ಮತ್ತು ಅನೇಕ ನೇಕಾರರು ಸಹ ಇಲ್ಲಿಂದ ಬೆಂಗಳೂರಿಗೆ ವಲಸೆ ಬಂದರು.[68]

## ಘಾಟಿ ಸುಬ್ರಮಣ್ಯ ಸ್ವಾಮಿ ದೇವಾಲಯ

ಇದು ಬೆಟ್ಟಗಳ ಸರಣಿಯಿಂದ ಆವೃತವಾದ ಆಳವಾದ ಕಣಿವೆಯಲ್ಲಿದೆ. ಘಾಟಿ ಸುಬ್ರಹ್ಮಣ್ಯ ಕ್ಷೇತ್ರವು ಬೆಂಗಳೂರಿನಿಂದ 51 ಕಿ.ಮೀ ಮತ್ತು ದೊಡ್ಡಬಳ್ಳಾಪುರದಿಂದ 14 ಕಿ.ಮೀ ದೂರದಲ್ಲಿರುವ ಸರ್ಪ ಮಾರ್ಗದ ಮೂಲಕ ತಲುಪಬೇಕು. ಸಾಂಪ್ರದಾಯಿಕವಾಗಿ, ಸುಬ್ರಮಣ್ಯವು ಮುಕ್ತಾಯಕ್ಕೆ ಒಳಗಾಗಲು ದಂಡಕರಾಣ್ಯಕ್ಕೆ ಇಳಿದು ತಪಸ್ಸು ಮಾಡಲು ಈ ಪ್ರತ್ಯೇಕವಾದ ಶಾಂತ ಸ್ಥಳವನ್ನು ತಲುಪಿದೆ ಎಂದು ನಂಬಲಾಗಿದೆ. ಈ ದೇವಾಲಯವು ವಿಶಾಲವಾದ ಹೊರಗಿನ ಗೋಡೆಯಿಂದ ಆವೃತವಾದ ವಿಶಾಲವಾದ ಪ್ರದೇಶವನ್ನು ಹೊಂದಿದೆ. ಮತ್ತು ಪ್ರವೇಶದ್ವಾರದಲ್ಲಿ ರಾಯಗೋಪುರವಿದೆ. ಈ ಗೋಪುರವು ಐದು ಮಹಡಿಗಳನ್ನು ಹೊಂದಿದೆ. ಶಿವ ಪುರಾಣ ಪ್ರಸಂಗಗಳನ್ನು ಚಿತ್ರಿಸುವ ಅನೇಕ ಆಕರ್ಷಕ ಸಿಮೆಂಟ್‌ನಿಂದ ಮಾಡಿದ ಆಕೃತಿಗಳಿವೆ. ನಂತರದ ವಿಜಯನಗರ ಕಾರ್ಯವೈಖರಿಯ ದ್ರಾವಿಡ ಶಿಖರ ಅವರೊಂದಿಗೆ ವರ್ಗಭರಿತ ಗರ್ಭಗೃಹವಿದೆ. ಇಲ್ಲಿನ ಕೆತ್ತನೆಗಳು ಎರಡು ಅಭಿವ್ಯಕ್ತಿಗಳನ್ನು ಹೊಂದಿದೆ. ಸುಬ್ರಮಣ್ಯ ಏಳು ಹೆಡೆಗಳೊಂದಿಗೆ ಲಕ್ಷ್ಮೀನರಸಿಂಹಸ್ವಾಮೀಯನ್ನು ಹೊಂದಿದೆ.[69] (ಛಾಯಾ ಚಿತ್ರ – 20)

ಯಾತ್ರಿಕರು ಎರಡೂ ದೃಷ್ಟಿಕೋನಗಳನ್ನು ಹೊಂದಲು ಅನುವು ಮಾಡಿಕೊಡುವ ಸಲುವಾಗಿ ಹಿಂಭಾಗದ ಗೋಡೆಗೆ ಉದ್ದನೆಯ ಕನ್ನಡಿಯನ್ನು ನಿಗದಿಪಡಿಸಲಾಗಿದೆ. ಆದರೆ ವಾಸ್ತುಶಿಲ್ಪದ ಪ್ರಕಾರ ಇದನ್ನು ನೈಸರ್ಗಿಕ ವಕ್ರಾಕೃತಿಗಳನ್ನು ಹೊಂದಿರುವ ಕಚ್ಚಾ ಅನಿಯಮಿತ ಬಂಡೆಯ ರಚನೆಯಾಗಿ ನೋಡಬಹುದು. ನವರಂಗ ಮತ್ತು ಹೊರಗಿನ ಮಂಟಪವನ್ನು ಸುಮಾರು ಕೆಲವು ಶತಮಾನಗಳ ಹಿಂದೆ ಸಂದೂರಿನ ಯಶ್ವಂತರಾವ್ ಘೋರ್ಪಾಡೆ ನಿರ್ಮಿಸಿದನೆಂದು ಸ್ಥಳೀಯವಾಗಿ ಹೇಳಲಾಗುತ್ತದೆ. ಆದರೆ ದೇವಾಲಯದ ನಿರ್ಮಾಣದ ನಿಖರವಾದ ಕಾಲವನ್ನು ಸಾಕ್ಷೀಕರಿಸಲು ಯಾವುದೇ ಲಿಖಿತ ಸಾಕ್ಷ್ಯಾಧಾರಗಳಿಲ್ಲ. ಇದನ್ನು 17ನೇ ಶತಮಾನದಲ್ಲಿ ಹೊಸಕೋಟೆಯಲ್ಲಿ ಬೀಡು ಬಿಟ್ಟಿದ ಶಾಹಜಿಯ ಅಧಿಕಾರಿ ಯಶ್ವಂತ್‌ರಾವ್ ನಿರ್ಮಿಸಿದ ಸಾಧ್ಯತೆ ಇದೆ.

ಪ್ರಾಕಾರದ ಒಳ ಗೋಡೆಗಳ ಮೇಲೆ ಸುಬ್ರಮಣ್ಯದೊಂದಿಗೆ ಸಂಪರ್ಕ ಹೊಂದಿದ ಪ್ರಸಂಗಗಳನ್ನು ವಿವರಿಸುವ ಆಧುನಿಕ ವರ್ಣಚಿತ್ರಗಳಿವೆ. ದೇವಾಲಯದ ಹಿಂದೆ ಸಾಂಪ್ರದಾಯಿಕವಾಗಿ ಕುಮಾರಧಾರ ಎಂಬ ಪುಷ್ಕರಣಿ ಇದೆ. ಕುಮಾರಸ್ವಾಮಿ ದೇವರು ತಪಸ್ಸುಗಾಗಿ ಇಲ್ಲಿ ತಂಗಿದ್ದಾಗ ಸ್ನಾನ ಮಾಡುತ್ತಿದ್ದರು ಎಂದು ಹೇಳಲಾಗುತ್ತದೆ. ಈ ತೀರ್ಥದಲ್ಲಿ ಸ್ನಾನ ಮಾಡುವುದರಿಂದ ಹಲವಾರು ಚರ್ಮ ರೋಗಗಳು ಮತ್ತು ಮಾನಸಿಕ ಅಸ್ವಸ್ಥತೆಗಳನ್ನು ಗುಣಪಡಿಸಬಹುದು ಎಂದು ಹೇಳಲಾಗುತ್ತದೆ. ಬೃಹತ್ ಜಾತ್ರೆಯು ಹನ್ನೆರಡು ದಿನಗಳವರೆಗೆ ಒಟ್ಟುಗೂಡಿದಾಗ  ಸಾವಿರಾರು ಜನರು ಪಾಲ್ಗೊಳ್ಳುವಾಗ, ಬ್ರಹ್ಮರಥೋತ್ಸವವನ್ನು ವಾರ್ಷಿಕವಾಗಿ ಪುಷ್ಯಶುದ್ಧ ಶಾಸ್ತಿಯಲ್ಲಿ ನಡೆಸಲಾಗುತ್ತದೆ. ದೊಡ್ಡ ಜಾನುವಾರು ಮೇಳವನ್ನೂ ನಡೆಸಲಾಗುತ್ತದೆ.

ದೇವಾಲಯ ಮಹಾದ್ವಾರದ ಪಕ್ಕದಲ್ಲಿನ ವರ್ಣಮಯ ಶೇಷನ ಭಕ್ತಾದಿಗಳ ಕಣ್ಣು ಸೆಳೆಯುತ್ತದೆ. ಪ್ರಧಾನ ರಾಜ ಗೋಪುರಕ್ಕೂ ಮಧ್ಯದ ಮತ್ತೊಂದು ಗೋಪುರಕ್ಕೂ ನಡುವಣ ಇರುವ ವಿಶಾಲ ಪ್ರಾಂಗಣ ಪ್ರದಕ್ಷಿಣೆಗೆ ಅನುಕೂಲವಾಗುತ್ತದೆ. ಒಳಗಡೆ ಬಾಲಸುಬ್ರಹ್ಮಣ್ಯ ಮೂರ್ತಿ, ಗಣಪತಿ ಮತ್ತು ಶ್ರೀವಲ್ಲಿ ಸಮೇತ ಸುಬ್ರಹ್ಮಣ್ಯ ಸುಂದರ ಮೂರ್ತಿಗಳಿವೆ. ದೇವಾಲಯದ ಧ್ವಜಸ್ಥಂಭದ ಮೂಲದಲ್ಲಿ ನಾಗರಾಜನ ಏಳು ಹೆಡೆಯ ಆಕರ್ಷಕ ವಿಗ್ರಹವಿದೆ. ದೇವಾಲಯದ ಆವರಣದಲ್ಲಿ ವರ್ಣಮಯ ಚಿತ್ರಗಳು ಭಕ್ತಾದಿಗಳ ಕಣ್ಣು ಸೆಳೆಯುತ್ತವೆ.

ಈ ಸ್ಥಳವು ಮಕಾಲಿ ರೈಲ್ವೆ ನಿಲ್ದಾಣಕ್ಕೆ ಹತ್ತಿರದಲ್ಲಿದೆ. ಪ್ರತಿದಿನ ಯಾತ್ರಾರ್ಥಿಗಳು ಭೇಟಿ ನೀಡುತ್ತಾರೆ. ಮಕಾಲಿದುರ್ಗ ಎಂಬ ಬೆಟ್ಟದ ಕೋಟೆಯು ಮಧ್ಯೆ ಬೆಟ್ಟದ ಶ್ರೇಣಿಗಳ ಮಧ್ಯೆ ಘಾಟಿ ಸುಬ್ರಹ್ಮಣ್ಯದಿಂದ ಮಕಾಲಿ ಗ್ರಾಮದಿಂದ ವಿಚಲನ ರಸ್ತೆಯಲ್ಲಿ ಸಂಪರ್ಕಿಸಬಹುದು. ಅನಿಯಮಿತ ಮಾರ್ಗದಲ್ಲಿ ನಡೆದು ಕುರಚಲುಗಿಡಗಳ ಪೊದೆಯಿಂದ ಆವೃತ್ತವಾಗಿರುವ ಕಲ್ಲಿನ ಬೆಟ್ಟದ ಬಗ್ಗೆ ಮಾತುಕತೆ ನಡೆಸಿ ಬೆಟ್ಟವನ್ನು ಏರಬೇಕು. ಬೆಟ್ಟದ ತುದಿಯಲ್ಲಿ ವಿಶಾಲವಾದ ಅಸಮ ಪ್ರದೇಶವಿದೆ. ಐದು ಹೆಕ್ಟರ್ ಗಾತ್ರದಲ್ಲಿದೆ. ತೆರೆಯುವಿಕೆಯಂತಹ ಅಂಡಾಕಾರದ ಆಕಾರದ ಕಿಟಕಿಯೊಂದಿಗೆ ಇಟ್ಟಿಗೆ ಮತ್ತು ಗಾರೆಗಳಿಂದ ನಿರ್ಮಿಸಲಾದ ಮದ್ದಿನಮನೆ ಎಂಬ ಪತ್ರಿಕೆಯ ಮನೆ ಇದೆ.

ದೇವಾಲಯ ಬಗೆಗಿರುವ ಪುರಾಣದ ಕಥೆಗಳು; ಇತಿಹಾಸ, ಜನಪದ ಕಥೆ ಮತ್ತು ನಂಬಿಕೆಗಳನ್ನು ಪ್ರಚುತಪಡಿಸುತ್ತವೆ. ವೀಳ್ಯದೆಲೆ ವರ್ತಕನೊಬ್ಬನಿಗೆ ಸುಬ್ರಹ್ಮಣ್ಯ ಸ್ವಾಮಿ ಕಂಡಿದ್ದು; ನಂತರ ವಿಪ್ರನಿಂದ ರಾಜನಿಗೆ ತಿಳಿದಿದ್ದು; ಮೊದಲು ಇಪೇಕ್ಷಿಸಿದರೂ ರಾಜ ಪಶ್ಚಾತಾಪದಿಂದ ಮತ್ತೆ ಬಂದದ್ದು; ಹುತ್ತಕ್ಕೆ ಹಸುವೊಂದು ಹಾಲು ಕರೆಯುತ್ತಿದ್ದುದ್ದು; ರಾಜ ನಂತರ

ದೇವಾಲಯವನ್ನು ನಿರ್ಮಿಸಿ ಅದಕ್ಕೆ ನಡೆದುಕೊಂಡಿದ್ದು ಹೀಗೆ ಒಂದೇ ಎರಡೇ ಅನೇಕ ಕಥೆಗಳು, ಭಕ್ತಾದಿಗಳ ಶ್ರದ್ಧೆಯಲ್ಲಿ ರೂಪುಗೊಂಡಿವೆ. ಪ್ರಣಯ ರಹಸ್ಯದ ವಿಷಯಗಳಲ್ಲಿ ಬ್ರಹ್ಮನ ಉಪೇಕ್ಷೆಯನ್ನು ಸಹಿಸದೆ ಕುಮಾರಸ್ವಾಮಿಯು ಬ್ರಹ್ಮನನ್ನು ಬಂಧಿಸಲು ಹೋಗಿದ್ದು ನಂತರ ಪಶ್ಚಾತ್ತಾಪದಿಂದ ತಪಸ್ಸು ಮಾಡಲು ಕೈಲಾಸದಿಂದ ಇಳಿದುಬಂದಿದ್ದು, ಹಾವಿನ ರೂಪ ಧರಿಸಿ ನಿಂತಿದ್ದು, ಸರ್ಪಕುಲಕ್ಕೆ ಗರುಡನಬಾಧೆ ತಪ್ಪಸಿ ಕುಮಾರಸ್ವಾಮಿಗೆ ನೀನಿರುವ ಇಲ್ಲಿ ನಾನು ನರಸಿಂಹ ರೂಪಿಯಾಗಿರುತ್ತೇನೆ ಎಂದು ನಾರಾಯಣ ಅನುಗ್ರಹಿಸಿದ ರಮ್ಯ ಕಥೆಗಳು ಮಹಾತ್ಮೆಯನ್ನು ಬಿಂಬಿಸುತ್ತವೆ.

ಘಾಟಿ ಸುಬ್ರಹ್ಮಣ್ಯದ ಪ್ರಮುಖ ಸೇವೆಯೆಂದರೆ ನಾಗರ ಪ್ರತಿಷ್ಟೆ. ಸಂತಾನದ ಕೃಪೆಗಾಗಿ ಇಲ್ಲಿ ಬಂದು ಸೇವೆ ಮಾಡಿ ನಾಗರ ಪ್ರತಿಷ್ಟೆ ಮಾಡಿದರೆ ಸಂತತಿ ಮುಂದುವರೆಯುತ್ತದೆ ಎನ್ನುವ ನಂಬಿಕೆ ಜನುಮದಲ್ಲಿ ಬೇರು ಬಿಟ್ಟಿದೆ. ಆದ್ದರಿಂದಲೇ ನಾಗರ ಕಲ್ಲುಗಳ ಸಾಲು ಹಾವಿಗೂ, ಕಾಮಕ್ಕೂ ಇರುವ ಸಾಂಕೇತಿಕ ನಂಟನ್ನು ಭಕ್ತಾದಿಗಳು ನೆನೆಯಬಹುದು. ಸಾಮಾನ್ಯವಾಗಿ ತನ್ನ ಪತ್ನಿಯರಿಂದ ಒಡಗೂಡಿದ ನಾಗರಾಜನ ಪ್ರತಿಮೆಗಳು ಎಣೆದುಕೊಂಡ ಸರ್ಪದ ಜೋಡಿ ಲಿಂಗರೂಪಿ ಶಿವ ಹಾಗೂ ಪಾರ್ವತಿ ಮೂರ್ತಿಗಳನ್ನು ಇಲ್ಲಿ ಕಾಣಬಹುದು. ಪ್ರಧಾನ ದೇವಾಲಯದ ಪಕ್ಕದಲ್ಲೊಂದು ಹೋಮವಿದೆ. ಇಲ್ಲಿ ಹರಕೆ ಹೊತ್ತ ಭಕ್ತರ ಸಂಕಷ್ಟ ನಿವಾರಣೆಗಾಗಿ ಹವನ ಹೋಮಾದಿಗಳು ನಡೆಯುತ್ತವೆ. ಅದರ ಪಕ್ಕದಲ್ಲಿರುವ ವಸಂತ ಮಂಟಪದಲ್ಲಿ ಮದುವೆ ಮುಂಜಿ ಮುಂತಾದ ಶುಭ ಕಾರ್ಯಗಳು ಜರುಗುತ್ತವೆ. ಸ್ವಾಮಿಯ ಸೇವೆ ಮತ್ತು ದರ್ಶನದಿಂದ ಧನ್ಯರಾದ ಮಂದಿಗೆ ಪಾಕಶಾಲೆಯಲ್ಲಿ ರುಚಿಯಾಗಿ ತಯಾರಿಸಿದ ಭೋಜನ. ಪ್ರತಿನಿತ್ಯ ಉಭಯರೂಪಿ ದೈವ ಶಿಲೆಗೆ ಭಕ್ತಿಗಳಿಂದ ಅಭಿಷೇಕ ನಡೆಯುತ್ತದೆ. ಅದರಲ್ಲೂ ಮಂಗಳವಾರದ ಪೂಜೆಯಂತೂ ವಿಶೇಷ.

ಅಭಿಷೇಕದ ನಂತರ ವಿಶೇಷ ವರ್ಣಮಯ ಅಲಂಕಾರಗಳಿಂದ ಭಕ್ತರಿಗೆ ಸೇವೆಯ ಧನ್ಯತೆ ಜೊತೆಗೆ ಆನಂದ ಗಂಟೆ, ಜಾಗಟೆಗಳ ಸದ್ದಿನಿಂದಾಗಿ ಮಂಗಳಾರತಿ ವೇಳೆ ಇಡೀ ವಾತಾವರಣ ಭಕ್ತಿಯ ಆವೇಶದಿಂದ ತುಂಬಿಹೋಗಿರುತ್ತದೆ. ತೀರ್ಥಪ್ರಸಾದ ಸ್ವೀಕರಿಸಿದ ಭಕ್ತರ ಮನದ ಶಾಂತಿಯನ್ನು ಅನುಭವಿಸಿಯೇ ತಿಳಿಯಬೇಕು. ದಿನನಿತ್ಯದ ಸೇವೆಗಳೇ ಅಲ್ಲದೆ ವಿಶೇಷ ಸಂದರ್ಭಗಳಲ್ಲಿ ಉತ್ಸವ ದೀಪೋತ್ಸವಗಳಂತಹ ಸೇವೆಗಳು ನಡೆಯುವುದುಂಟು. ದೈವದ ಮೇಲಿನ ನಂಬಿಕೆಯಲ್ಲಿ ಮನುಷ್ಯನನ್ನು ನಿರಂತರವಾಗಿ ಇಂತಹ ಕ್ಷೇತ್ರಗಳೊಡನೆ ಸೆಳೆಯುತ್ತಿರುತ್ತವೆ.

ಬೆಟ್ಟದ ತುದಿಯಲ್ಲಿ ನಾಲ್ಕು ಸಣ್ಣ ಕೊಳಗಳು ಇವೆ. ಈ ಬೆಟ್ಟವು ಶಿವ ದೇವಾಲಯಕ್ಕೆ ಹೆಸರುವಾಸಿಯಾಗಿದೆ. ಈಗ ಅದು ಸಂಪೂರ್ಣವಾಗಿ ಕುಸಿಯುತ್ತಿದೆ. ಬೆಟ್ಟದ ಮೇಲಿನ ಭಾಗಗಳಲ್ಲಿ ಬುರುಜುಗಳನ್ನು ಹೊಂದಿರುವ ಕೋಟೆ ಗೋಡೆಗಳ ಸರಣಿಯಾಗಿದೆ. ಬೆಟ್ಟದ ತುದಿಯಿಂದ ಮೋಡಿ ಮಾಡುವ ನೈಸರ್ಗಿಕ ಹಸಿರು ಭೂ ದೃಶ್ಯ ಮತ್ತು ಸುತ್ತಮುತ್ತಲಿನ ಹಳ್ಳಿಗಳಿಗೆ ಸಾಕ್ಷಿಯಾಗಬಹುದು. ಮಕಾಲಿ ಗ್ರಾಮದ ಹೊಲಗಳಲ್ಲಿ ಬೆಟ್ಟದ ಕೆಳಗೆ ಎರಡು ಬೃಹತ್ ವೀರಗಲ್ಲುಗಳು ಮತ್ತು ದೇವಾಲಯದ ಅಡಿಪಾಯ ಮತ್ತು ಕಂಬದ ಮೇಲೆ ನಂದಿಯನ್ನು ಸ್ಥಾಪಿಸಲಾಗಿದೆ.

## ಐತಿಹಾಸಿಕ ಪ್ರವಾಸಿ ತಾಣ ಹುಲ್ಕುಡಿ ಬೆಟ್ಟ

ಇಂದು ಹುಲುದುಡಿನಾಡು ಪ್ರದೇಶದಲ್ಲಿ 'ಹುಲುಕುಡಿ' ಎಂಬ ಹೆಸರಿನ ಯಾವ ಗ್ರಾಮವಾಗಲಿ ಅಥವಾ ಗ್ರಾಮದ ಅವಶೇಷವಾಗಲಿ ಇಲ್ಲ. ದೊಡ್ಡಬಳ್ಳಾಪುರ ತಾಲ್ಲೂಕಿನ ಒಂದು ಹೋಬಳಿ ಕೇಂದ್ರವಾದ ದೊಡ್ಡಬೆಳವಂಗಲದಿಂದ ಉತ್ತರಕ್ಕೆ ಐದಾರು ಕಿಲೋಮೀಟರ್ ದೂರದಲ್ಲಿ ಹುಲುಕುಡಿ ಬೆಟ್ಟವಿದೆ. ಈ ಬೆಟ್ಟ ಬಹಳ ಕಡಿದಾಗಿದ್ದು, ಮೇಲೆ ಹತ್ತಲು ಸರಿಯಾದ ದಾರಿಯಿಲ್ಲ. ಬೆಟ್ಟದ ಮೇಲೆ ವಿಸ್ತಾರವಾದ ಪ್ರಸ್ಥಭೂಮಿಯಿದ್ದು ಅದು ಪೂರ್ವಕ್ಕೆ ಇಳಿಜಾರಾಗಿದೆ. ಬೆಟ್ಟದ ಬುಡದಲ್ಲಿ ಬಿಸಿ ವಾತಾವರಣವಿದ್ದರೆ, ಮೇಲಕ್ಕೆ ಹೋದಂತೆಲ್ಲಾ ಹವಾಗುಣ ತಂಪಾಗುವುದನ್ನು ಅನುಭವಿಸಬಹುದು. ತೃಣಾನದಿಯ ಮೂಲವು ಈ ಬೆಟ್ಟದ ಪೂರ್ವತುದಿಯಲ್ಲಿದೆ. ಇದು ಇಲ್ಲಿನ ಬೆಟ್ಟದ ಹೆಬ್ಬಂಡೆಗಳ ನಡುವೆ ಹುಟ್ಟಿ, ಬಹುತೇಕ ಅಂತರ್ಗಾಮಿಯಾಗಿಯೇ ಪೂರ್ವಾಭಿಮುಖವಾಗಿ ಹರಿಯುತ್ತದೆ. ಮಳೆಗಾಲದಲ್ಲಿ ಬಂಡೆಗಳ ಸಂಧಿಗೊಂದಿಗಳಲ್ಲಿ ನೀರು ಧಾರಾಕಾರವಾಗಿ ಹರಿಯುವುದನ್ನು ಈಗಲೂ ನೋಡಬಹುದು. ಈ ನದಿಯ ಜಲಾನಯನ ಪ್ರದೇಶದಲ್ಲಿ ಮುವತ್ತಕ್ಕೂ ಹೆಚ್ಚು ಕೆರೆಗಳಿವೆ. ಅವುಗಳಲ್ಲಿ ಗಲಿಬಿಲಿಕೋಟೆ, ಗುಣಸಂದ್ರ, ಮಾಡೇಶ್ವರ, ಬೊಮ್ಮನಹಳ್ಳಿ, ಭೈರಾಪುರ, ತಿಪ್ಪೂರು, ಅರಳುಮಲ್ಲಿಗೆ ಕೆರೆಗಳು ಮುಖ್ಯವಾದವು. ಇವು ಸುತ್ತಮುತ್ತಲಿನ ಗ್ರಾಮಗಳ ಜಮೀನಿಗೆ ನೀರಾವರಿ ಸೌಲಭ್ಯವನ್ನು ಒದಗಿಸಿವೆ.

ಹುಲುಕುಡಿಬೆಟ್ಟ ಏರಲು ಕೆಲವು ಕುದುರೆ ಮಾರ್ಗಗಳೂ ಇವೆ. ಪೂರ್ವದಿಕ್ಕಿನಿಂದ ಅಂದರೆ ಗಲಿಬಿಲಿಕೋಟೆ ಗ್ರಾಮದ ಮುಖಾಂತರ ಬೆಟ್ಟದ ಮೇಲಕ್ಕೆ ಈ ಬಡಿಜಾಡು ಇದೆ. ಇದು ಅತಿಚಿಕ್ಕದಾದ ಮತ್ತು ಕಡಿದಾದ ಕುದುರೆಮಾರ್ಗ. ಬೆಟ್ಟದ ಮೇಲೆ ನಿಂತು ನೋಡಿದರೆ ಸುತ್ತಲೂ ಬೆಟ್ಟಗುಡ್ಡಗಳು, ಹೊಲಗದ್ದೆಗಳು, ಕೆರೆಕುಂಟೆಗಳಿಂದ ಕುಡಿ ಹಚ್ಚಹಸುರಿನಿಂದ ಕಂಗೊಳಿಸುವುದನ್ನು

ಕಾಣಬಹುದು. ಬೆಟ್ಟದ ಪೂರ್ವಕ್ಕೆ ಗಲಿಬಿಲಿಕೋಟೆ, ಗುಣಸಂದ್ರ, ಮಾಡೇಶ್ವರ, ಬೊಮ್ಮನಹಳ್ಳಿ, ಭೈರಾಪುರ ಗ್ರಾಮಗಳು, ಪಶ್ಚಿಮಕ್ಕೆ ಸಾಸಲು ಹೋಬಳಿಯ ಗ್ರಾಮಗಳು, ಉತ್ತರಕ್ಕೆ ಲಿಂಗಾಪುರ, ಭಕ್ತರಹಳ್ಳಿ ಹಾಗೂ ದಕ್ಷಿಣಕ್ಕೆ ಕಾಡಬೊಮ್ಮನಹಳ್ಳಿ ಜಾಲಗೆರೆ ಊರು ಮತ್ತು ಬೆಟ್ಟದ ಸಾಲುಗಳು ಗೋಚರಿಸುತ್ತವೆ.

ಬೆಟ್ಟದ ಮೇಲೆ 5–6 ಹೆಕ್ಟೇರ್‌ನಷ್ಟು ವಿಸ್ತಾರವಾದ ಪ್ರಸ್ಥಭೂಮಿಯಿದೆ. ಇದರ ಸುತ್ತಲೂ ಕೋಟೆಯಿದೆ. ಈ ಕೋಟೆಯು ನಿಜವಾದ ಅರ್ಥದಲ್ಲಿ ಗಿರಿದುರ್ಗವೆಂದು ಕರೆಯಬಹುದಾದ ಸುಭದ್ರ ಕೋಟೆಯಾಗಿದೆ. ಪೂರ್ವ ಮತ್ತು ಉತ್ತರಕ್ಕೆ ಎರಡು ಮಹಾದ್ವಾರಗಳುಳ್ಳ ಈ ಕೋಟೆಯು ಸಾಮಾನ್ಯ ಶೈಲಿಯಲ್ಲಿದೆ. ಅಂದರೆ ಕೋಟೆಗೋಡೆಯು ಐದಾರು ಅಡಿಗಳಷ್ಟು ದಪ್ಪನಾಗಿದ್ದು, ಎರಡು ಹಂತಗಳಲ್ಲಿ ನಿರ್ಮಾಣಗೊಂಡಿದೆ. ಗೋಡೆಯ ಒಳ ಹಾಗೂ ಹೊರಭಾಗವನ್ನು ದೊಡ್ಡದೊಡ್ಡ ಕಲ್ಲುಗಳಿಂದ ನಿರ್ಮಿಸಲಾಗಿದ್ದು, ಮಧ್ಯದ ಭಾಗವನ್ನು ಸಣ್ಣಸಣ್ಣ ಕಲ್ಲುಮಣ್ಣಿನಿಂದ ತುಂಬಿಸಿದೆ. ಬೆಟ್ಟದ ಹಾಸು ಬಂಡೆಗಳೇ ಈ ಕೋಟೆಗೆ ತಳಪಾಯವಾಗಿದೆ. ಈ ದುರ್ಗವನ್ನು ಬೆಟ್ಟದ ಮೇಲಿನ ದೊಡ್ಡದೊಡ್ಡ ಬಂಡೆಗಳಿಂದಲೇ ತಮ ಗೆ ಬೇಕಾದ ಆಕಾರಕ್ಕೆ ಕಲ್ಲುಗಲನ್ನು ಕತ್ತರಿಸಿಕೊಂಡು, ಬಹಳ ನಾಜುಕಾಗಿ ಒಂದರ ಮೇಲೊಂದರಂತೆ ಪೇರಿಸಿ ಕಟ್ಟಿದ್ದಾರೆ. ಇದಕ್ಕೆ ಸಾಕ್ಷಿಯಾಗಿ ಈಗಲೂ ಬೆಟ್ಟದ ಮೇಲೆ ಬಂಡೆಗಳನ್ನು ಪದರ ಪದರವಾಗಿ ಚಕ್ಕೆ ಎಬ್ಬಿಸಿಕೊಂಡಿರುವ ಹಾಗೂ ಸೀಳಿಸಿಕೊಳ್ಳಲು ಅಂದು ಗುರುತು ಮಾಡಿಕೊಂಡಿರುವ ಕಲ್ಲುಗಳನ್ನು ಬಳಸಿದ್ದು. ಮೇಲ್ಭಾಗದಲ್ಲಿ ಮಧ್ಯಮ ಗಾತ್ರದ ಕಲ್ಲುಗಳನ್ನು ಉಪಯೋಗಿಸಿ ಮೇಲ್ತುದಿಯಲ್ಲಿ ಗಾರೆಯನ್ನು ಬಳಸಿದ್ದಾರೆ. ಕೊಟೆಯ ಸುತ್ತಲೂ ಪ್ರಪಾತವಿರುವುದರಿಂದ ಕೋಟೆ ಮತ್ತಷ್ಟು ದುರ್ಗಮವಾಗಿ ಶತ್ರುಗಳಿಗೆ ಅಭೇದ್ಯವೆನಿಸಿದೆ. ಕೋಟೆಯ ಪೂರ್ವದಿಕ್ಕಿಗೆ ಎರಡೂ ಮೂಲೆಗಳಲ್ಲಿ ದೊಡ್ಡದಾದ ಹಾಗೂ ಎತ್ತರವಾದು ಬುರುಜುಗಳಿದ್ದು ಕಾವಲು ಗೋಪುರಗಳಂತೆ ಬಳಸಲು ಯೋಗ್ಯವಾಗಿದೆ. ಈ ಬುರುಜುಗಳ ಮೇಲೆ ನಿಂತು ನೋಡಿದರೆ ಬಹುದೂರದವರೆಗಿನ ಪ್ರದೇಶವೆಲ್ಲಾ ಇನ್ನಷ್ಟು ಸ್ಪಷ್ಟವಾಗಿ ಕಾಣುತ್ತದೆ. ಅಲ್ಲದೆ ಈ ಜಾಗದಲ್ಲಿ ತಂಪಾದ ಗಾಳಿಗೆ ಮೈಯೊಡ್ಡಿ ಅಹ್ಲಾದತೆಯನ್ನು ಪಡೆಯಬಹುದು. ಶತ್ರುಗಳ ಬರುವಿಕೆಯನ್ನು ಗ್ರಹಿಸಲು ಮತ್ತು ಕೋಟೆಯನ್ನು ರಕ್ಷಿಸಲು ಈ ಬುರುಜುಗಳನ್ನು ಕೋಟೆಗೋಡೆಗಿಂತ ತುಂಬಾ ಎತ್ತರವಾಗಿ ನಿರ್ಮಿಸಲಾಗಿದೆ. ಆದರೆ ದುರಾದೃಷ್ಟವಶಾತ್ ಈ ಬುರುಜುಗಳ ಮೇಲಿನ ಕಲ್ಲುಗಳೆಲ್ಲಾ ಮಳೆಗಾಳಿಗಳ ಹೊಡೆತಕ್ಕೆ ಉದುರಿ ಬೀಳುತ್ತಿವೆ. ಈಗಾಗಲೇ ಇಂತಹ ಒಂದೆರಡು ಬುರುಜುಗಳು ಸಂಪೂರ್ಣವಾಗಿ ನೆಲಕಚ್ಚಿವೆ. ಬೆಟ್ಟದ ಪೂರ್ವದಿಕ್ಕಿಗೆ ಒಂದೆಡೆ ಕೊಟೆ ದ್ವಾರಬಾಗಿಲಿನ ಅವಶೇಷಗಳನ್ನು ಕಾಣಬಹುದು.

ಇದನ್ನು ನೋಡಿದರೆ ಇಂದಿನಂತೆ ಬೆಟ್ಟಕ್ಕೆ ಉತ್ತರದಿಕ್ಕಿನಿಂದ ಪ್ರವೇಶಿಸದೆ, ಪೂರ್ವದಿಕ್ಕಿನಿಂದ ಪ್ರವೇಶಸುತ್ತಿದ್ದಂತೆ ಕಾಣುತ್ತದೆ. ಇದಕ್ಕೆ ಪುಷ್ಟಿನಿಡುವಂತೆ ಈಗಳೂ ಪೂರ್ವದಿಕ್ಕಿನಲ್ಲಿ ಬೆಟ್ಟಕ್ಕೆ ಹತ್ತಿಬರಲು ಮಾಡಿರುವ ಮೆಟ್ಟಿಲುಗಳನ್ನು ಗಮನಿಸಬಹುದು. ಕೋಟೆಯ ದ್ವಾರಬಾಗಿಲಿನ ಮೂಲಕ ಒಳಪ್ರವೇಶಿಸಿದರೆ ವಿಶಾಲವಾದ, ಸಮತಟ್ಟಾದ ಭೂಮಿ ಗೋಚರಿಸುತ್ತದೆ. ಈ ಸ್ಥಳದಲ್ಲಿ ಹೆಚ್ಚು ಜನರು ವಾಸವಾಗಿದ್ದಂತೆ ಕಾಣುತ್ತದೆ. ಅಲ್ಲದೆ ಇಲ್ಲಿ ಪಾಳೆಯಗಾರರ (ಹುಲುಕುಡಿ ದೊರೆಗಳ) ಕಾಲದಲ್ಲಿ ಸಂತೆ ನಡೆಯುತ್ತಿತ್ತೆಂದು ಸ್ಥಳೀಯ ಜನರು ಅಭಿಪ್ರಾಯಪಡುವವರಾದರೂ ಇದಕ್ಕೆ ಪೂರಕವಾದ ಯಾವುದೇ ಆಧಾರಗಳು ಇಲ್ಲ. ಇಲ್ಲಿನ ದೊಡ್ಡ ಬಂಡೆಯೊಂದರ ಮೇಲೆ ಗಣಪತಿ ವಿಗ್ರಹವನ್ನು ಕೆತ್ತಿರುವರು. ಇದೇ ಸ್ಥಳದಲ್ಲಿ ಕೆಲವೊಂದು ಬೃಹತ್ ನೈಸರ್ಗಿಕ ಗುಹಾಲಯಗಳಿದ್ದು, ಅವುಗಳಲ್ಲಿ ಜನರು ವಾಸಿಸುತ್ತಿದ್ದಂತೆ ತಿಳಿಯುತ್ತದೆ. ಕೆಲವು ಗುಹೆಗಳಲ್ಲಿ ಇಂದಿಗೂ ಜಾಲಾಡಿದರೆ ಮಡಿಕಡ–ಕುಡಿಕೆಗಳ ಅವಶೇಷಗಳು ದೊರೆಯುತ್ತವೆ.

ಬೆಟ್ಟದ ಪಶ್ಚಿಮದಿಕ್ಕಿಗೆ ಪೂರ್ತಿ ಕಲ್ಲಿನಿಂದಲೇ ಕಟ್ಟಿದ ಒಂದು ದೊಡ್ಡ ಕೋಣೆಯಿದ್ದು, ಅದರ ಗೋಡೆಗಳು ಇಂದಿಗೂ ಸುಭದ್ರವಾಗಿವೆ. ಈ ಕೋಣೆಗೆ ಯಾವುದೇ ಕಿಟಕಿ ಬಾಗಿಲು ಇಲ್ಲ. ಆದರೆ ಪೂರ್ವದಿಕ್ಕಿನ ಗೋಡೆಯಲ್ಲಿ ಚೌಕಾಕಾರದ ಎರಡು ಗೂಡುಗಳಂತಹ ರಚನೆ ಇರುವುದನ್ನು ಗಮನಿಸಬಹುದು. ಸ್ಥಳೀಯರು ಇದನ್ನು 'ಮುದ್ದಿನಮನೆ'ಯೆಂದು ಕರೆಯುತ್ತಾರೆ. ಈ ಗೂಡುಗಳ ಮೂಲಕ ಒಳಗೆ ಇಳಿಯಲಾಗುತ್ತಿತ್ತಂತೆ ಆದರೆ ಇಂದು ಈ ಕಡ್ಡದ ಮೇಲ್ಛಾವಣಿ ಸಂಪೂರ್ಣವಾಗಿ ನಾಶವಾಗಿದೆ. ಏನೇನೂ ಉಳಿದಿಲ್ಲ. ಗೋಡೆಗಳ ಮೇಲ್ತುದಿಯಲ್ಲಿ ಗಾರೆಯೊಂದಿಗೆ ಉಳಿದುಕೊಂಡಿರುವ ಇಟ್ಟಿಗೆಗಳ ಆಕಾರ, ಅದರ ಅಳತೆ ಮತ್ತು ಸ್ವರೂಪದ ಆಧಾರದಲ್ಲಿ ಈ ಕಟ್ಟಡ ಹುಲುಕುಡಿ ಪಾಳೆಯಗಾರರ ಕಾಲದ್ದೆಂದು ಖಚಿತವಾಗಿ ತಿಳಿಯುತ್ತದೆ.[70]

ಮುದ್ದಿನಮನೆಯ ಪಕ್ಕದಲ್ಲೇ ಸುಮಾರು ಹತ್ತು ಅಡಿಗೂ ಮೇಲ್ಪಟ್ಟು ಆಳವಿರುವ ನೀರಿನ ಆಸರೆಯೊಂದು ಇದೆ. ಪೂರ್ತಿಯಾಗಿ ಕಲ್ಲಿನಿಂದಲೇ ಆವೃತ್ತವಾಗಿರುವ ಈ ನೀರಿನ ಆಸರೆಯನ್ನು ಬೆಟ್ಟದ ಮೇಲಿನ ಜನರ ನೀರಿನ ಪೂರೈಕೆಯಾಗಿ ನಿರ್ಮಿಸಿರುವಂತೆ ಕಾಣುತ್ತದೆ. ಇದೇ ರೀತಿಯ ಇನ್ನೂ ಮೂರು ನೀರಿನ ಆಸರೆಗಳನ್ನು ಬೆಟ್ಟದ ಮೇಲೆ ಬೇರೆ ಬೇರೆ ಸ್ಥಳಗಳಲ್ಲಿ ಇರುವುದನ್ನು ಗಮನಿಸಬಹುದು. ಬಹುಶಃ ಇವುಗಳಲ್ಲಿ ಮಳೆನೀರು ಸಂಗ್ರಹಿಸಲಾಗುತ್ತಿತ್ತು. ಇವು ಬಿಡುಬೇಸಿಗೆಯಲ್ಲೂ ಕೋಟೆಯೊಳಗಿನ ಜನರಿಗೆ ತಣ್ಣೀರನ್ನು ಒದಗಿಸುತ್ತಿದ್ದವು.

ಈ ಹೊಂಡಗಳು ಇಂದು ಪಾಳುಬಿದ್ದಿವೆ. ಹೊಂಡಗಳಲ್ಲಿ ನೀರು ಶಾಶ್ವತವಾಗಿರಲೆಂದು ಮತ್ತು ಅಂತರ್ಜಲದ ಮಟ್ಟವನ್ನು ಕಾಪಾಡಿಕೋಳ್ಳುವುದಕ್ಕೆ ಇಲ್ಲಿನ ಪಾಳೆಯಗಾರರು ಕೋಟೆಯ ಹೊರಭಾಗದಲ್ಲಿ ಗಲಿಬಿಲಿಕೋಟೆ, ಬೊಮ್ಮನಹಳ್ಳಿ ಮತ್ತು ಭೈರಾಪುರಗಳಲ್ಲಿ ಕೆರೆಗಳ ನಿರ್ಮಾಣ ಮಾಡಿದ್ದರೆಂದು ತೋರುತ್ತದೆ. ಮದ್ದಿನಮನೆಯ ಮುಂಭಾಗದಲ್ಲಿ ನಿಲುವುಗಲ್ಲುಗಳ ಮೇಲೆ ದೂಲಗಳನ್ನಿಟ್ಟು ನಿರ್ಮಿಸಿರುವ ಕಲ್ಲುಕಟ್ಟಡವೊಂದಿದೆ. ಇದು ಮುದ್ದಿನಮನೆಯ ಕಾವಲು ಕಾಯುತ್ತಿದ್ದ ವ್ಯಕ್ತಿಗೆ ನಿರ್ಮಿಸಲಾಗಿದ್ದ ಕಟ್ಟಡವೆಂದು ಹೇಳುವರು. ಆದರೆ ಇಂದು ಈ ಕಟ್ಟಡವೂ ಸಂಪೂರ್ಣ ಜೀರ್ಣವಾಗಿದೆ. ಇದರ ಸಮೀಪದಲ್ಲೇ ಬಂಡೆಯೊಂದರ ಮೇಲೆ ಒರಳುಕಲ್ಲನ್ನು ಕೆತ್ತಿರುವರು. ಇದನ್ನೆಲ್ಲಾ ನೋಡಿದರೆ ಬೆಟ್ಟದ ಮೇಲೆ ಸಾಕಷ್ಟು ಜನರು ವಾಸವಾಗಿದ್ದಂತೆ ತೋರುತ್ತದೆ. ಮುದ್ದಿನಮನೆಯ ಪಕ್ಕದಲ್ಲೇ ಇನ್ನೊಂದು ಕಟ್ಟಡವಿದ್ದು, ಅದನ್ನು ತುಪ್ಪದಕೊಳವೆಂದು ಕರೆಯುತ್ತಾರೆ. ಇದರಲ್ಲಿ ಸಂಗ್ರಹಿಸಿದ ತುಪ್ಪವನ್ನು ಯುದ್ಧ ಸಮಯದಲ್ಲಿ ತುಪಾಕಿ, ಫಿರಂಗಿ, ಕೋವಿಗಳಿಗೆ ಸವರಲು ಮತ್ತು ಗಾಯಗೊಂಡ ಸೈನಿಕರ ಶುಶ್ರೂಷೆಗೆ ಬಲಸಲಾಗುತ್ತಿತ್ತು. ಇವುಗಳ ಜೊತೆಗೆ ವಾಸಕ್ಕೆ ಯೋಗ್ಯವಾದ ಇನ್ನೂ ಕೆಲವೊಂದು ಕೊಠಡಿಗಳು ಇದ್ದಿರಬಹುದಾದ ಗುರುತುಗಳಿವೆ. ಒಟ್ಟಾರೆ ಬೆಟ್ಟವನ್ನೇ ಬಳಸಿಕೊಂಡು ಕಟ್ಟಿರುವ ಈ ಕೋಟೆ ಗಿರಿದುರ್ಗಗಳ ಸಾಲಿಗೆ ಸೇರುತ್ತದೆ. ದೊಡ್ಡದೊಡ್ಡ ಬಂಡೆಗಳ ಸಂದುಗಳನ್ನು ಅನುಸರಿಸಿ ಅವುಗಳ ಮೆಲೆ ಕೋಟೆಯನ್ನು ಕಟ್ಟಿರುವರು. ಇನ್ನೂ ಕೆಲವೆಡೆ ಪ್ರಕೃತಿ ನಿರ್ಮಿತ ಬಂಡೆಗಳೇ ಕೋಟೆಗೋಡೆಗಳಾಗಿವೆ.

ಇದು ದೊಡ್ಡಬೆಲವಂಗಲದಿಂದ ನಾಲ್ಕು ಕಿ.ಮೀ ದೂರದಲ್ಲಿದೆ. ಲಿಂಗಾಪುರ ಗ್ರಾಮದಿಂದ ಕಾಲ್ನಡಿಗೆಯಲ್ಲಿ ತಲುಪಬೇಕು. ಬೆಟ್ಟದ ಬಗ್ಗೆ ಮೊದಲಿನ ಉಲ್ಲೇಖವು ಸಾ.ಶ 1115 ಅದೇ ಬೆಟ್ಟದ ಮೇಲಿರುವ ಹೊಯ್ಸಳ ದಾಖಲೆಯಲ್ಲಿ ವಿಷ್ಣುವರ್ಧನರಿಂದ 'ಪುಕೋರ್ಡಿ' ಎಂದು ಕಂಡುಬರುತ್ತದೆ.[71] ಸಮತಟ್ಟಾದ ಎತ್ತರದ ಬೆಟ್ಟದಲ್ಲಿ ವೀರಭದ್ರ ದೇವಾಲಯವಿದೆ. ಕಿರಿದಾದ ಪ್ರವೇಶದ್ವಾರವನ್ನು ಹೊಂದಿರುವ ನೈಸರ್ಗಿಕ ಗುಹೆಯೊಳಗೆ ಇದನ್ನು ನಿರ್ಮಿಸಲಾಗಿದೆ. ಅಲ್ಲಿ ಸ್ವಲ್ಪ ಸಮಯದವರೆಗೆ ಕೂರುವ ಮೂಲಕ ನಿಧಾನವಾಗಿ ಪ್ರವೇಶಿಸಬೇಕು. ಈ ಹುಲ್ಕುಡಿ ಬೆಟ್ಟವು ಧಾರ್ಮಿಕ ಕ್ಷೇತ್ರವಾಗಿ ಬೆಳವಣಿಗೆ ಹೊಂದಿದೆ ಈ ಬೆಟ್ಟದಲ್ಲಿ ಶ್ರೀ ವೀರಭದ್ರಸ್ವಾಮಿ ದೇವಾಲಯವನ್ನು ಹೊಂದಿದ್ದು ಇಲ್ಲಿ ಅತಿ ಹೆಚ್ಚಾಗಿ ಸ್ಥಳೀಯ ಧಾರ್ಮಿಕ ಪ್ರವಾಸಿಗರು ಹೆಚ್ಚಾಗಿ ಬರುತ್ತಾರೆ. (ಛಾಯಾ ಚಿತ್ರ – 21)

ಇಲ್ಲಿ ವೀರಭದ್ರಸ್ವಾಮಿಯ ಜಾತ್ರಾ ಮಹೋತ್ಸವವು ಮತ್ತು ಕಲ್ಯಾಣ ಮಹೋತ್ಸವವು ಏಪ್ರಿಲ್ ತಿಂಗಳಿನ ಎರಡನೇ ಸೋಮವಾರದಂದು ಬಹಳ ವೈಭವದಿಂದ ನಡಯುತ್ತದೆ. ಇಲ್ಲಿ

ಸಾವಿರಾರು ಪ್ರವಾಸಿಗರು ಬರುತ್ತಾರೆ ಈ ಐತಿಹಾಸಿಕ ಸ್ಥಳವು ಬೆಳವಣಿಗೆಯಾಗಲು ಪ್ರಮುಖವಾದ ಕಾರಣ ಧಾರ್ಮಿಕ ಪ್ರವಾಸ ಒಂದು ಅಂಶವು ಪ್ರಮುಖವಾಗಿದೆ. ಈ ಹುಲ್ಕಡಿ ಬೆಟ್ಟ ಒಂದು ದಿನದ ಚಾರಣಿಗರ ಪ್ರವಾಸಕ್ಕೆ ಉತ್ತಮವಾದ ವತಾವರಣ ಹೊಂದಿದ್ದು ಪ್ರವಾಸಿಗರನ್ನು ಕೈಬೀಸಿ ಕರೆಯುತ್ತದೆ.

ಈ ಬೆಟ್ಟವು ಬೇಸಿಗೆ ಶಿಭಿರವನ್ನು ಕೈಗೊಳ್ಳುವ ಪ್ರವಾಸಿಗರನ್ನು ಕೈಚಾಚಿ ಕರೆಯುವಂತಹ ಒಂದು ಪ್ರಸಿದ್ಧ ಸ್ಥಳವಾಗಿದೆ. ಬೇಸಿಗೆಯ ಸಂದರ್ಭದಲ್ಲಿ ಬೆಳಿಗ್ಗಿನ ಸಮಯದಲ್ಲಿ ಅಂದರೆ 10 ಗಂಟೆಯ ಒಳಗೆ ಈ ಬೆಟ್ಟವನ್ನು ಹತ್ತಬೇಕಾಗುತ್ತದೆ ಇಲ್ಲದಿದ್ದರೆ ಬಿಸಿಲಿನ ತಾಪಮಾನವು ಅತಿಹೆಚ್ಚಾಗಿ ಈ ಬೆಟ್ಟವನ್ನು ಪ್ರವಾಸಿಗರು ಹತ್ತಲು ಕಷ್ಟವಾಗುವಂತಹ ಪರಿಸ್ಥಿತಿ ಬರುತ್ತದೆ ನಂತರ ಮಳೆಗಾಲದ ಸಂದರ್ಭದಲ್ಲಿ ಬೆಟ್ಟವನ್ನು ಹತ್ತುವುದಕ್ಕೆ ಬಹಳ ಸುಲಭವಾಗುತ್ತದೆ. ನಂತರ ಕಾಲವೆಂದರೆ ಚಳಿಗಾಲದ ಸಂದರ್ಭದಲ್ಲಿ ಮಂಜಿನ ಮಡಿಲಲ್ಲಿ ಹತ್ತವಂತಹ ಒಂದು ವಾತಾವರಣ ಚಾರಣಿಗರಿಗೆ ಬಹಳ ಸೂಕ್ತವಾದಂತ ಒಂದು ಸಮಯವೆಂದು ಹೇಳಬಹುದು. ಒಟ್ಟಿನಲ್ಲಿ ಹುಲ್ಕುಡಿ ಬೆಟ್ಟವು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಇರುವುದಕ್ಕೆ ಬಹಳ ಹೆಮ್ಮೆ ಎಂದು ಹೇಳಬಹುದು.

## ಇಸ್ಸೂರ್

ಇದು ಕನಸ್ವಾಡಿ ಅಥವಾ ಮಧುರೆ ಬೃಹತ್ ಕೆರೆಯ ಉತ್ತರ ದಂಡೆಯ ತುದಿಯಲ್ಲಿದೆ. ಇದು ಪ್ರಾಚೀನ ಸ್ಥಳವೆಂದು ತೋರುತ್ತದೆ. ಹಳ್ಳಿಯ ಹೊರವಲಯದಲ್ಲಿ ಸ್ಥಳೀಯವಾಗಿ ನೀಲಕಂಟೇಶ್ವರ ಎಂಬ ಪುರಾತನ ದೇವಾಲಯವಿದೆ. ಬಹುಶಃ ಗಂಗ ಮನೆತನದ ಕೇವಲ ಅರ್ಧಮಂಟಪ ಮತ್ತು ಹೊರಗಿನ ಮಂಟಪವಿದೆ. ಬಹುಶಃ ಇದನ್ನು ವಿಜಯನಗರ ಆಡಳಿತಗಾರರು ಸೇರಿಸಿದ್ದಾರೆ. ಹಳ್ಳಿಯ ಸರಿಯಾದ ಸ್ಥಳದಲ್ಲಿ ಕೋದಂಡರಾಮ ಆಂಜನೇಯ, ಕಬ್ಬಲಮ್ಮ ಮತ್ತು ಬಸವಣ್ಣ ದೇವಾಲಯಗಳಿವೆ. ಕಬ್ಬಲಮ್ಮ ದೇವಸ್ಥಾನದ ಸಮೀಪ ಸಾ.ಶ 1306ಯಲ್ಲಿನ ಹೊಯ್ಸಳ ದಾಖಲೆಯನ್ನು ಮೂರನೇ ಬಲ್ಲಾಳರವರು ಬಡಗಿಗಳು, ಚಿನ್ನದ ಕೆಲಸಗಾರರು, ಕಮ್ಮಾರರು ಮತ್ತು ದ್ವಾರಸಮುದ್ರದ ಹಿರಿಯಾ ಕಲಾ ಮತಕ್ಕೆ ಸೇರಿದ ಎಲ್ಲಾ ವೀರ ಪಂಚಲರಿಗೆ ನೀಡಿದ ಹಲವಾರು ಅನುದಾನಗಳನ್ನು ಘೋಷಿಸಿದ್ದಾರೆ.[72]

ಹಲವಾರು ತೆರಿಗೆಗಳನ್ನು ವಿಧಿಸಲಾಗುತ್ತಿರುವ ವಿವರಗಳೊಂದಿಗೆ ನೀಡಲಾದ ತಾಮ್ರ ಪಟವನ್ನು ದಾಖಲೆಗಳು ಉಲ್ಲೇಖಿಸುತ್ತವೆ. ಮಧುರೆ ತೊಟ್ಟಿಯ ಪೂರ್ವ ದಂಡೆಯಲ್ಲಿರುವ ಕಡನೂರ್ ಅನ್ನು ಇಲ್ಲಿಂದ ಸಂಪರ್ಕಿಸಬಹುದು. ಈ ಗ್ರಾಮವು ಚನ್ನಕೇಶವ ಬೃಹತ್

ದೇವಾಲಯಕ್ಕೆ ಹೆಸರುವಾಸಿಯಾಗಿದೆ. ಬಹುಶಃ ವಿಜಯನಗರ ಕಾಲ. ಈ ದೇವಾಲಯವು ವಿಜಯನಗರ ಶೈಲಿಯಲ್ಲಿ ವಿಶಾಲವಾದ ನವರಂಗ ಮತ್ತು ಮುಖಮಂಟಪವನ್ನು ಹೊಂದಿದೆ. ಗರ್ಭಗೃಹವು ಉತ್ತಮ ದ್ರಾವಿಡ ಶಿಖರವನ್ನು ಹೊಂದಿದ್ದು, ಚನ್ನಕೇಶವನ ಚಿತ್ರಣವು ವಿಜಯನಗರ ವೈಶಿಷ್ಟ್ಯಗಳೊಂದಿಗೆ ಎಲ್ಲಾ ಗುಣಲಕ್ಷಣಗಳನ್ನು ಹೊಂದಿದೆ. ನವರಂಗದಲ್ಲಿ ಚದರ ದ್ರಾವಿಡ ಕಂಬಗಳೊಂದಿಗೆ ಎಂಟು ಅಂಕಣಗಳು ಮತ್ತು ಚಾವಣಿಯಲ್ಲಿ ಭುವನೇಶ್ವರಿ ಇದೆ.

ಮುಖಮಂಟಪವು ಪೌರಾಣಿಕ ಮತ್ತು ಸಾಮಾಜಿಕ ವಿಷಯಗಳನ್ನು ಚಿತ್ರಿಸುವ ಸುಂದರವಾದ ಮತ್ತು ಆಸಕ್ತಿದಾಯಕ ಪ್ರಾಕಾರ ಶಿಲ್ಪಗಳನ್ನು ಹೊಂದಿರುವ 36 ಸುಂದವಾಗಿ ಕೆತ್ತಿದ ಚದರ ಸ್ತಂಭಗಳನ್ನು ಹೊಂದಿದೆ. ನವರಂಗದ ಒಳಗೆ ಗಂಗ ಶೈಲಿಯಲ್ಲಿ ಎರಡೂ ಕೈಗಳ ಈಶ್ವರ ಶಿಲ್ಪಗಳನ್ನು ಇರಿಸಲಾಗಿದೆ. ಇಸ್ತೂರಿನಿಂದ ನಾಲ್ಕು ಕಿ.ಮೀ ದೂರದಲ್ಲಿ ಚನ್ನಕೇಶವ, ಈಶ್ವರ, ಮಾರಮ್ಮ , ವೀರಭದ್ರ, ಪಟಲಮ್ಮ ಮತ್ತು ಆಂಜನೇಯರಿಗೆ ಮೀಸಲಾಗಿರುವ ದೇವಾಲಯಗಳಿವೆ. ಚನ್ನಕೇಶವ ದೇವಸ್ಥಾನವು ಆರಂಭಿಕ ವಿಜಯನಗರ ವೈಶಿಷ್ಟ್ಯಗಳೊಂದಿಗೆ ಹಾಳಾದ ಸ್ಥಿತಿಯಲ್ಲಿದೆ. ಆಂಜನೇಯ ದೇವಾಲಯದ ಹತ್ತಿರ ಬಸವ ಮತ್ತು ವೀರಭದ್ರನ ಸುಂದರವಾದ ಮುರಿದ ಶಿಲ್ಪವಿದೆ. ಇಸ್ತೂರಿನ ಗ್ರಾಮವು ಪ್ರಾಚೀನ ಕಾಲದ ದೇವಾಲಯಯಗಳನ್ನು ಹೊಂದಿದ್ದು ಒಂದು ದಿನದ ಧಾರ್ಮಿಕ ಪ್ರವಾಸವನ್ನು ಕೈಗೊಳ್ಳಬಹುದು.

## ಇಸ್ತೂರಿನ ಕಬ್ಬಾಳಮ್ಮನ ದೇವಾಲಯ

ಇಸ್ತೂರು ದೊಡ್ಡಬಳ್ಳಾಪುರ ತಾಲ್ಲೂಕಿನ ದೊಡ್ಡಹೆಜ್ಜಾಜಿ ಹೋಬಳಿಯಲ್ಲಿದೆ. ದೊಡ್ಡಬಳ್ಳಾಪುರ ತಾಲ್ಲೂಕಿನಿಂದ 18 ಕಿ.ಮೀ ಮತ್ತು ನೆಲಮಂಗಲ ತಾಲ್ಲೂಕಿನಿಂದ 22 ಕಿ.ಮೀ ಇದೆ. ಇಲ್ಲಿ ಪುರಾತನ ಕಾಲದ ಒಂದು ಗ್ರಾಮ ದೇವತೆ ದೇವಾಲಯವಿದು, ಸ್ಥಳೀಯ ಪ್ರಕಾರ ಈ ದೇವಾಲಯ ಚೋಳರ ಕಾಲದು ಎಂದು ತಿಳಿದು ಬರುತ್ತದೆ.[73] ಈ ದೇವಾಲಯಕ್ಕೆ ಕೆಂಪೇಗೌಡರ ಕಾಲದಲ್ಲಿ, ಪಾಳೇಗಾರರು ದಾನದತ್ತಿಯನ್ನು ನೀಡುತ್ತಾ ಬಂದಿದ್ದಾರೆ. ಈ ದೇವಾಲಯದ ವೈಶಿಷ್ಟವೆಂದರೆ ಎರಡು ಅಥವಾ ಮೂರು ವರ್ಷಕ್ಕೆ ಒಮ್ಮೆ ಜಾತ್ರೆಯನ್ನು ನಡೆಸಲಾಗುತ್ತದೆ. ಜಾತ್ರೆಗೆ ಬೆಂಗಳೂರಿಂದ, ಅಕ್ಕ-ಪಕ್ಕದ ತಾಲ್ಲೂಕಿನಿಂದ ಪ್ರವಾಸಿಗರು ಬರುತ್ತಾರೆ. ಈ ಜಾತ್ರೆಯು ಅತಿಯಾದ ವೈಭೋಗದಿಂದ ನಡೆಸುವಂತಹ ಒಂದು ಪದ್ಧತಿಯಿದೆ.

## ಮಧುರೆ

ಮಧುರೆ ಇದನ್ನು ಕೋಡಿಹಳ್ಳಿ ಎಂದೂ ಕರೆಯುತ್ತಾರೆ. ಹೋಬಳಿ ಕೇಂದ್ರ ಕಚೇರಿ ಹಾಗೂ ಜಿಲ್ಲೆಯ ಜನಪ್ರಿಯ ಯಾತ್ರಾ ಕೇಂದ್ರವಾಗಿದೆ. ದೊಡ್ಡಬಳ್ಳಾಪುರ ರಸ್ತೆಯಿಂದ ಹಳ್ಳಿಗೆ ಪ್ರವೇಶಿಸುತ್ತಿದಂತೆ 100 ಎಕರೆಗಿಂತಲೂ ಹೆಚ್ಚು ವಿಸ್ತಾರವಾದ ಭೂಪ್ರದೇಶವನ್ನು ಆಕ್ರಮಿಸಿಕೊಂಡ ಬೃಹತ್ ಕೊಳ ಇದೆ. ಒಂದೇ ಸ್ಥಳದಿಂದ ಒಂದೇ ಕಾಲಮಾನದ (1418) ಎರಡು ದಾಖಲೆಗಳಲ್ಲಿ ಈ ಸ್ಥಳವನ್ನು ಮಾಧುರೆ ಎಂದು ಉಲ್ಲೇಖಿಸಲಾಗಿದೆ.[74] ಈ ಸ್ಥಳವು ಆಧುನಿಕ ತಿರುಮಲ ದೇವಾಲಯವನ್ನು ಹಾನಿಗೊಳಗಾದ ಸ್ಥಿತಿಯಲ್ಲಿ ಹೊಂದಿದೆ. ರಾಮ ಮಂದಿರವೂ ಇದೆ. ಅಲ್ಲಿ ಅನೇಕ ಲೋಹದ ಶಿಲ್ಪಗಳು ಮತ್ತು ರಾಮ, ಲಕ್ಷ್ಮಣ ಮತ್ತು ಸೀತಾ ಅವರ ಅಮೃತ ಶಿಲೆಯ ಶಿಲ್ಪಗಳನ್ನು ಕೋಶದೊಳಗೆ ಇರಿಸಲಾಗಿದೆ. ಹಳ್ಳಿಯ ಹೊರವಲಯದಲ್ಲಿ ಹೊಲಗಳ ಮಧ್ಯೆ ಒಂದು ವೀರಗಲ್ಲು ಇದೆ. ಇದರಲ್ಲಿ ಇಬ್ಬರು ವೀರರ ಬಿಲ್ಲುಗಳನ್ನು ಹಿಡಿದಿದ್ದಾರೆ. ಮೇಲಿನ ಅದೇ ಕಾಲದ ದಾಖಲೆಯೊಂದಿಗೆ ಮತ್ತೊಂದು ವೀರಗಲ್ಲು ಹೆಚ್ಚು ಆಸಕ್ತಿದಾಯಕವಾಗಿದೆ. ಏಕೆಂದರೆ ಓಬನಾಡಾ ಗಾಂಧಾರ ಅವರ ಮಗ ಮಾಧುರೆಯಲ್ಲಿ ತನ್ನ ಪ್ರತಿಜ್ಞೆಗೆ ಅನುಗುಣವಾಗಿ ಒಂದು ಸಾಧನೆ ಮಾಡಿ ಮರಣ ಹೊಂದಿದನೆಂದು ವಿವರಿಸುತ್ತದೆ,

ಗ್ರಾಮದ ಪ್ರಸನ್ನ ಈಶ್ವರ ದೇವಸ್ಥಾನದಲ್ಲಿ ಮಹಿಷಾಸುರಮರ್ದಿನಿ, ಗೋಪಾಲಕೃಷ್ಣ ಮತ್ತು ಪಾರ್ವತಿಯ ಕೆಲವು ಸಡಿಲ ಶಿಲ್ಪಗಳಿವೆ. ಆಂಜನೇಯ ದೇವಸ್ಥಾನವು ಕಟ್ಟೆಯ ದಂಡೆಯಲ್ಲಿದೆ.

ನೆರೆಯ ಕನಸ್ವಾಡಿ ಗ್ರಾಮದಲ್ಲಿರುವ ಕಟ್ಟೆಯುದ್ದಕ್ಕೂ ಒಂದು ಬೃಹತ್ ಆಧುನಿಕ ಶನಿಮಹಾತ್ಮ ದೇವಾಲಯವಾಗಿದ್ದು ಪ್ರತಿದಿನ ನೂರಾರು ಧಾರ್ಮಿಕ ಪ್ರವಾಸಿಗರು ಮತ್ತು ಭಕ್ತರು ಭೇಟಿ ನೀಡುತ್ತಾರೆ.

## ಶನಿಮಹಾತ್ಮ ಸ್ವಾಮಿ ದೇವಾಲಯ

ನೆಲಮಂಗಲ ತಾಲ್ಲೂಕು ಕೇಂದ್ರದಿಂದ 15 ಕಿ.ಮೀ ಅಂತರದಲ್ಲಿರುವ ಇದು ಧಾರ್ಮಿಕ ಪ್ರವಾಸೋದ್ಯಮಕ್ಕೆ ಹೆಸರಾಗಿದೆ. ಹೊರ ರಾಜ್ಯಗಳಿಂದಲೂ, ಹೊರಜಿಲ್ಲೆಗಳಿಂದಲೂ ಪ್ರವಾಸಿಗಳು ಇಲ್ಲಿಗೆ ಆಗಮಿಸುತ್ತಾರೆ. ತಮಿಳುನಾಡು, ಮಹಾರಾಷ್ಟ್ರದವರು ಈ ದೇವಾಲಯಕ್ಕೆ ಅಧಿಕ ಪ್ರಮಾಣದಲ್ಲಿ ಬರುತ್ತಾರೆ. ಯಲಹಂಕ ನಾಡಪ್ರಭುಗಳು ದೇವಾಲಯಕ್ಕೆ ಕೊಡುಗೆಗಳನ್ನು ಕೊಟ್ಟಿರುತ್ತಾರೆ. ಸುತ್ತಮುತ್ತಲಿನ ಪಾಳೆಗಾರರು ಆರ್ಥಿಕವಾಗಿ ಸಹಾಯ ಮಾಡುತ್ತಿದರು ಎಂಬುದು ಕೂಡ ತಿಳಿದುಬರುತ್ತದೆ. ಮುಜುರಾಯಿ ಇಲಾಖೆಯು ಇದನ್ನು ವಶಪಡಿಸಿಕೊಂಡಿದ್ದು

ಮಹಾರಾಷ್ಟ್ರದ ಶನಿದೇವಾಲಯ, ತಮಿಳುನಾಡಿನ ತಿರುವನ್ವೇಲಿ ಶನಿದೇವಾಲಯ ಬಿಟ್ಟರೆ ಇದು ಹೆಸರಾಂತ ದೇವಾಲಯ ಎಂದು ಹೆಸರು ಪಡೆದಿದೆ.[75] (ಛಾಯಾ ಚಿತ್ರ– 21)

## ಐತಿಹಾಸಿಕ ಪ್ರವಾಸಿ ತಾಣ ಮಾಕಳಿ ದುರ್ಗ

### ಮಾಕಳೀದುರ್ಗದ ಐತಿಹಾಸಿಕ ಹಿನ್ನೆಲೆ

ಇದು ಸಾಸಲು ಹೋಬಳಿಗೆ ಸೇರಿದ ಮಾಕಳಿ ಗ್ರಾಮದ ಬೆಟ್ಟದ ಮೇಲಿದೆ. ಇದು ದೊಡ್ಡಬಳ್ಳಾಪುರ ನಗರದಿಂದ (ಗೌರಿಬಿದನೂರು ಮಾರ್ಗ) 15 ಕಿ.ಮೀ. ಮತ್ತು ಬೆಂಗಳೂರಿನಿಂದ 55 ಕಿ.ಮೀ ದೂರದಲ್ಲಿದೆ. ಈ ದುರ್ಗವು ಸಮುದ್ರಮಟ್ಟದಿಂದ 4430 ಅಡಿ ಎತ್ತರವಿದೆ. ಈ ಬೆಟ್ಟಕ್ಕೆ ಮಾಕಳಿ ಗ್ರಾಮದಿಂದಲೂ ಪ್ರವೇಶಿಸಬಹುದು. ಹಾಗೆಯೇ ಮಾಕಳೀದುರ್ಗ ರೈಲ್ವೇನಿಲ್ದಾಣದ ಪಕ್ಕದಲ್ಲಿರುವ ಬಂಡಿಜಾಡಿನಿಂದಲೂ ಸಂಪರ್ಕವನ್ನು ಪಡೆಯಬಹುದು. ಮಾಕಳೀದುರ್ಗವು ಉತ್ತರ–ದಕ್ಷಿಣದಲ್ಲಿ ಇತರ ಬೆಟ್ಟಗಳಿಂದ ಸೇರಿಕೊಂಡಿರುವಷ್ಟು ಭಾಗವನ್ನು ಬಿಟ್ಟರೆ ಉಳಿದ ಎಲ್ಲಾ ಭಾಗವು ಕಡಿದಾದ ಊರ್ಧ್ವಗಾಮಿ ಶಿಲಾಮುಖಗಳಿಂದ ಕೂಡಿದೆ. ಬೆಟ್ಟದ ಉತ್ತರಭಾಗ ಪೆನುಗೊಂಡ ಮತ್ತು ಬಳ್ಳಾರಿ ಜಿಲ್ಲೆಗಳಿಗೂ ಹಬ್ಬಿದೆ. ಬೆಟ್ಟದ ಬುಡ ಬಿಸಿವಾತಾವರಣದಿಂದ ಕುಡಿದ್ದರೆ ಮೇಲಕ್ಕೆ ಹೋದಂತೆಲ್ಲಾ ಹವಾಗುಣ ತಂಪಾಗುವುದನ್ನು ಅನುಭವಿಸಬಹುದು. ಸುಮಾರು ಮೂರು ಮೈಲಿಯ ಕುದುರೆಮಾರ್ಗ ಪೂರ್ವದಿಂದ ಪಶ್ಚಿಮಾಭಿಮುಖವಾಗಿ ಮೇಲಿರುತ್ತದೆ. ಈ ಬೆಟ್ಟದ ಮತ್ತು ಸುತ್ತಮುತ್ತಲಿನ ಕಾಡುಗಳಲ್ಲಿ ವಿರಳವಾಗಿ ಚಿರತೆಗಳು, ಅಧಿಕವಾಗಿ ಕಾಡುಹಂದಿ, ಮುಳ್ಳುಹಂದಿ, ಮೊಲ, ಕಾಡುಕೋಳಿ, ನರಿ, ನವಿಲು, ತೋಳಗಳು ಇವೆ. ಬೆಟ್ಟದ ಮೇಲೆ ನಿಂತು ನೋಡಿದರೆ ವಿಶಾಲವಾದ ಬಯಲು, ಹತ್ತಾರು ಕೆರೆಕುಂಟೆಗಳು, ಹೊಲಗದ್ದೆಗಳು ಹಚ್ಚಹಸಿರಿನಿಂದ ಕಂಗೊಳಿಸುವುದನ್ನು ಕಾಣಬಹುದು. ಅಲ್ಲದೆ ಸುತ್ತಲಿನ ಗ್ರಾಮಗಳಾದ ಮಾಕಳಿ ಗುಂಡುಮಗೆರೆ, ಘಾಟಿ, ಲಗುಮೇನಹಳ್ಳಿ, ಗಂಜೂರು, ಸೊಣ್ಣೇನಹಳ್ಳಿ, ದೊಡ್ಡಬಳ್ಳಾಪುರ ಪಟ್ಟಣ ಎಲ್ಲವೂ ಕಾಣುತ್ತದೆ. ಮಾಕಳೀಬೆಟ್ಟವು ಮಾರ್ಕಂಡೇಯ ಋಷಿಮುನಿಗಳ ತಪೋವನಆಗಿತ್ತೆಂದು ನಂಬಿಕೆಯಿದೆ.

ಮಾಕಳೀಬೆಟ್ಟದಲ್ಲಿ ಟಿಪ್ಪುಸುಲ್ತಾನನು ಕೋಟೆಯನ್ನು ನಿರ್ಮಿಸುವ ಮೊದಲೇ ವಿಜಯನಗರ ಕಾಲಾವಧಿಯಲ್ಲಿ ಆವತಿ ನಾಡಪ್ರಭುಗಳಾದ ದೊಡ್ಡಬಳ್ಳಾಪುರದ ಪಾಳೆಯಗಾರರು ದೊಡ್ಡಬಳ್ಳಾಪುರ ಪಟ್ಟಣದಲ್ಲಿ ಕೋಟೆಯನ್ನು ನಿರ್ಮಿಸುವ ಕಾಲಕ್ಕೆ ಇಲ್ಲಿಯೂ ಕೋಟೆಯೊಂದನ್ನು ನಿರ್ಮಿಸಿದರು. ಅದು ಇಂದಿಗೂ 'ಮಾಕಳೀದುರ್ಗ'ವೆಂದೇ ಪ್ರಸಿದ್ಧವಾಗಿದೆ.[76] ಇದು ಅವರ ಸೈನ್ಯಕ್ಕೆ ತರಬೇತಿ ನಿಡುವ ಕೇಂದ್ರವಾಗಿತ್ತು. ಬಳ್ಳಾಪುರದ ದೊರೆಗಳು ವಿಜಯನಗರ ಶೈಲಿಗನುಗುಣವಾಗಿ ವಿಶಿಷ್ಟ ಕೌಶಲದಿಂದ ಕುಡಿದ ಭದ್ರವಾದ ಜಿಂಜಾಲು (ಗೋಡೆ)ಗಳನ್ನು

ಬೃಹತ್ ಗ್ರಾನೈಟ್ ಶಿಲೆಗಳಿಂದ ನಿರ್ಮಿಸಿದ್ದರು. ಬೆಟ್ಟದ ಮೇಲೆ ವಿಸ್ತಾರ ಪ್ರಸ್ತಭೂಮಿಯಿದ್ದು, ಅದು ಪಶ್ಚಿಮಕ್ಕೆ ಇಳಿಜಾರಾಗಿದೆ. ಈ ಜಾಗದಲ್ಲಿ 'ಮಾಕಳಿ ಮಲ್ಲೇಶ್ವರ'ನೆಂದೇ ಹೆಸರಾಗಿರುವ ಈಶ್ವರನ ಗುಡಿಯೊಂದಿದೆ. ಅದರಲ್ಲಿ ಶಿವಲಿಂಗವಿದ್ದು, ಗುಡಿಯ ಎದುರಿಗೆ ಬಸವನ ವಿಗ್ರಹ ಮತ್ತು ಗರುಡಗಂಬವಿದೆ. ದೇಗುಲದ ಪ್ರವೇಶದ್ವಾರದ ಮೇಲೆ ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಿರುವ ಬಸವನ ವಿಗ್ರಹಗಳಿವೆ. ಈ ದೇವಾಲಯದ ಹಿಂದೆಡೆ ಸ್ವಲ್ಪ ದರುದಲ್ಲಿ ಅನೇಕ ಕಡೆ ಕಲ್ಲಿನಿಂದ ನಿರ್ಮಾಣವಾಗಿದ್ದು, ಈಗ ಹಾಳಾಗಿರುವ ವಸತಿ ಸಮುಚ್ಚಯವನ್ನು ಗುರುತಿಸಬಹುದು. ಇದರ ಅನತಿ ದೂರದಲ್ಲಿ ನೀರಿನ ಕೊಳವೊಂದಿದೆ. ಇವೆಲ್ಲಾ ಆವತಿ ನಾಡಪ್ರಭುಗಳ (ದೊಡ್ಡಬಳ್ಳಾಪುರದ ಪಾಳೆಯಗಾರರು) ಕಾಲದ ರಚನೆ ಎಂಬುದರಲ್ಲಿ ಯಾವುದೇ ಅನುಮಾನವಿಲ್ಲ.

ದೊಡ್ಡಬಳ್ಳಾಪುರದ ಪಾಳೆಯಗಾರರ ನಂತರ ಈ ಕೋಟೆಯ ಮರಾಠನಾಯಕ ಷಹಜಿಯ ಅಧೀನಕ್ಕೊಳಪಟ್ಟಿತು. ಇವನ ತರುವಾಯ ಕ್ರಿ.ಶ. 1761ರ ಹೊತ್ತಿಗೆ ಪೇಶ್ವೆ ಮಾಧವರಾಯನ ವಶಕ್ಕೆ ಬಂದಿತು. ಪರಾಕ್ರಮಿಯಾದ ಮಾಧವರಾಯನು ಕ್ರಿ.ಶ. 1767ರ ವೇಳೆಗೆ ಬೆಂಗಳೂರು ಸುತ್ತಮುತ್ತಲಿನ ಪ್ರದೇಶಗಳನ್ನೆಲ್ಲಾ ಒಂದೊಂದಾಗಿ ವಶಪಡಿಸಿಕೊಂಡು ಹೈದರಾಲಿಯ ನಿದ್ದೆಗೆಡಿಸಿದರು. ಮಾಧವರಾಯನು ತಾನು ಗೆದ್ದ ಚನ್ನರಾಯದುರ್ಗ, ಮಧುಗಿರಿ, ಸಿರಾ, ಹೊಸಕೋಟೆ, ದೊಡ್ಡಬಳ್ಳಾಪುರ ಮತ್ತು ಮಾಕಳೀದುರ್ಗಗಳನ್ನು ನೋಡಿಕೊಳ್ಳಲು ಗುತ್ತಿಯ ಮುರಾರಿಯನನ್ನು ನೇಮಕ ಮಾಡಿದನು. ಆದರೆ ಅತ್ಯಲ್ಪ ಕಾಲದಲ್ಲೇ ಹೈದರನ ಪ್ರಧಾನ ವೆಂಕಪ್ಪೈಯ್ಯನವರ ತಮ್ಮ ವೆಂಕಟೇಶೈಯ್ಯನವರು ತುಮಕೂರು, ದೇವರಾಯನದುರ್ಗ ಮತ್ತು ಮಾಕಳೀದುರ್ಗವನ್ನು ಮರಾಠರಿಂದ ವಶಪಡಿಸಿಕೊಂಡು ಅವನ್ನು ನೋಡಿಕೊಳ್ಳಲು ತಮ್ಮ ಸಿಬ್ಬಂದಿಯನ್ನು ನೇಮಿಸಿದರು. ಹೀಗೆ ಮರಾಠರ ವಶದಲ್ಲಿದ್ದ ಮಾಕಳೀದುರ್ಗವು ಹೈದರನ ಕೈಸೇರಿತು. ಅವನ ನಂತರ ಟಿಪ್ಪುಸುಲ್ತಾನನ ಅಧಿಪತ್ಯಕ್ಕೂ ಒಳಪಟ್ಟಿತು. ಟಿಪ್ಪು ತಾನು ಗೆದ್ದ ಪ್ರದೇಶಗಳಲ್ಲಿದ್ದ ಪ್ರಮುಖ ಆಯಕಟ್ಟಿನ ಸ್ಥಳಗಳಲ್ಲಿ ಕೋಟೆಕೊತ್ತಲುಗಳನ್ನು ನಿರ್ಮಿಸಿದನು.[77] ಹಾಗೆ ಕಟ್ಟಿಸಿದ ಕೋಟೆಗಳಲ್ಲಿ ದೇವನಹಳ್ಳಿ, ಬಳ್ಳಾರಿ, ಬೆಂಗಳೂರು, ಪಾವಗಡ, ಮಿಡಗೇಸಿ, ರಹಮಾನ್‌ದುರ್ಗ, ಶ್ರೀರಂಗಪಟ್ಟಣ, ನಂದಿದುರ್ಗ, ಮುಜರಾಬಾದ್ ಪ್ರಮುಖವಾದವು. ಅಂತೆಯೇ ಟಿಪ್ಪುವಿನ ಕಾಲದಲ್ಲಿ ದೊಡ್ಡಬಳ್ಳಾಪುರ ಪಟ್ಟಣದ ಕೋಟೆಯನ್ನು ಭದ್ರಪಡಿಸಲಾಯಿತಲ್ಲದೆ. ಇದೇ ತಾಲ್ಲೂಕಿನಲ್ಲಿರುವ ಸಾಸಲು ಹೋಬಳಿಗೆ ಸೇರಿದ ಮಾಕಳೀಬೆಟ್ಟದಲ್ಲಿ ಈ ಹಿಂದೆ ಪಾಳೆಯಗಾರಿಂದ ನಿರ್ಮಾಣಗೊಂಡಿದ್ದ ಕೋಟೆಯನ್ನು ಮತ್ತಷ್ಟು ಅಭೇದ್ಯಗೊಳಿಸಿದನು. ಅದರ ರಕ್ಷಣೆಗೆ ಬೇಕಾದ ಎಲ್ಲಾ ಏರ್ಪಾಡುಗಳನ್ನು ಮಾಡಿದ್ದನು.

ಪೂರ್ವ–ಪಶ್ಚಿಮದ ಕಡೆಯಿಂದ ಬಿಟ್ಟರೆ ಮಾಕಳೀದುರ್ಗವನ್ನು ಬೇರೆ ಕಡೆಯಿಂದ ಏರಲು ಸಾಧ್ಯವಿರಲಿಲ್ಲ. ಈ ಭಾಗವನ್ನು ಟಿಪ್ಪು ಎರಡುಸಾಲಿನ ಆಳುವೇರಿಗಳಿಂದ ಮತ್ತು ಒಂದುಸಾಲು ಅರ್ಶವಪಡೆಯಿಂದ ಬಲಪಡಿಸಿದ್ದನು. ಕೋಟೆಯಲ್ಲಿ ಸಾಕಷ್ಟು ಮದ್ದುಗುಂಡುಗಳ ಸಂಗ್ರಹವಿತ್ತು. ದುರ್ಗದಲ್ಲಿ ಬೆಟ್ಟದ ಮೇಲಿಂದ ಉರುಳಿಸುವುದಕ್ಕಾಗಿ ಸಂಗ್ರಹಿಸಿದ್ದ ದುಂಡನೆಯ ಗ್ರಾನೈಟ್‌ಕಲ್ಲು ಬಹಳವಾಗಿತ್ತು. ಈಗಲೂ ಆ ರಾಶಿಯನ್ನು ಕಾಣಬಹುದು. ಈ ಕೋಟೆಯು ಅಂಡಾಕಾರವಾಗಿದ್ದು, ಒಂದು ಮೈಲಿಗಿಂತ ಸ್ವಲ್ಪ ಹೆಚ್ಚಿನ ಸುತ್ತಳತೆ ಹೊಂದಿದೆ. ಇದರಲ್ಲಿ ಆಳವಾದ ಅಗಳು ಇದ್ದು, ಅದರಲ್ಲಿ ನೀರಿತ್ತು. ಈ ಕಿಲ್ಲೆಗೆ ಎರಡು ಹೆಬ್ಬಾಗಿಲುಗಳಿದ್ದವು.

ಕ್ರಿ.ಶ. 1790ರ ಕೊನೆಯ ಹೊತ್ತಿಗೆ ಲಾರ್ಡ್‌ಕಾರ್ನ್‌ವಾಲೀಸನು ಟಿಪ್ಪುಸುಲ್ತಾನನನ್ನು ಮಣಿಸಲು ಬೆಂಗಳೂರಿನ ಸುತ್ತಮುತ್ತಲಿನ ಎಲ್ಲಾ ದುರ್ಗಗಳನ್ನು ವಶಪಡಿಸಿಕೊಳ್ಳಲು ಮೇಜರ್ ಗೌಡಿಯನ್ನು ನೇಮಿಸಿದನು. ಅವನೋ ಗಿರಿದುರ್ಗಗಳಾದ ಹೊಸೂರು, ಅಂಚೆಟ್ಟಿದುರ್ಗ, ನೀಲಗಿರಿ, ರುತ್ಲೆಂಗಿರಿ, ರಾಯಕೋಟೆ, ಕೆಂಚಳ್ಳಿದುರ್ಗ, ಉದಯದುರ್ಗ, ದೇವನಹಳ್ಳಿ ಮುಂತಾದ ಅನೇಕ ಕೋಟೆಕೊತ್ತಲುಗಳನ್ನು ವಶಪಡಿಸಿಕೊಂಡು ಟಿಪ್ಪುವನ್ನು ಅಧಿನರನ್ನಾಗಿ ಮಾಡಲು ಯತ್ನಿಸಿದರು. ನಂತರ ಅವನು ಬೆಂಗಳೂರಿನ ಉತ್ತರಕ್ಕಿರುವ ಕೋಟೆಗಳತ್ತು ಗಮನವನ್ನಿತ್ತನು. ಅಂತೆಯೇ 1790ರ ಸೆಪ್ಟೆಂಬರ್ 10ರಂದು ಮೇಜರ್ ಗೌಡೀಯು ಮಾಕಳೀದುರ್ಗದ ಮೇಲೆ ಹಠಾತ್ತನೆ ಎರಗಿದನು. ಇಲ್ಲಿ ಅಂತಹ ದೊಡ್ಡಮಟ್ಟದ ರಕ್ಷಣಾಸೇನೆ ಇರಲಿಲ್ಲ. ಕೋಟೆಯ ಒಳಗಿದ್ದ ಕೆಲವು ಕೋವಿಗರು ಮೊದಲ ಕೆರೆಯಲ್ಲಿಯೇ ಶರಣಾಗತರಾದರು ಎಂದು ಮೈಸೂರು ಮತ್ತು ಬ್ರಿಟೀಷ್ ದಾಖಲೆಗಳಿಂದ ತಿಳಿಯುತ್ತದೆ.

ಬೆಂಗಳೂರು ಗೌರಿಬಿದನೂರು ಹೆದ್ದಾರಿಯಲ್ಲಿರುವ ಮಾಕಳಿ ದುರ್ಗವು ಬೆಂಗಳೂರುನಿಂದ 2 ಗಂಟೆಯ ಪ್ರಯಾಣವನ್ನು ಒಳಗೊಂಡಿರುವ ಈ ಸ್ಥಳವು ಪರಿಸರದ ಮಡಿಲಿಗೆ ಚಾರಣಿಗರನ್ನು ಕೈಬೀಸಿ ಕರೆಯುತ್ತದೆ. ಮಾಕಳಿ ದುರ್ಗ ರೈಲು ನಿಲ್ದಾಣದಿಂದ 2 ಕಿ. ಮೀ ಸಾಗಿದರೆ ಚಾರಣಿಗರ ಹಾದಿ ಪ್ರಾರಂಭವಾಗುತ್ತದೆ. ಅಲ್ಲೊಂದು ಕೃಷ್ಣ ದೇವಾಲಯವಿದ್ದು, ದೇವರ ದರ್ಶನ ಪಡೆದು ಮುಂದೆ ಸಾಗಿದರೆ ಬಾಣದ ಗುರುತುಗಳು ಮುಂದಿನ ದಾರಿಯನ್ನು ಸೂಚಿಸುತ್ತದೆ. ಕಾಡಿನಲ್ಲಿ ಮರ–ಗಿಡಗಳನ್ನು ನೋಡುತ್ತಾ ಪರಿಸರದ ವಿಸ್ಮಯಗಳನ್ನು ಕಣ್ತುಂಬಿಸಿಕೊಳ್ಳುತ್ತಾ ಹಕ್ಕಿಗಳ ಇಂಚರ ನವಿಲುಗಳ ಕೂಗು ಇರುತ್ತದೆ. ಈ ಮಾಕಳಿ ದುರ್ಗದ ವಿಶೇಷವೆಂದರೆ ಬೆಟ್ಟದ ಮೇಲೆ ಕೋಟೆ ನಿರ್ಮಾಣವಾಗಿರುತ್ತದೆ. (ಛಾಯಾ ಚಿತ್ರ – 23)

ಇದು ಕೆಂಪೇಗೌಡರ ಕಾಲದ ಕೋಟೆ ಎಂದು ಸ್ಥಳೀಯರು ಹೇಳುತ್ತಾರೆ. ಚಾರಣಿಗರು ಬೆಟ್ಟ-ಗುಡ್ಡಗಳನ್ನು ದಾಟಿ ಪ್ರಕೃತಿಯ ಸವಿಯನ್ನು ಸವಿಯುತ್ತಾ ಬೆಟ್ಟದ ತುತ್ತ ತುದಿಯಲ್ಲಿ ಕೋಟೆಯನ್ನು ತಲುಪಿ ಅಲ್ಲಿರುವ ಶಿವಲಿಂಗದ ದರ್ಶನ ಪಡೆದರೆ ಚಾರಣ ಸಂಪೂರ್ಣವಾಗುತ್ತದೆ. ಕೋಟೆಯ ಮೇಲಿಂದ ಒಮ್ಮೆ ಕಣ್ಣಾಯಿಸಿದರೆ ಪುರಾತನ ಗುಹೆಗಳು ದೇವಸ್ಥಾನ, ಕೋಟೆಯ ಅವಶೇಷಗಳು ಹಾವಿನಂತಿರುವ ರೈಲು ಹಳಿಗಳು, ಮೋಡಗಳು, ಬೀಸುವ ಗಾಳಿ ವಿವಿಧ ರೀತಿಯ ಬೆಟ್ಟದ ಹೂಗಳು ಕಣ್ಣನ್ನು ಸೆಳೆಯುತ್ತದೆ. ಈ ಪ್ರದೇಶ ದುರ್ಗಾ ಸಂರಕ್ಷಣಾ ಅರಣ್ಯ ವಲಯದಲ್ಲಿದ್ದು, ಅರಣ್ಯ ಇಲಾಖೆಯ ಅನುಮತಿ ಪಡೆದು ಚಾರಣವನ್ನು ಪ್ರಾರಂಭಿಸಬೇಕು. ಆಗಾಗ ಕೆಲವು ಸಂಘ ಸಂಸ್ಥೆಗಳು, ಶಾಲಾ-ಕಾಲೇಜುಗಳ ವಿದ್ಯಾರ್ಥಿಗಳು ಭೇಟಿ ನೀಡುತ್ತಿರುತ್ತಾರೆ.

## ಮಾಡೇಶ್ವರದ ಗುಹಾದೇವಾಲಯ

ಇತಿಹಾದ ಪುಟಗಳಲ್ಲಿ ಈವರೆಗೆ ದಾಖಲಾಗದೇ ಮರೆಯಾಗಿದ್ದ ಈ ಗಂಗ ಮಹಾದೇವಾಲಯವು ದೊಡ್ಡಬಳ್ಳಾಪುರ ತಾಲ್ಲೂಕಿನ ದೊಡ್ಡಬೆಳವಂಗಲ ಹೋಬಳಿಗೆ ಸೇರಿದ ಹುಲುಕುಡಿ ಬೆಟ್ಟದ ಪೂರ್ವ ತಪ್ಪಲಿನಲ್ಲಿರುವ ಮಾಡೇಶ್ವರ ಎಂಬ ಕುಗ್ರಾಮದಲ್ಲಿದೆ. ಅಜ್ಞಾತವಾಗಿದ್ದ ಈ ಗುಹಾದೇಗುಲವನ್ನು ಬೆಳಕಿಗೆ ತಂದು ಕೀರ್ತಿ ಸಂಶೋಧಕ ಮೈಸೂರು ನಾಗರಾಜ ಶರ್ಮಾರವರಿಗೆ ಸಲ್ಲಬೇಕು. ಅವರು ಈ ಗುಹಾಲಯವನ್ನು ಕುರಿತು ಅಧ್ಯಯನ ಮಾಡಿ ಪ್ರಕಟಿಸಿರುವರು. ಸ್ಥಳೀಯವಾಗಿ 'ಮುಕ್ಕಣ್ಣೇಶ್ವರ' ದೇವಾಲಯವೆಂದು ಗುರುತಿಸಲ್ಪಡುವ ಈ ಗುಹಾದೇಗುಲವು ಗರ್ಭಗೃಹ ಮತ್ತು ನವರಂಗಗಳಿಂದ ಕೂಡಿದ್ದು, ಗಂಗರ ವಾಸ್ತುಶಿಲ್ಪ ಶೈಲಿಗೆ ಉತ್ತಮ ಉದಾಹರಣೆಯಾಗಿದೆ.[78]

ಗರ್ಭಗೃಹವು ದೇವಾಲಯದ ಪ್ರಮುಖ ಅಂಗ ಮತ್ತು ಪವಿತ್ರ ಭಾಗ. ಗಂಗರ ದೇವಾಲಯಗಳಲ್ಲಿ ಗರ್ಭಗೃಹವು ಸಾಮಾನ್ಯವಾಗಿ ಚೌಕಾಕಾರದಲ್ಲಿರುತ್ತದೆ. ಸಪ್ತಮಾತೃಕೆಯರ ದೇವಾಲಯವಿದ್ದರೆ ಮಾತ್ರ ಆಯತಾಕಾರವಾಗಿರುವುದು. ಆದರೆ ಇಲ್ಲಿ ದೊಡ್ಡದಾದ ಹುಟ್ಟುಬಂಡೆಯೊಂದರ ತಲಭಾಗದಲ್ಲಿ ಸುಮಾರು ನಾಲ್ಕೈದು ಅಡಿ ಎತ್ತರದ ತೆರವಿನ ಗವಿಯಂತಹ ಭಾಗದಲ್ಲಿ ಗರ್ಭಗೃಹವನ್ನು ನಿರ್ಮಿಸಲಾಗಿದೆ. ಈ ಹುಟ್ಟುಬಂಡೆಯ ಮೇಲೆ ಯಾವುದೇ ಗೋಪುರ ನಿರ್ಮಾಣಕ್ಕೂ ಅವಕಾಶವಿಲ್ಲದ ಕಾರಣ ಮೂಲ ಗುಡಿಯು ಗುಹಾದೇವಾಲಯವಾಗಿದೆ. ಗರ್ಭಗುಡಿಯ ಸ್ವಾಭಾವಿಕ ಮೇಲ್ಛಾವಣಿಯ ಕೇವಲ ನಾಲ್ಕು ಅಡಿಗಳಷ್ಟು ಎತ್ತರವಿದ್ದು. ಒಳಸರಿದಂತೆ ಎದ್ದು ನಿಲ್ಲಬಹುದಾದ ಎತ್ತರವನ್ನು ಈ ಅಂಕಣ

ಹೊಂದಿದೆ. ಸ್ವಾಭಾವಿಕ ಗುಹಾಭಾಗದ ಈ ಗರ್ಭಗುಡಿಗೆ ಉತ್ತರ–ದಕ್ಷಿಣದಲ್ಲಿ ತೆರವುಗಳಿದ್ದು, ಅವುಗಳನ್ನು ಇಟ್ಟಿಗೆ ಮತ್ತು ಕಲ್ಲುಗಳಿಂದ ಮುಚ್ಚಿ, ಕೋಣೆಯೊಂದರ ರೂಪ ನೀಡಲಾಗಿದೆ. ಇದರಿಂದ ಮಾಡೇಶ್ವರ ಗುಹ ದೇವಾಲಯವು ವರ್ಷಕ್ಕೆ ಒಂದು ಬಾರಿ ಜಾತ್ರಾ ಮಹೋತ್ಸವ ನಡೆಯುತ್ತದೆ ಅದು ಶಿವರಾತ್ರಿ ಹಬ್ಬದ ಮರುದಿನ ನಡೆಯುವ ಜಾತ್ರೆಯು ಬಹಳ ವೈಭವಯುತವಾಗಿ ನಡೆಯುವಂತಹ ಒಂದು ಜಾತ್ರೆಯು ನಡೆಯುತ್ತದೆ ಆದ್ದರಿಂದ ಸುತ್ತಮುತ್ತಲಿನ ಗ್ರಾಮದ ಜನರು ಬಂದು ಧಾರ್ಮಿಕ ಪದ್ದತಿಯನ್ನು ಸಂಪ್ರದಾಯದಂತೆ ನಡೆಸಿಕೊಂಡು ಬಂದಿರುತ್ತಾರೆ.

## ಗಂಡರಾಜಪುರ

ದೊಡ್ಡಬಳ್ಳಾಪುರ ತಾಲ್ಲೂಕು, ಕಸಬಾ ಹೋಬಳಿಯ ರಾಜಘಟ್ಟದ ಸಮೀಪದಲ್ಲಿರುವ ಗಂಡರಾಜಪುರದ ಕಲ್ಲೇಶ್ವರ ದೇವಾಲಯವು ದೊಡ್ಡಬಳ್ಳಾಪುರ ತಲ್ಲೂಕಿನಲ್ಲಿ ಪತ್ತೆಯಾಗಿರುವ ಗಂಗರ ದೇವಾಲಯಗಳಲ್ಲೇ ಅತ್ಯಂತ ಪುರಾತನವಾದವುಗಳಲ್ಲಿ ಒಂದು. ಊರ ಮಧ್ಯದಲ್ಲಿರುವ ಈ ದೇವಾಲಯವ ನೆಲಮಟ್ಟದಿಂದ ಸುಮಾರು ಆರು ಅಡಿ ಎತ್ತರದ ದಿಬ್ಬದ ಮೇಲಿದೆ. ಈ ದೇವಾಲಯ ಕಾಲಕಾಲಕ್ಕೆ ಜೀರ್ಣೋದ್ಧಾರವಾಗಿದ್ದು. ಮೂಲ ರಚನೆ ಸಂಪೂರ್ಣವಾಗಿ ಬದಲಾವಣೆಯಾಗಿದೆ. ಇದೇ ದೇವಾಲಯದ ಅಧಿಷ್ಠಾನದ ಮೇಲಿರುವ ಹೋಯ್ಸಳರ ಕಾಲಕ್ಕೆ ಸೇರಿದ ತಮಿಳು ದಾನಶಾಸನದಲ್ಲಿ ಮತ್ತು ಇದೇ ದೇಗುಲದ ಆವರಣದಲ್ಲಿರುವ ಶಾಸನ ಪಾಠವೆಲ್ಲಾ ಬಹುತೇಕ ಶಿಥಿಲವಾಗಿರುವ ಇನ್ನೊಂದು ಶಸನದಲ್ಲೂ ಸಹ ಈ ಊರನ್ನು 'ಗಂಗರಾಜಪುರ'ವೆಂದು ಉಲ್ಲೇಖಿಸಲಾಗಿದೆ.[79] ಶಾಸನತಜ್ಞ ಡಾ. ದೇವರಕೊಂಡಾರೆಡ್ಡಿಯವರು "ಬಹುಶಃ ಗಂಗರಾಜರು ಈ ದೇವಾಲಯವನ್ನು ನಿರ್ಮಾಣ ಮಾಡಿರುವುದರಿಂದ ಈ ಊರಿಗೆ 'ಗಂಗರಾಜಪುರ'ವೆಂಬ ಹೆಸರು ಬಂದಿರಬಹುದು" ಎಂಬ ತರ್ಕಿಸುತ್ತಾರೆ. ಇನ್ನೊಂದು ಅಭಿಪ್ರಾಯದಂತೆ ಹತ್ತನೇ ಶತಮಾನದ ಹೊತ್ತಿಗೆ ತಲಕಾಡಿನ ಗಂಗರು ಹೇಳಹೆಸರಿಲ್ಲದಂತಾಗಿದ್ದರು. ಇದೇ ವೇಳೆಗೆ ಚೋಳರು ಗಂಗವಾಡಿ ಪ್ರಾಂತ್ಯವನ್ನು ಆಕ್ರಮಿಸಿ ಪ್ರಬಲರಾಗಿದ್ದರು. ಈ ಸಮಯದಲ್ಲಿ ತಾವು ಗಂಗ ವಂಶದವರೆಂದು ಹೇಳಿಕೊಳ್ಳುವವರು ಆಗ ತಾನೆ ಪ್ರಬಲಿಸುತ್ತಿದ್ದ ಹೋಯ್ಸಳರ ಮೊರೆಹೋಗಿ ಅವರಲ್ಲಿ ದಂಡನಾಯಕರಾಗಿ, ಮಂತ್ರಿಗಳಾಗಿ ರಾಜ್ಯಭಾರದಲ್ಲಿ ತೊಡಗಿದರು. ಅಂತೆಯೇ ಗಂಗವಂಶದ ಗಂಗರಾಜನು ಹೋಯ್ಸಳರ ದಂಡನಾಯಕನಾಗಿ ಅಧಿಕಾರವಹಿಸಿಕೊಂಡನಲ್ಲದೆ. ಚೋಳರ ವಂಶದಲ್ಲಿದ್ದ ಗಂಗವಾಡಿ ಪ್ರಾಂತ್ಯವನ್ನು ಸಂಪೂರ್ಣವಾಗಿ ವಶಪಡಿಸಿಕೊಂಡು ಚೋಳರನ್ನು ಗಂಗವಾಡಿಯಿಂದ ಹೊರದಬ್ಬುವಲ್ಲಿ ಹೋಯ್ಸಳ ದೊರೆ ವಿಷ್ಣುವರ್ಧನನಿಗೆ ನೆರವಾದನು. ನಂತರ ಹೊಯ್ಸಳರ ನೇರ

ಆಡಳಿತಕ್ಕೆ ದೊಡ್ಡಬಳ್ಳಾಪುರ ಪ್ರದೇಶವು ಒಳಪಟ್ಟಿತು. ಈ ಘಟನೆಯ ನಂತರ ಹೋಯ್ಸಳರು ಈ ದೇವಾಲಯಕ್ಕೆ ದಾನ ನೀಡಿದ್ದು, ಗಂಗವಂಶದ ದಂಡನಾಯಕ ಗಂಗರಾಜನ ನೆರವಿನ ಸ್ಮರಣಾರ್ಥ ಈ ಊರಿಗೆ 'ಗಂಗರಾಜಪುರ'ವೆಂಬ ಹೆಸರನ್ನು ಇಟ್ಟಿರಬೇಕು. ಶಾಸನೋಕ್ತವಾಗಿರುವ ಗಂಗರಾಜಪುರವೆಂಬ ಹೆಸರೇ ಕ್ರಮೇಣ 'ಗಂಡರಾಜಪುರ'ವಾಗಿರಬೇಕು.

ಈಗಿನ ಕಲ್ಲೇಶ್ವರ ದೇವಾಲಯ ಉತ್ತರಾಭಿಮುಖವಾಗಿದ್ದು ಗರ್ಭಗೃಹ, ನವರಂಗಮಂಟಪ ಮತ್ತು ಮುಖಮಂಟಪಗಳನ್ನು ಹೊಂದಿದೆ. ಗರ್ಭಗೃಹ ಇಂದಿಗೂ ಸುಸ್ಥಿತಿಯಲ್ಲಿದ್ದು ಉತ್ತರಾಭಿಮುಖವಾಗಿದೆ. ಚೌಕಾಕಾರದ ಗರ್ಭಗೃಹವು ನವರಂಗ ಮತ್ತು ಮುಖಮಂಟಪದ ನೆಲಮಟ್ಟಕ್ಕಿಂತ ತುಸು ಎತ್ತರದಲ್ಲಿದ್ದು, ಪ್ರವೇಶಿಸಲು ಪೂರ್ವಾಭಿಮುಖವಾಗಿ ಮುರು ಮೆಟ್ಟಿಲುಗಳಿವೆ. ಗರ್ಭಗೃಹದಲ್ಲಿ ಶಿವಲಿಂಗವನ್ನು ಬಿಟ್ಟರೆ ಬೇರೆ ಯಾವುದೇ ದೇವತಾ ಶಿಲ್ಪಗಳಿಲ್ಲ. ಇಲ್ಲಿನ ಶಿವಲಿಂಗವೂ ಸಹ ಮಾಡೇಶ್ವರದ ಶಿವಲಿಂಗದಂತೆಯೇ ಕೋಲಾಕಾರವಾಗಿದ್ದು. ಮಧ್ಯನಾಡಿ ಎರಡು ಸಮಾನಾಂತರ ಊರ್ಧ್ವರೇಖೆಗಳನ್ನು ಹೊಂದಿದೆ. ಇದರ ಪೀಠಭಾಗ ದೇವಾಲಯದ ಅಧಿಷ್ಠಾನದಂತೆಯೇ ಅಧೋಪದ್ಮ, ತ್ರಿಪಟ್ಟಕುಮುದ ಮತ್ತು ಊರ್ಧ್ವಪದ್ಯ ಭಾಗಗಳನ್ನು ಹೊಂದಿದೆ. ಇದೇ ರೀತಿಯ ಶಿವಲಿಂಗವನ್ನು ಚಿಕ್ಕನಹಳ್ಳಿ (ಹೊಸಕೋಟೆ ತಾಲ್ಲೂಕು), ಗಂಗವಾರ (ದೇವನಹಳ್ಳಿ ತಾಲ್ಲೂಕು), ಮೈಸೂರಿನ ಕುಕ್ಕರಹಳ್ಳಿ, ಬನ್ನೂರು, ಮಣ್ಣೆ ಕೋಲಾರ ಮುಂತಾದೆಡೆಗಳಲ್ಲೂ ಕಾಣಬಹುದು. ಗರ್ಭಗೃಹದ ಎದುರಿಗೆ ಅಂತರಾಳವಿರುವ ಸ್ಥಳದಲ್ಲಿ ಗರ್ಭಗೃಹದ ಎತ್ತರಕ್ಕನುಗುಣವಾಗಿ ಒಂದು ಚಿಕ್ಕದಾದ ವೇದಿಕೆ ನಿರ್ಮಿಸಿ, ಅದರ ಮೇಲೆ ಬಸವನ ವಿಗ್ರಹ ಇಡಲಾಗಿದೆ.

## ಚನ್ನಾಪುರ

ಮಹಿಷಮರ್ದಿನಿ ಶಿಲ್ಪಗಳು ಗಂಗವಾಡಿಯಾದ್ಯಂತ ಕಂಡು ಬರುತ್ತದೆ. ಇವು ಬಿಡಿಬಿಡಿಯಾಗಿ ಇಲ್ಲವೆ ಸ್ವತಂತ್ರ ಶಿಲ್ಪಗಳಾಗಿ ಕಾಣುತ್ತವೆ. ಪ್ರಸ್ತುತ ಅಧ್ಯಯನದ ಕ್ಷೇತ್ರಕಾರ್ಯ ಸಮಯದಲ್ಲಿ ಗಂಗರ ಕಾಲಕ್ಕೆ ಸೇರಿದ ಮಹಿಷಮರ್ದಿನಿಯ ಬಿಡಿಶಿಲ್ಪವೊಂದನ್ನು ತೂಬುಗೆರೆ ಹೋಬಳಿ, ಮೆಳೇಕೋಟೆ ಗ್ರಾಮಪಂಚಾಯ್ತಿ ವ್ಯಾಪ್ತಿಗೆ ಸೇರಿದ ಚನ್ನಾಪುರದಲ್ಲಿ ಪತ್ತೆಹಚ್ಚಲಾಗಿದೆ. ಇಂದು ಈ ಶಿಲ್ಪವನ್ನು ಇಲ್ಲಿನ ವೆಂಕಟರಮಣಸ್ವಾಮಿ ದೇವಾಲಯದ ಮುಖ್ಯ ಪ್ರವೇಶದ್ವಾರದ ಪಕ್ಕದ ಗೋಡೆಯೊಂದರಲ್ಲಿ ಸೇರಿಸಲಾಗಿದೆ. ಈ ಶಿಲ್ಪವು ಉಳುಮೆ ಮಾಡುವಾಗ ಹೊಲದಲ್ಲಿ ದೊರೆತದ್ದೆಂದು ಗ್ರಾಮಸ್ಥರು ಹೇಳುವರಾದರೂ ಮೂಲತಃ ಇದು ಗಂಗರ ಕಾಲದ್ದಾಗಿದೆ. ಎಲ್ಲೆಡೆಯಂತೆ ಇಲ್ಲಿಯೂ ಮಹಿಷಮರ್ದಿನಿಯ ರೂಪವು ಉಗ್ರವಾಗಿದ್ದು, ಮಹಿಷನ ಸಂಹಾರ

ಕ್ರಿಯೆಯೇ ಮುಖ್ಯವಾಗಿದೆ. ಅಂದರೆ ಮಹಿಷಮರ್ದಿನಿಯು ಮಹಿಷನನ್ನು ಮೆಟ್ಟಿನಿಂತು ಶುಲದಲ್ಲಿ ತಿವಿಯುತ್ತಿದ್ದಾಳೆ. ಈ ದೇವಾಲಯವು ಮಹಿಶಿ ಮರ್ಧಿನಿಯ ದೇವಾಲಯವಾಗಿದ್ದು ಪ್ರಾಚೀನ ಕಾಲದ ದೇವಾಲಯವು ದುಸ್ತಿತಿಯನ್ನು ಕಂಡಿದ್ದು ಆಧುನಿಕ ಕಾಲದಲ್ಲಿ ಈ ದೇವಾಲಯವನ್ನು ಪುನರ್ ನಿರ್ಮಾಣ ಮಾಡಲಾಗಿದ್ದು ನವರಾತ್ರಿ ಹಬ್ಬದ ದಿನದಂದು ಈ ದೇವಾಲಯದಲ್ಲಿ ಬೃಹತ್ ಪೂಜಾ ಕಾರ್ಯಕ್ರಮವನ್ನು ನಡೆಸಿಕೊಂಡು ಬಂದಿರುತ್ತಾರೆ.

## ತೋಡಲಬಂಡೆ ಕೋಟೆ

ಈ ಕೋಟೆ ಸಾಸಲು ಗ್ರಾಮಕ್ಕೆ ಅಂಟಿದಂತೆಯೇ ಇರುವ ತೋಡಲಬಂಡೆ ಎಂಬ ಗ್ರಾಮದಲ್ಲಿದೆ. ಇದು ದೊಡ್ಡಬಳ್ಳಾಪುರ ನಗರದಿಂದ 30 ಕಿ.ಮೀ. ದೂರದಲ್ಲಿದೆ. ಅಂದರೆ ಇದು ತಾಲ್ಲೂಕಿನ ಗಡಿ ಭಾಗದಲ್ಲಿದೆ. ಇದೊಂದು ದೊಡ್ಡದಾದ ಏಕಶಿಲಾ ಗುಡ್ಡದ ಮೇಲೆ ನಿರ್ಮಾಣಗೊಂಡಿರುವ ಕೋಟೆಯಾಗಿದ್ದು, ಇದನ್ನು ಗಿರಿದುರ್ಗ ವರ್ಗಕ್ಕೆ ಸೇರಿಸಬಹುದು. ದೊಡ್ಡಬಳ್ಳಾಪುರ ತಾಲ್ಲೂಕನ್ನು ಆಳಿದ ಅರಸು ಮನೆತನಗಳಲ್ಲಿ ಮೊದಲಿಗರಾದ ತಲಕಾಡಿನ ಗಂಗರ ಕಾಲದಲ್ಲಿ ಮಣ್ಣೆ (ಶಾಸನೋಕ್ತ ಮಾನ್ಯಪುರ–ನೆಲಮಂಗಲ ತಾಲ್ಲೂಕು) ಅಲ್ಪಕಾಲ ಅವರ ರಾಜಧಾನಿ ಪಟ್ಟಣವಾಗಿತ್ತು. ಅದಕ್ಕೆ ಸಮೀಪದಲ್ಲೇ ಇರುವ ಈ ತೊಡಲಬಂಡೆ ಕೋಟೆಯನ್ನು ಗುಡ್ಡದ ಮೇಲೆ ಒಂದು ಎಕರೆ ವಿಸ್ತೀರ್ಣದಲ್ಲಿ ಸಂಪೂರ್ಣವಾಗಿ ಕಲ್ಲಿನಿಂದಲೇ ನಿರ್ಮಿಸಲಾಗಿದೆ.[80]

ದಕ್ಷಿಣಾಭಿಮುಖವಾಗಿ ಈ ಕೋಟೆಗೆ ಒಟ್ಟು ಮೂರು ದಿಡ್ಡಿಬಾಗಿಲುಗಳಿವೆ. ಒಂದು ದಕ್ಷಿಣದಿಕ್ಕಿನ ಪ್ರವೇಶದ್ವಾರದ ಪಕ್ಕದಲ್ಲಿದ್ದರೆ ಇನ್ನೆರಡು ಉತ್ತರ ಮತ್ತು ಪಶ್ಚಿಮ ದಿಕ್ಕಿನಲ್ಲಿವೆ. ಆದರೆ ಇವುಗಳಲ್ಲಿ ಪ್ರವೇಶದ್ವಾರದ ಪಕ್ಕದಲ್ಲಿರುವ ದಿಡ್ಡಿಬಾಗಿಲು ಮಾತ್ರ ಉಳಿದುಕೊಂಡಿದ್ದು. ಉಳಿದೆರಡು ದಿಡ್ಡಿಬಾಗಿಲುಗಳು ಮಳೆಗಾಳಿಯ ಹೊಡೆತಕ್ಕೆ ಸಿಲುಕಿ ಬಿದ್ದುಹೋಗಿವೆ. ಅವುಗಳ ಅವಶೇಷಗಳನ್ನು ಈಗಲೂ ನೋಡಬಹುದು. ಸುಮಾರು ಹತ್ತರಿಂದ–ಹನ್ನೆರಡು ಅಡಿ ಎತ್ತರವಾಗಿರುವ ಈ ಕೊಟೆಯ ಒಳಗೆ ಎರಡು ಚಿಕ್ಕದಾದ ಗುಡಿಗಳಿವೆ. ಅವುಗಳಲ್ಲಿ ಒಂದು ಶ್ರೀರಾಮನ ಗುಡಿಯಾಗಿದ್ದು, ಅದರ ಎದುರುಗಿರುವ ಕದಂಬ ಮೇಲೆ ಆಂಜನೇಯನ ಉಬ್ಬುಶಿಲ್ಪವಿದೆ. ಇನ್ನೊಂದು ಗುಡಿಯಲ್ಲಿ ಯಾವ ದೇವತಾ ಶಿಲ್ಪವಿತ್ತೆಂದು ತಿಳಿಯುವುದಿಲ್ಲ. ಈ ಗುಡಿಗಳನ್ನು ಗಂಗರ ದೇವಾಲಯ ರಚನೆಯಂತೆಯೇ ಚಪ್ಪಡಿಕಲ್ಲುಗಳನ್ನು ಒಂದರ ಮೇಲೊಂದರಂತೆ ಪೇರಿಸಿ ಕಟ್ಟಿದ್ದಾರೆ. ಗುಡಿಯ ಬಾಗಿಲಿಗೆ ಮತ್ತು ನಾಲ್ಕು ಮೂಲೆಗಳಲ್ಲಿ ಉದ್ದವಾದ ಚಪ್ಪಡಿಕಲ್ಲುಗಳನ್ನು ನಿಲ್ಲಿಸಿ, ಅದರ ಮೇಲೆ ಅಡ್ಡ ತೊಲೆಯನ್ನು ನಿಲ್ಲಿಸಿರುವರು. ಇಲ್ಲಿ ಯಾವುದೇ ಅಲಂಕರಣೆಯಿಲ್ಲ.

ಗುಡಿಯ ಮೇಲ್ಛಾವಣಿಗೆ ಚೌಕಾಕಾರದ ಒಂದೇ ಕಲ್ಲನ್ನು ಹಾಸಿರುವರು. ಇವನ್ನೆಲ್ಲಾ ನೋಡಿದರೆ ಗಂಗರ ಕಾಲದ ದೇವಾಲಯಗಳ ಗರ್ಭಗೃಹಗಳ ರಚನೆ ನೆನಪಿಗೆ ಬರುತ್ತದೆ. ಇದೇ ರೀತಿಯಾಗಿ ಪ್ರವೇಶದ್ವಾರ ಮತ್ತು ಅಗಸೆ (ದಿಡ್ಡಿ) ಬಾಗಿಲುಗಳ ರಚನೆಯಾಗಿದೆ.

ತೋಡಲಬಂಡೆಯ ಈ ಕಿಲ್ಲೆಯನ್ನು ಶತ್ರುಗಳನ್ನು ಬಂಧನದಲ್ಲಿಟ್ಟು ಕೊಲ್ಲಲು ಬಳಸಲಾಗುತ್ತಿತ್ತೆಂದು ಸ್ಥಳೀಯರು ಹೇಳುವವರಾದರೂ ಅದಕ್ಕೆ ಯಾವ ಪುರಾವೆಯೂ ಇಲ್ಲ. ಇನ್ನೊಂದು ಅಭಿಪ್ರಾಯದಂತೆ ಹಿಂದೆ ಈ ಪ್ರದೇಶವು ದಟ್ಟವಾದ ಅರಣ್ಯದಿಂದ ಕೂಡಿದ್ದು, ಬೇಟೆಯಾಡಲು ಯೋಗ್ಯವಾಗಿತ್ತು. ರಾಜವಂಶಸ್ಥರು ಬೇಟೆಯಾಡಲು ಈ ಸ್ಥಳಕ್ಕೆ ಬಂದಾಗ ಈ ಕಿಲ್ಲೆಯಲ್ಲಿ ವಿಶ್ರಾಂತಿ ಪಡೆದು ಹೋಗುತ್ತಿದ್ದರು. ಇದಕ್ಕೆ ಪೂರಕವಾಗಿ ಈ ಕೋಟೆಯಲ್ಲಿ ಚಿಕ್ಕದಾದ ಮುದ್ದಿನಮನೆ ಅಥವಾ ಆಯುಧಗಳ ಸಂಗ್ರಹಕೊಠಡಿ, ರಾಜಕಣಜ, ನೀರಿನ ಆಸರೆಯಾಗಿ ನೈಸರ್ಗಿಕ ಸಿಹಿನೀರಿನ ದೋಣಿ (ಇದು ಈ ಕಿಲ್ಲೆಯ ಹಿಂಭಾಗದಲ್ಲಿದೆ) ಎಲ್ಲವೂ ಕಂಡುಬರುತ್ತದೆ. ಸ್ವಲ್ಪ ಸೂಕ್ಷ್ಮವಾಗಿ ಗಮನಿಸಿದರೆ ಜನವಸತಿಯಿದ್ದುದಕ್ಕೆ ಅವಶೇಷಗಳ ಪುರಾವೆಯೂ ದೊರಕುತ್ತದೆ. ಕೋಟೆಯ ಹೊರಪ್ರದೇಶವು ಇಳಿಜಾರಾದ, ಕಡಿದಾದ ಬಂಡೆಯಿಂದ ಕೂಡಿದ್ದು, ಶತ್ರುಗಳು ಅಷ್ಟು ಸುಲಭವಾಗಿ ಒಳನುಸುಳಲು ಆಗುತ್ತಿರಲಿಲ್ಲ.

ಒಟ್ಟಾರೆ ಈ ಕೋಟೆಯ ವಾಸ್ತುರಚನೆ ಅಂದರೆ ಕೋಟೆಗೋಡೆಯ ಕಲ್ಲನ್ನು ಪೇರಿಸಿರುವ ರೀತಿ, ಅದರಲ್ಲಿನ ಗುಡಿಗಳ ಶೈಲಿ, ಅವುಗಳ ಎತ್ತರ ಇತ್ಯಾದಿಗಳ ಆಧಾರದ ಮೇಲೆ ಈ ಕೋಟೆಯನ್ನು ಗಂಗರ ಆಳ್ವಿಕೆಯ ಕೊನೆಯ ಕಾಲಕ್ಕೆ ಅಂದರೆ ಕ್ರಿ.ಶ10ನೇ ಶತಮಾನದ ಕಲಕ್ಕೆ ಸೇರಿಸಬಹುದು. ಈವರೆಗೆ ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ಪತ್ತೆಯಾಗಿರುವ ಪುರಾತನ ರಕ್ಷಣಾವಾಸ್ತುವೆಂದರೆ ಈ ತೋಡಲಬಂಡೆ ಗ್ರಾಮದ ಕೋಟೆಯೇ ಆಗಿದೆ. 10ನೇ ಶತಮಾನದ ಪ್ರಾತಿನಿಧಿಕ ಅವಶೇಷವಾಗಿ ಇಂದಿಗೂ ಈ ಕೋಟೆ ಸುಭದ್ರವಾಗಿಯೇ ಇದೆ. ಆದರೆ ಈ ಕೋಟೆಯ ಬಗ್ಗೆ ಈವರೆಗೆ ಸ್ಥಳೀಯವಾಗಿ ದೊರೆತಿರುವ ಶಾಸನಗಳಲ್ಲಾಗಲಿ ಅಥವಾ ಸಾಹಿತ್ಯ ಕೃತಿಗಳಲ್ಲಾಗಲಿ ಯಾವುದೇ ಪ್ರಸ್ತಾವವಿಲ್ಲ. ಈ ಕೋಟೆಯ ಅತ್ತ ಗಂಗರ ತಾತ್ಕಾಲಿಕ ರಾಜಧಾನಿಯಾಗಿದ್ದ ಮಣ್ಣೆಯಿಂದಲೂ, ಇತ್ತ ಬಳ್ಳಾಪುರ ಪಾಳೆಯಗಾರರ ರಾಜಧಾನಿಯಾಗಿದ್ದ ದೊಡ್ಡಬಳ್ಳಾಪುರದಿಂದಲೂ ಸ್ವಲ್ಪ ದೂರವಿದ್ದು, ಶತ್ರುಗಳ ಕಣ್ಣಿಗೆ ಬೀಳದ ಕಾರಣ ಇಂದಿಗೂ ಸುರಕ್ಷಿತವಾಗಿ ಉಳಿದುಕೊಂಡಿದೆ. ಆದರೆ ತೋಡಲಬಂಡೆ ಗ್ರಾಮದ ಸುತ್ತಮುತ್ತಲೇ ಇರುವ ಗಲಿಬಿಲಿಕೋಟೆ, ಹಳೇಕೋಟೆ, ಮುಂತಾದ ಗ್ರಾಮಗಳಲ್ಲಿ ಹಿಂದೆ ಅಲ್ಲಿ ಇದ್ದಿರಬಹುದಾದ ಯಾವ ಕೋಟೆಗಳ ಬಗೆಗೂ ಅವಶೇಷವಾಗಲಿ, ಮಾಹಿತಿಯಾಗಲಿ ದೊರೆಯದು. ಈ ಕೋಟೆಯು ಪ್ರಮುಖವಾದಂತಹ ಕೋಟೆಯಾಗಿದ್ದು ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲೇ ಈ ಕೋಟೆಯು

ಸುಂದರವಾದ ಆಕರ್ಶಣೆಯನ್ನು ಒಳಗೊಂಡಿದ್ದು ತಾಲ್ಲೂಕಿನ ಐತಿಹಾಸಿಕ ಹಿನ್ನೆಲೆಯನ್ನು ತಿಳಿಸಿಕೊಡುವಂತಹ ಒಂದು ಕೋಟೆಯಾಗಿದೆ.

## ಆದಿನಾರಾಯಣಸ್ವಾಮಿ ದೇವಾಲಯ

ಶಾಂತಿಪ್ರಿಯರು, ಧರ್ಮಭೀರುಗಳು ಮತ್ತು ಉದಾರಿಗಳಾಗಿದ್ದ ದೊಡ್ಡಬಳ್ಳಾಪುರದ ಆವತಿ ನಾಡಪ್ರಭುಗಳು ಕಲೆ – ಸಂಸ್ಕೃತಿಗೆ ತಮ್ಮದೇ ಆದ ಕಾಣಿಕೆ ನೀಡಿದ್ದಾರೆ. ಇವರ ಕಾಲದಲ್ಲಿ ನಿರ್ಮಾಣಗೊಂಡ ದೇವಾಲಯ, ಪುಷ್ಕರಣಿ ಮತ್ತು ಶಿಲ್ಪಗಳು ಇವರ ಕಲಾಭಿರುಚಿಗೆ ಸಾಕ್ಷಿಗಳಾಗಿವೆ. ಇವರು ವಿಜಯನಗರ ಅರಸರ ದೇವಾಲಯ ನಿರ್ಮಾಣ ಪರಂಪರೆಯನ್ನು ಮುಂದುವರೆಸಿದರು. ಇವರ ಕಾಲದ ವಾಸ್ತುಶೈಲಿಯ ಅಧ್ಯಯನಕ್ಕೆ ಆದಿನಾರಾಯಣಸ್ವಾಮಿ ದೇವಾಲಯದ ಮುಖಮಂಟಪದ ಪ್ರವೇಶದ್ವಾರ ಮತ್ತು ಪುಷ್ಕರಣಿತೆ ಅಮೂಲ್ಯ ಸಾಮಗ್ರಿಯನ್ನು ಒದಗಿಸುತ್ತವೆ.

ಇಂದು ಸಾರ್ವಜನಿಕ ಸರ್ಕಾರಿ ಆಸ್ಪತ್ರೆಯ ಹಿಂಭಾಗದಲ್ಲಿರುವ ಹಾಲುಮಂಟಪವೇ ಅಂದಿನ ದೊಡ್ಡಬಳ್ಳಾಪುರದ ಪಾಳೆಯಗಾರರಿಂದ ನಿರ್ಮಾಣವಾದ ಆದಿನಾರಾಯಣಸ್ವಾಮಿ ದೇವಾಲಯದ ಪಳೆಯುಳಿಕೆ. ಮಲ್ಲಭೈರೇಗೌಡನು ವಿಜಯನಗರ ಸಾಮ್ರಾಜ್ಯದ ಆಶ್ರಿತ ರಾಜನಾದ್ದರಿಂದ ಅಂದು ಅಸ್ತಿತ್ವದಲ್ಲಿದ್ದ ಸಮಕಾಲೀನ “ವಿಜಯನಗರ ಶೈಲಿ”ಯಲ್ಲೇ ಈ ದೇವಾಲಯವನ್ನು ನಿರ್ಮಿಸಿದನು.[81] ವಿಜಯನಗರ ಕಲೆಯ ನೇರಪ್ರಭಾವ ಇವರ ವಾಸ್ತು ಮತ್ತು ಶಿಲ್ಪಕಲೆಯ ಮೇಲೆ ಕಂಡುಬಂದರೂ ಸ್ಥಳೀಯ ವಿಶಿಷ್ಟ ಸೇರ್ಪಡೆಗಳಿಂದಾಗಿ ಒಂದು ವಿಶಿಷ್ಟ ಪ್ರಾದೇಶೀಕ ಶೈಲಿಯನ್ನು ಇವರ ಕಲೆಯಲ್ಲಿ ಗುರುತಿಸಬಹುದಾಗಿದೆ. ಈಗ ಉಳಿದುಕೊಂಡಿರುವ ಈ ಹಾಳು ಮಂಟಪ ಅಂದಿನ ದೇವಾಲಯದ ಮುಖಮಂಟಪದ ಪ್ರವೇಶದ್ವಾರ ಮಾತ್ರವಾಗಿತ್ತು. ಒಂದು ಮೂಲದ ಪ್ರಕಾರ ಈಗಿನ ಇಡೀ ಗಾಂಧಿನಗರ ಮತ್ತು ಹಳೆಯ ಬಸ್‌ನಿಲ್ದಾಣವೇ ಈ ದೇವಾಲಯದ ಪ್ರಕಾರದಲ್ಲಿದೆ. ಇದಕ್ಕೆ ಪೂರಕ ಆಧಾರವಾಗಿ ಈ ದೇವಾಲಯದ ಅಗಾಧತೆಯನ್ನು ಊಹಿಸಲು ನಾಗರಕೆರೆಯ ಕೋಡಿಕಟ್ಟೆ ಮತ್ತು ಮೆಟ್ಟಿಲುಗಳಿಗೆ ಬಳಸಿರುವ ಬೃಹತ್ ಗ್ರಾನೈಟ್ ಕಲ್ಲುಗಳನ್ನು ಗಮನಿಸಬಹುದು. ಇಡೀ ಕೆರೆಗೆ ಹಾಕಿರುವ ಒಂದೂವರೆ ಕಿಲೋ ಮೀಟರ್ ಉದ್ದದ ಕಲ್ಲಿನ ಮೆಟ್ಟಿಲುಗಳು ಇದೇ ಆದಿನಾರಾಯಣಸ್ವಾಮಿ ದೇವಾಲಯದ್ದು! ಈಗಲೂ ಕೆರೆಯ ಮೆಟ್ಟಿಲುಗಳ ಮೇಲೆ ಸೂಕ್ಷ್ಮವಾಗಿ ಕಣ್ಣುಹಾಯಿಸಿದರೆ ದೇವಾಲಯದ ಕೆತ್ತನೆಯ ಭಾಗಗಳು, ಅಲಂಕರಣ ಭಾಗಗಳು, ಕಂಬದ ತುಂಡುಗಳು, ಗುಬುಟೆಗಳು, ಮೂಲೆಗಲ್ಲುಗಳು, ಪದ್ಮಪೀಠ, ಬೋದಿಗೆಕಲ್ಲುಗಳು, ದಶಾವತಾರದ ಕೆಲವೊಂದು ಭಗ್ನಗೊಂಡ ಶಿಲ್ಪ ಇತ್ಯಾದಿಗಳೆಲ್ಲಾ

ಗೋಚರಿಸುತ್ತದೆ. ಅಲ್ಲದೆ ಈಗ ಕೆರೆಏರಿಯ ಮೇಲೆ ನೂತನವಾಗಿ ಜೀರ್ಣೋದ್ಧಾರಗೊಂಡಿರುವ ಆಂಜನೇಯಸ್ವಾಮಿ ದೇವಾಲಯದಲ್ಲಿನ ಸ್ತಂಭಗಳೂ ಇದೇ ಆದಿನಾರಾಯಣಸ್ವಾಮಿ ದೇವಾಲಯದ್ದೆಂದು ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿಯಿತು. ಈ ಕಂಬಗಳ ವಿನ್ಯಾಸ, ಅವುಗಳ ಮೇಲಿನ ಶಿಲ್ಪಗಳು ಈ ಅಂಶವನ್ನು ಪುಷ್ಟೀಕರಿಸುತ್ತವೆ.

## ಗಾಣಿಗರಪೇಟೆಯ ಲಕ್ಷ್ಮೀನಾರಾಯಣಸ್ವಾಮಿ (ತೇಲಿ ರಂಗನಾಥಸ್ವಾಮಿ) ದೇವಾಲಯ

ದೊಡ್ಡಬಳ್ಳಾಪುರ ನಗರದ ತೆಲ್ಲಿಗರ ಅಥವಾ ಗಾಣಿಗರಪೇಟೆಯಲ್ಲಿರುವ ಲಕ್ಷ್ಮೀನಾರಾಯಣಸ್ವಾಮಿ ದೇವಾಲಯ ದೊಡ್ಡಬಳ್ಳಾಪುರದ ಪಾಳೆಯಗಾರ ಆವತಿ ನಾಡಪ್ರಭು ಇಮ್ಮಡಿ ಹಾವಳಿ ಭೈರೇಗೌಡನ ಕಲದಲ್ಲಿ ನಿರ್ಮಾಣವಾಗಿದ್ದು ಶಾಸನೋಕ್ತವಾಗಿದೆ. ತೆಲ್ಲಿಗರ ಈ ದೇಗುಲವು ಅವರ ಸಮುದಾಯಕ್ಕೆ ಸಂಬಂಧಿಸಿದ್ದು, ಅವರು ಇರುವ ಕೇರಿಯಲ್ಲೇ ನಿರ್ಮಾಣಗೊಂಡಿದೆ. ಈ ತೆಲ್ಲಿ ರಂಗನಾಥ ದೇವರು ಹೆಸರೇ ಸೂಚಿಸುವಂತೆ ತೆಲ್ಲಿಗರ ದೇವರಾಗಿತ್ತು. ಬಹುಶಃ ತೆಲ್ಲಿಗರು ಈ ದೇವಾಲಯವನ್ನು ಸಾಮೂಹಿಕವಾಗಿ ನಿರ್ಮಾಣ ಮಾಡಿಕೊಂಡಿರಬೇಕು. ತೆಲ್ಲಿಗರು ತಮ್ಮ ಕುಲದೇವರಿಗೆ ಕಲ್ಲಿನ ದೇವಾಲಯಗಳನ್ನು ಕಟ್ಟಿಸಿ, ರಾಜ್ಯದ ಅದಿಕಾರಿಗಳು, ತಮ್ಮದೇ ಸಮುದಾಯದ ಪ್ರತಿಷ್ಟಿತರು ಹಾಗೂ ಶ್ರೀಮತರನ್ನು ಸೇರಿಸಿ ದಾನ ನೀಡಿ ಅದನ್ನು ಶಿಲಾಶಾಸನದಲ್ಲಿ ದಾಖಲಿಸಿರುವುದಕ್ಕೆ ಅನೇಕ ಶಾಸನಗಳನ್ನು ದೃಷ್ಟಾಂತವಾಗಿ ಗಮನಿಸಬಹುದು.[82] ಈ ದೇವಾಲಯವೂ ಸಹ ಇದೇ ಊರಿನ ಸಮಕಾಲೀನ ಆದಿನಾರಾಯಣಸ್ವಾಮಿ, ಕಾಡನೂರಿನ ಚನ್ನಕೇಶವ, ಚಿನ್ನಾಪುರದ ವೆಂಕಟರಮಣಸ್ವಾಮಿ ದೇವಾಲಯಗಳಂತೆಯೇ ವಿಜಯನಗರ ಶೈಲಿಯಲ್ಲಿ ನಿರ್ಮಾಣಗೊಂಡಿದೆ. ಆದರೆ ಚರಿತ್ರಿಕ ಮಹತ್ವವುಳ್ಳ ಈ ದೇವಾಲಯವನ್ನು ಕಾಲಾನಂತರದಲ್ಲಿ ಅಂದರೆ ಕಳೆದ ಶತಮಾನದ ಕೊನೆಯಲ್ಲಿ ಜೀರ್ಣೋದ್ಧಾರದ ಹೆಸರಿನಲ್ಲಿ ಮೂಲ ದೇವಾಲಯದ ಭಿತ್ತಿಯನ್ನೆಲ್ಲಾ ಸಂಪೂರ್ಣವಾಗಿ ಸಿಮೆಂಟ್‌ನಿಂದ ಪ್ರಾಸ್ಟರಿಂಗ್ ಮಾಡಲಾಗಿದೆ. ಅದೇ ರೀತಿಯಾಗಿ ತಮ್ಮ ಸೌಂದರ್ಯದಿಂದಲೇ ಕಣ್ಮನ ಸೆಳೆಯುತ್ತಿದ್ದ ಬಾಗಿಲುವಾಡಗಳು ಮತ್ತು ಕಂಬಗಳಿಗೆ ಆಧುನಿಕ ಬಣ್ಣಗಳನ್ನು ಬಳೆದು ನೋಡಲಾಗದಂತೆ ಮಾಡಿದ್ದಾರೆ. ಹೀಗಾಗಿ ಇಂದು ಗರ್ಭಗೃಹವೂ ಸೇರಿದಂತೆ ಇಡೀ ದೇವಾಲಯ ತನ್ನ ಮೂಸ್ವರೂಪ ಕಳೆದುಕೊಂಡಿದೆ. ಈ ದೇವಾಲಯವು ದೊಡ್ಡಬಳ್ಳಾಪುರ ತಾಲ್ಲೂಕಿನ ಕೇಂದ್ರಸ್ಥಾನದಲ್ಲಿದ್ದು ವೈಕುಂಠ ಏಕಾದಶಿ ಹಬ್ಬದ ದಿನದಂದು ಜಾತ್ರೆಯನ್ನು ನಡೆಸಿಕೊಂಡು ಬಂದಿರುತ್ತಾರೆ ಇದರಿಂದ ಧಾರ್ಮಿಕ ಪದ್ದತಿಯನ್ನು ನಡೆಸಿಕೊಂಡು ಬಂದಿರುತ್ತಾರೆ.

## ಚನ್ನಾಪುರದ ವೆಂಕಟರಮಣಸ್ವಾಮಿ ದೇವಾಲಯ

ಚನ್ನಾಪುರವು ದೊಡ್ಡಬಳ್ಳಾಪುರ ತಾಲ್ಲೂಕು, ತೂಬಗೆರೆ ಹೋಬಳೀಯ ಮೆಳೇಕೋಟೆ ಗ್ರಾಮ ಪಂಚಾಯ್ತಿ ವ್ಯಾಪ್ತಿಗೆ ಸೇರಿದ ಒಂದು ಸಣ್ಣ ಹಳ್ಳಿ ಇದು ದೊಡ್ಡಬಳ್ಳಾಪುರದಿಂದ ನಂದಿಬೆಟ್ಟಕ್ಕೆ ಹೋಗುವ ಮಾರ್ಗದಲ್ಲಿ ಸುಮಾರು 15 ಕಿ.ಮೀ. ಮತ್ತು ಮೆಳೇಕೋಟೆಯಿಂದ ಎರಡು ಕಿ.ಮೀ. ದೂರದಲ್ಲಿದೆ. ಇಲ್ಲಿನ ವೆಂಕಟರಮಣಸ್ವಾಮಿ ದೇವಾಲಯವು 'ವಿಜಯನಗರ ಶೈಲಿ'ಯಲ್ಲಿದ್ದು, ಇದು ವಿಜಯನಗರದ ಸಾಮಂತ ಅರಸ ದೊಡ್ಡಬಳ್ಳಾಪುರದ ಪಾಳೆಯಗಾರ ಆವತಿ ನಾಡಪ್ರಭು ಇಮ್ಮಡಿ ಹಾವಳಿ ಭೈರೇಗೌಡನ ಕಾಲದಲ್ಲಿ ನಿರ್ಮಾಣವಾಗಿದೆಯೆಂದು ಹೇಳಲಾಗುತ್ತಿದೆ.[83] ಇದಕ್ಕೆ ಪೂರಕವಾಗಿ ಈ ದೇವಾಲಯದಲ್ಲಾಗಲಿ, ಊರಲ್ಲಾಗಲಿ ಯಾವುದೇ ಶಾಸನಗಳು ಅಥವಾ ದಾಖಲೆಗಳು ಈವರೆಗೆ ದೊರೆತಿಲ್ಲ. ಆದರೆ ಜನರ ಬಾಯಲ್ಲಿ ಮಾತ್ರ ಈ ದೇವಾಲಯವನ್ನು ಆವತಿ ದೊರೆ ನಿರ್ಮಿಸಿದನೆಂದು ಉಳಿದುಕೊಂಡಿದೆ. ಬಹುಶಃ ದೊಡ್ಡಬಳ್ಳಾಪುರದ ಪಾಳೆಯಗಾರ ಆವತಿ ಪ್ರಭು ಇಮ್ಮಡಿ ಹಾವಳಿಂದ್ರನೇ ಈ ದೇವಾಲಯವನ್ನು ನಿರ್ಮಿಸಿರಬೇಕು. ಏಕೆಂದರೆ ಈ ಪ್ರದೇಶ ಇವನ ಅಧಿಕಾರ ವ್ಯಾಪ್ತಿಗೊಳಪಟ್ಟಿತ್ತು. ಅಲ್ಲದೆ ದೊಡ್ಡಬಳ್ಳಾಪುರದ ಪಾಳೆಯಗಾರರಲಿ ಇವನನ್ನು ಬಿಟ್ಟರೆ ನಂತರ ಬಂದ ದೊರೆಗಳಾರೂ ಇವನಷ್ಟು ಸಮರ್ಥರಾಗಿರಲಿಲ್ಲ. ಅಲ್ಲದೆ ಇವನಿಗೆ ಹೊಸ ದೇವಾಲಯಗಳನ್ನು ನಿರ್ಮಾಣ ಮಾಡುವುದರಲ್ಲಿ, ಹಳೆಯ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡುವುದರಲ್ಲಿ. ಅವಕ್ಕೆ ಅರ್ಚನ ವಿಧಾನಗಳನ್ನು ಏರ್ಪಡಿಸುವುದರಲ್ಲಿ. ಮಾನ್ಯ ಬಿಡುವುದರಲ್ಲಿ ಹೆಚ್ಚಿನ ಆಸಕ್ತಿಯಿತ್ತೆಂದು ತಿಳಿಯುತ್ತದೆ. ಎಲ್ಲಕ್ಕೂ ಹೆಚ್ಚಾಗಿ ಇವನ ಆಸ್ಥಾನಕವಿ ಗೋಪಕವಿಯ 'ನಂದಿಮಹಾತ್ಮ್ಯಂ' ಎಂಬ ವರ್ಣನಾ ಪ್ರಧಾನ ಕಾವ್ಯದಲ್ಲಿ ನಂದಿ ಬೆಟ್ಟದ ಬುಡದಲ್ಲೇ ಇರುವ ಚನ್ನಾಪುರದ ಈ ದೇವಾಲಯದ ಬಗ್ಗೆ ಪ್ರಸ್ತಾಪವಿದೆಯಂತೆ. ಅದಕ್ಕೂ ಮುಖ್ಯವಾಗಿ ಕಣ್ಣೆದುರಿಗಿರುವ ಈ ದೇವಾಲಯದ ವಾಸ್ತುಶಿಲ್ಪ, ವಿನ್ಯಾಸ, ಮೂರ್ತಿ ಲಕ್ಷ್ಮಣಗಳು ಸಮಕಾಲೀನ ಪಾಳೆಯಗಾರರ (ಉದಾ: ಯಲಹಂಕ ನಾಡಪ್ರಭುಗಳು) ಕಾಲದ ಶೈಲಿಯಲ್ಲಿಯೇ ಇವೆ. ಇದೇ ಕಾಲಕ್ಕೆ ಸೇರಿದ ಕೆಲೊಂದು ವೀರಗಲ್ಲುಗಳು ಮತ್ತು ವೀರಮಾಸ್ತಿಕಲ್ಲುಗಳು ನನ್ನ ಕ್ಷೇತ್ರಕಾರ್ಯದ ಸಮಯದಲ್ಲಿ ಈ ಗ್ರಾಮದಲ್ಲೇ ಪತ್ತೆಯಾಗಿದೆ.

ಆದರೆ ದುರಾದೃಷ್ಟವಶಾತ್ ಚನ್ನಾಪುರದಲ್ಲಿ ಈಗಿರುವ ವೆಂಕಟರಮಣಸ್ವಾಮಿ ದೇವಾಲಯ ಪೂರ್ಣ ಪ್ರಮಾಣದ ಮೂಲರೂಪದಲ್ಲಿ ಉಳಿದಿಲ್ಲ. ವಿಶಾಲವಾದ ನವರಂಗಮಂಟಪ ಮಾತ್ರವೇ ಮೂಲರೂಪದಲ್ಲಿದ್ದು, ಗರ್ಭಗೃಹ ಸೇರಿದಂತೆ ದೇಗುಲದ

ಇನ್ನಾವ ಭಾಗವು ಮೂಲರೂಪದಲ್ಲಿಲ್ಲ. ಮೊಗಲ್ ಸೇನಾಧಿಪತಿ ಖಾಸಿಂಖಾನನು ಕ್ರಿ.ಶ. 1690–91ರಲ್ಲಿ ದೊಡ್ಡಬಳ್ಳಾಪುರದ ಮೇಲೆ ದಾಳಿಮಾಡಿ, ಆಕ್ರಮಿಸಿಕೊಂಡು ಇಲ್ಲಿನ ಕೋಟೆ ಮತ್ತು ಅದರೊಳಗಿದ್ದ ಆದಿನಾರಾಯಣಸ್ವಾಮಿ ದೇವಾಲಯವನ್ನು ನಾಶಮಾಡಿದ ಸಂದರ್ಭದಲ್ಲೇ ಈ ದೇವಾಲಯ ಸಹ ನಾಶವಾಗಿರಬೇಕೆಂದು ತರ್ಕಿಸಲಾಗಿದೆ. ಏಕೆಂದರೆ ಇದರ ಪ್ರಖ್ಯಾತಿ ಅಷ್ಟರಮಟ್ಟಿಗಿತ್ತು. ಇನ್ನೊಂದು ಅಭಿಪ್ರಾಯದಂತೆ ಈ ಪ್ರಾಂತ್ಯವನ್ನಾಳುತ್ತಿದ್ದ ಮರಾಠನಾಯಕ ಷಹಜಿಯ ಮಗ ಸಾಂಭಾಜಿಯ ಕಾಲದಲ್ಲಿ ಮೊಗಲ್ ದಂಡನಾಯಕ ದಿಲಾವರ್‌ಖಾನನು ನಂದಿದುರ್ಗದ ಕೋಟೆಗೆ ಮುತ್ತಿಗೆ ಹಾಕುವಾಗ ಹಾದಿಯಲ್ಲಿ ಅವರ ಬುಡದಲ್ಲೇ ಇದ್ದ ಈ ದೇವಾಲಯವನ್ನು ನಾಶಮಾಡಿರುವ ಸಾಧ್ಯತೆಯಿದೆ. ಮೊಗಲ್ ಸೇನೆಗಳು ದಂಡಯಾತ್ರೆಯ ಸಮಯದಲ್ಲಿ ದಾರಿಮಧ್ಯೆ ಸಿಕ್ಕ ಊರು. ಹಿಂದೂ ದೇವಾಲಯಗಳನ್ನು ಲೂಟಿಮಾಡುತ್ತಿದ್ದ ಇಲ್ಲವೇ ಕೊಳ್ಳೆಹೊಡೆಯುತ್ತಿದ್ದ ಅಂಶ ಚರಿತ್ರೆಯಲ್ಲೇ ಸ್ಪಷ್ಟವಾಗುತ್ತದೆ. ನಾಶವಾಗಿದ್ದ ಈ ದೇವಾಲಯವು ವಾಸ್ತುಭಾಗಗಳನ್ನು ಆಯ್ದು ಇಂದು ದೇವಾಲಯವನ್ನು ಪುನರ್‌ನಿರ್ಮಾಣ ಮಾಡಿದ್ದರೂ ಅದು ಪೂರ್ಣಗೊಂಡಿಲ್ಲ.

## ಕಾಡನೂರಿನ ಚನ್ನಕೇಶವ ದೇವಾಲಯ

ದೊಡ್ಡಬಳ್ಳಾಪುರ ತಾಲ್ಲೂಕು, ಮಧುರೆ ಹೋಬಳಿಗೆ ಸೇರಿದ ಕಾಡನೂರು ಗ್ರಾಮ ದೊಡ್ಡಬಳ್ಳಾಪುರದಿಂದ 22 ಕಿ.ಮೀ. ದೂರದಲ್ಲಿದೆ. ಬೆಂಗಳೂರಿನಿಂದ ಇಲ್ಲಿಗೆ 60 ಕಿ.ಮೀ. ದೂರವಾಗುತ್ತದೆ. ಈ ಕಾಡನೂರು ಗ್ರಾಮ ಕ್ರಿ.ಶ 15 ಮತ್ತು 16ನೇ ಶತಮಾನದಲ್ಲಿ ಅಂದರೆ ವಿಜಯನಗರ ಕಾಲದಲ್ಲಿ ಅವರ ಸಾಮಂತರಾಗಿದ್ದ 'ಹುಲುಕುಡಿ ನಾಡಪ್ರಭು'ಗಳ ಆಳ್ವಿಕೆಗೆ ಒಳಪಟ್ಟಿದ್ದ 'ಹುಲುಕುಡಿನಾಡು'ಗೆ ಸೇರಿತ್ತು. ಇವರ ಕಾಲಾವಧಿಯಲ್ಲಿ ನಿರ್ಮಾಣಗೊಂಡ ಇಲ್ಲಿನ ಚನ್ನಕೇಶವ ದೇವಾಲಯ ವಿಜಯನಗರ ಶೈಲಿಯಲ್ಲಿದ್ದು, ಶಾಸನೋಕ್ತವಾಗಿದೆ. ಈ ದೇವಾಲಯದ ಆವರಣದಲ್ಲೇ ಇರುವ ಕ್ರಿ.ಶ 1531ರ ಕಾಲದ ಅಂದರೆ ವಿಜಯನಗರದ ಅರಸ ಅಚ್ಯುತರಾಯನ ಕಾಲದ ಶಾಸನದಲ್ಲಿ ಆಗ ಹುಲುಕುಡಿ ನಾಡಪ್ರಭುವಾಗಿದ್ದ ಗಂಡರಗೊಳ್ಳಿ ದಳವಾಯಿ ನಾಗಪ್ಪನಾಯಕನು ಈ ದೇವಾಲಯವನ್ನು ನಿರ್ಮಾಣಮಾಡಿ, ಚನ್ನಕೇಶವ ದೇವರ ಅಮೃತಪಡಿನೈವೇದ್ಯ, ಅಂಗರಂಗವೈಭವ ಮತ್ತು ರಥೋತ್ಸವಕ್ಕೆ ಧಾರಾಪೂರ್ವಕವಾಗಿ ಇದೇ ಕಾಡನೂರು ಗ್ರಾಮವನ್ನು ದತ್ತಿಬಿಟ್ಟಿರುವುದು ಶಾಸನೋಕ್ತವಾಗಿದೆ.[84] ಆದರೆ ಇಷ್ಟು ಪುರಾತನ, ಐತಿಹಾಸಿಕ ಮಹತ್ವವುಳ್ಳ ಈ ದೇವಾಲಯವನ್ನು ಇಂದು ಜೀರ್ಣೋದ್ಧಾರದ ಹೆಸರಿನಲ್ಲಿ ಸುಣ್ಣಬಣ್ಣ ಮಾಡಿ, ಚಿತ್ತಾಕರ್ಷಕವಾದ ಇಲ್ಲಿನ ಶಿಲ್ಪಕಲೆಯನ್ನೆಲ್ಲಾ ಹಾಳುಮಾಡಿದ್ದಾರೆ. ಅಲ್ಲದೆ

ದೇಗುಲದ ಹೊರಭಿತ್ತಿಯನ್ನು ಸಿಮೆಂಟ್‌ನಿಂದ ಪ್ಲಾಸ್ಟರಿಂಗ್ ಮಾಡಿಸಿರುವರು. ಹೀಗಾಗಿ ಇಂದು ಈ ದೇವಾಲಯದ ಹೊರಭಾಗ ಮೂಲರೂಪದಲ್ಲಿ ಇಲ್ಲ. ಒಳಭಾಗದ ಗರ್ಭಗೃಹ, ಅಂತರಾಳ, ನವರಂಗ, ಮತ್ತು ಮುಖಮಂಟಪದಲ್ಲಿನ ಕಂಬಗಳು ಮಾತ್ರ ಅಲ್ಪಸ್ವಲ್ಪ ತಮ್ಮ ಮೂಲ ಸ್ವರೂಪವನ್ನು ಉಳಿಸಿಕೊಂಡಿವೆ. ಇವುಗಳನ್ನೇ ಎಚ್ಚರಿಕೆಯಿಂದ ಅಧ್ಯಯನ ಮಾಡಿದರೆ ಆ ಕಾಲದ ಸಾಮಾಜಿಕ ಮತ್ತು ಧಾರ್ಮಿಕ ಜನಜೀವನದ ಅನೇಕ ವಿಚಾರಗಳು ತಿಳಿಯುತ್ತವೆ.

## ವೆಂಕಟರಮಣಸ್ವಾಮಿ ದೇವಾಲಯ

ಹೈದರಾಲಿ ಕಾಲಕ್ಕೆ ದೊಡ್ಡಬಳ್ಳಾಪುರದ ಸಾಂಸ್ಕೃತಿಕ ಕ್ಷೇತ್ರದಲ್ಲಾದ ಒಂದು ಪ್ರಮುಖ ಬೆಳವಣಿಗೆಯೆಂದರೆ ಶ್ರೀವೆಂಕಟರಮಣಸ್ವಾಮಿ ದೇವಾಲಯದ ನಿರ್ಮಾಣ. ಒಬ್ಬ ಮುಸಲ್ಮಾನ್ ದೊರೆಯ ಆಳ್ವಿಕೆಯಲ್ಲಿ ಹಿಂದೂ ದೇವಾಲಯ ನಿರ್ಮಾಣವಾಗಿದ್ದು, ಹೈದರಾಲಿಯ ಸರ್ವಧರ್ಮ ಸಹಿಷ್ಣುತೆಯ ನೀತಿಗೆ ಹಿಡಿದ ರತ್ನಗನ್ನಡಿಯೇ ಸರಿ. ಹೈದರಾಲಿ ಆಳ್ವಿಕೆಯಲ್ಲಿ ದೊಡ್ಡಬಳ್ಳಾಪುರದ ಮಾಮ್ಲೇದಾರರಾಗಿದ್ದ ಬ್ರಾಹ್ಮಣ ಮನೆತನಕ್ಕೆ ಸೇರಿದ್ದ ಅರುಣಾಚಲಪಂತರು ಈ ದೇವಾಲಯ ನಿರ್ಮಾಣದ ಮೂಲ ಕರ್ತೃ. ಒಂದು ಹೇಳಿಕೆಯ ಪ್ರಕಾರ ಅರುಣಾಚಲಪಂತರು ವೆಂಕಟರಮಣಸ್ವಾಮಿ ದೇವಾಲಯವನ್ನು ಹೈದರಾಲಿಯ ಗಮನಕ್ಕೆ ತಾರದೆ ನಿರ್ಮಿಸಿದರು.[85] ಏಕೆಂದರೆ ಸದಾ ಯುದ್ಧಗಳಲ್ಲೇ ಮುಳುಗಿರುತ್ತಿದ್ದ, ಒಂದೆಡೆ ಮರಾಠರು ಮತ್ತೊಂದೆಡೆ ಬ್ರಿಟೀಷರು ಹೈದರಾಲಿಯ ಸಾಮ್ರಾಜ್ಯ ಕಬಳಿಸಲು ಹೊಂಚುಹಾಕುತ್ತಿದ್ದ ಸಮಯದಲ್ಲಿ ಹಿಂದೂ ದೇವಾಲಯ ನಿರ್ಮಾಣಕ್ಕೆ ದೊರೆಯ ಒಪ್ಪಿಗೆಯನ್ನಾಗಲಿ, ಸರ್ಕಾರದಿಂದ ಹಣಕಾಸಿನ ನೆರವನ್ನಾಗಲಿ ಕೇಳುವುದು ಅಷ್ಟು ಸುಲಭದ ಮತಾಗಿರಲಿಲ್ಲ.

ಹಿಂದೂ ವಿರೋಧಿಗಳು ಯಾರಾದರೂ ಈ ದೇಗುಲ ನಿರ್ಮಾಣದ ವಿಚಾರವನ್ನು ಹೈದರಾಲಿಯ ಗಮನಕ್ಕೆ ತರಬಹುದೆಂಬ ಭೀತಿಯಿಂದ ಇದರ ಪ್ರಕಾರವನ್ನು ಮುಸ್ಲಿಂ ಶೈಲಿಯಲ್ಲಿ ನಿರ್ಮಿಸಲಾಗಿದೆ. ಹೀಗಾಗಿ ವಿಶಾಲವಾಗಿರುವ ಈ ದೇವಾಲಯದ ಒಳ ಮತ್ತು ಹೊರ ಪ್ರಕಾರದ ಪಡಸಾಲೆಯ ಮೇಲಿನ ಗಾರೆಗಚ್ಚಿನ ವಿನ್ಯಾಸವೆಲ್ಲಾ ಮುಸ್ಲಿಂ ಶೈಲಿಯಲ್ಲಿಯೇ ಇದೆ. ಈ ದೇವಾಲಯವನ್ನು ಹೊರಗಿನಿಂದ ನೊಡಿದರೆ ಮಸೀದಿಯಂತೆಯೇ ಕಾಣುತ್ತದೆ. ಇದನ್ನು ಪೂರ್ವಯೋಜನೆಯಂತೆ ನಿರ್ಮಿಸಲಾಗಿದೆ.

## ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ಐತಿಹಾಸಿಕ ಕರಗ ಮಹೋತ್ಸವದ ಹಿನ್ನೆಲೆ

ದೊಡ್ಡಬಳ್ಳಾಪುರದ ಪಾಳೆಯಗಾರರು ನಗರ ನಿರ್ಮಾಣದ ಜೊತೆಗೆ ಸಾಂಸ್ಕೃತಿಕ ಲೋಕಕ್ಕೂ ತಮ್ಮದೇ ಆದ ಕೊಡುಗೆ ನೀಡಿದ್ದಾರೆ. ತಮ್ಮ ಪರಿಮಿತ ವಿಸ್ತೀರ್ಣದ ನಾಡಿನಲ್ಲಿ ತಮಗೆ ಲಭ್ಯವಿದ್ದ ಸಂಪನ್ಮೂಲಗಳಿಂದ ನಗರ ನಿರ್ಮಾಣವಲ್ಲದೆ ಕೋಟೆ, ಪೇಟೆ, ದೇವಾಲಯಗಳನ್ನು ನಿರ್ಮಿಸಿದ ಸಂಗತಿ ಈಗಾಗಲೇ ಶಾಸನಾಧಾರಗಳಿಂದ ತಿಳಿದಿದೆ. ಅಲ್ಲದೆ ದೇವಾಲಯದ ನಿತ್ಯಪೂಜಾ ಕಾರ್ಯಗಳಿಗೆಂದು ಬ್ರಾಹ್ಮಣರಿಗೆ, ಮಹಾಜನರಿಗೆ ಗ್ರಾಮ–ಗದ್ದೆಗಳನ್ನು ದಾನಮಾಡಿರುವ ಬಗ್ಗೆ, ತಮ್ಮ ಆಸ್ಥಾನದಲ್ಲಿ ಕವಿಕಲಾವಿದರಿಗೆ ಆಶ್ರಯ ನೀಡಿದ್ದ ಬಗ್ಗೆ ಶಾಸನಗಳಲ್ಲಿ, ಸಮಕಾಲೀನ ಸಾಹಿತ್ಯದಲ್ಲಿ ಉಲ್ಲೇಖವಿದೆ. ಅಂತೆಯೇ 'ಕರಗ ಮಹೋತ್ಸವ'ದ ಆಚರಣೆಯೂ ಪಾಳೆಯುಗಾರರ ಕೊಡುಗೆಯೇ ಆಗಿದೆ.

ಈ ಕರಗ ಮಹೋತ್ಸವವು ಆವತಿ ಕುಲದ ನಾಡಪ್ರಭುಗಳು ಆಳ್ವಿಕೆ ನಡೆಸಿದ ಬೆಂಗಳೂರು, ಕೋಲಾರ, ಚಿಕ್ಕಬಳ್ಳಾಪುರ ಮತ್ತು ತುಮಕೂರು ಜಿಲ್ಲೆಯ ಎಲ್ಲಾ ತಾಲ್ಲೂಕು ಕೇಂದ್ರಗಳಲ್ಲಿ ಜರುಗುತ್ತದೆ. ಈ ಕರಗದ ಶಕ್ತ್ಯುತ್ಸವವನ್ನು ಆರಾಧಿಸುವವರು ತಿಗಳರು. ಈ ಹಿಂದೆಯೇ ತಿಳಿಸಿದಂತೆ ತೋಟಗಾರಿಕೆಯಲ್ಲಿ ನಿಪುಣರೆನಿಸಿದ್ದ ತಿಗಳರು ಒಂದನೇ ಕೆಂಪೇಗೌಡನ (ಕ್ರಿ.ಶ.1510–1578) ಕಾಲಕ್ಕೆ ಬೆಂಗಳೂರಿಗೆ ಬಂದಂತೆ, ದೊಡ್ಡಬಳ್ಳಾಪುರಕ್ಕೆ ಮಲ್ಲಭೈರೇಗೌಡನ ಕಲಕ್ಕೆ ಬಂದು ನೆಲೆಸಿದ್ದರು. ಅವರಿಗಾಗಿಯೇ ಪ್ರತ್ಯೇಕವಾದ ತಿಗಳರಪೇಟೆ ನಿರ್ಮಾಣವಾಗಿತ್ತು. ಮೂಲತಃ ತಮಿಳು ಮಾತನಾಡುವ ತಿಗಳರು ಕೋಲಾರದ ಪೂರ್ವಪಶ್ಚಿಮ ಪ್ರದೇಸಗಳಿಂದ ವಲಸೆ ಬಂದು ಪಾಳೆಯಗಾರರ ಆಶ್ರಿತರಾಗಿ ಬೆಂಗಳೂರು, ದೊಡ್ಡಬಳ್ಳಾಪುರ, ಯಲಹಂಕ, ದೇವನಹಳ್ಳಿ, ಹೊಸಕೋಟೆ, ಆನೇಕಲ್ಲು, ಕೋಲಾರ, ಮುಳಬಾಗಿಲು, ಮಾಲೂರು, ಬೇತಮಂಗಲ, ವೇಮಗಲ್, ಚಿಕ್ಕಬಳ್ಳಾಪುರ, ಶಿಡ್ಲಘಟ್ಟ, ಮಾಗಡಿ... ಹೀಹೆ ಎಲ್ಲೆಲ್ಲಿ ನಾಡಪ್ರಭುಗಳ ಆಳ್ವಿಕೆಯಿತ್ತೋ ಅಲ್ಲೆಲ್ಲಾ ನೆಲೆಕಂಡುಕೊಂಡರು. ಹೀಗಾಗಿ ಕರಗದ ಆರಾಧನೆ ಆವತಿ ದೊರೆಗಳು ಎಲ್ಲೆಲ್ಲಿ ಆಳ್ವಿಕೆ ನಡೆಸಿದರೋ, ನೆಲೆಸಿದ್ದರೋ ಆ ಪ್ರಾಂತ್ಯಗಳಲ್ಲಿ ಮಾತ್ರ ಇದೆ.[86]

ಧರ್ಮರಾಯನ ವಂಶಸ್ಥರೆಂದು, ದ್ರೌಪದಮ್ಮನ ಮಕ್ಕಳೆಂದು ಕರೆದುಕೊಳ್ಳುವ ವಹ್ನಿಕುಲಕ್ಕೆ ಸೇರಿದ 'ತಿಗಳರು' ದೊಡ್ಡಬಳ್ಳಾಪುರದಲ್ಲಿ ಮಲ್ಲಭೈರೇಗೌಡನೇ ಅವರ ಕುಲದೇವತೆಯ ಸ್ಮರಣಾರ್ಥ ದೇವಾಲಯವೊಂದನ್ನು ನಿರ್ಮಾಣಮಾಡಿ, ಕರಗ ಮಹೋತ್ಸವಕ್ಕೆ ಚಾಲನೆ ನೀಡಿದನೆಂದು ಹೇಳುವರು. ಆದರೆ ಇದಕ್ಕೆ ಯಾವುದೆ ಐತಿಹಾಸಿಕ, ಅಧಿಕೃತ ಅಧಾರವಿಲ್ಲ. ಈಗ ಕರಗ ನಡೆಯುವ ಮಾರಿಯಮ್ಮ ದೇವಸ್ಥಾನವು ಅಷ್ಟು ಹಳೆಯದಲ್ಲ. ಸುಮಾರು ನೂರೈವತ್ತು ವರ್ಷಗಳಷ್ಟು ಹಿಂದಿನದಿರಬಹುದು. ಬಹುಶಃ ಇದೇ ಕುಲದ ಕೆಲವು ಹಿರಿಯರು ಹೇಳುವಂತೆ

ಇದಕ್ಕೂ ಪುರಾತನವಾದ ದೇವಾಲಯ ಇಲ್ಲಿತ್ತೆಂದು, ಅದು ಹಳೆಯದಾಗಿ ಜೀರ್ಣವಾದ ನಂತರ ಈಗಿನ ಕರಗದ ಗುಡಿಯನ್ನು ಕಟ್ಟಿರಬೇಕೆಂದು ಕಾಣುತ್ತದೆ.

ಕರಗ ಮಹೋತ್ಸವ ಆಚರಣೆ ಪ್ರತಿಯೊಂದು ಪ್ರಾಂತ್ಯದಲ್ಲೂ ತನ್ನದೇ ಆದ ವೈಶಿಷ್ಟ್ಯ, ಪರಂಪರೆ, ಸಂಪ್ರದಾಯ, ಪದ್ಧತಿಗಳಿಂದ ಕೂಡಿದ್ದರು ಕಾರಣ ಮಾತ್ರ ಐತಿಹ್ಯ–ಪೌರಾಣಿಕ ಕತೆಗಳೊಂದಿಗೆ ಹೆಣೆದುಕೊಂಡಿದೆ. ಇದಕ್ಕೆ ದೊಡ್ಡಬಳ್ಳಾಪುರದ ಕರಗವೂ ಹೊರತಾಗಿಲ್ಲ. ಇದನ್ನು ಆಚರಿಸುವ ವಹ್ನಿಕುಲ ಕ್ಷತ್ರಿಯ (ತಿಗಳ) ಜನಾಂಗದವರು ವಹ್ನಿಜೆ ದ್ರೌಪದಿಯ ಭಕ್ತವರ್ಗದವರು. ಪಾಂಡವರು ದ್ರೌಪದಿ ಸಮೇತ ಸ್ವರ್ಗಾರೋಹಣ ಮಾಡುತ್ತಿದ್ದಾಗ, ಹಿಂದೆ ಉಳಿದ ದ್ರೌಪತಿ ದಿಕ್ಕುಕಾಣದೆ ಕಂಗಾಲಾಗಿ ದೇವತೆಗಳನ್ನು ಪ್ರಾರ್ಥಿಸಿದಳು. ಆಕೆಯ ಸುತ್ತಲೂ ವೀರಕುಮಾರರು ಭೂಮಿಯಿಂದ ಉದ್ಭವಿಸಿ ಕತ್ತಿ, ಡಮರು, ತ್ರಿಶೂಲ, ಗಂಟೆ ಮುಂತಾದವನ್ನು ಹಿಡಿದು ನೃತ್ಯದೊಂದಿಗೆ ಆಕೆಯ ಭಜನೆಯಲ್ಲಿ ಸೇರಿಕೊಂಡರು. ದ್ರೌಪದಿ ವೀರಕುಮಾರರಿಗೆ ಕರಗ ಉತ್ಸವವನ್ನು ನಾಡಿನಲ್ಲಿ ಪ್ರಚಾರಗೊಳಿಸುವಂತೆ ಅನುಗ್ರಹಿಸಿದಳೆಂದು ಪ್ರತೀತಿಯಿದೆ. ಇಂತಹ ವೀರಕುಮಾರರಿಂದ ಪಾಂಡವ ದೇವಾಲಯಗಳಾದವು.

ಮತ್ತೊಂದು ಐತಿಹ್ಯದ ಪ್ರಕಾರ ದ್ರೌಪದಿ ಆದಿಶಕ್ತಿ ಸ್ವರೂಪಿಣಿ. ಪಾಂಡವರ ರಾಜ್ಯಭಾರ ಮುಗಿದು ಅವರು ಸ್ವರ್ಗಾರೋಹಣ ಮಾಡುತ್ತದ್ದ ಸಂದರ್ಭದಲ್ಲಿ ಮಾರ್ಗಮಧ್ಯದಲ್ಲಿ ದ್ರೌಪದಿ ಮೂರ್ಛಿತಳಾದಳು. ಈಕೆ ಸತ್ತುಹೋದಳೆಂದು ಭಾವಿಸಿ ಪಾಂಡವರು ಮುಂದೆ ಹೊರಟುಹೋದರು. ಸ್ವಲ್ಪ ಸಮಯದ ನಂತರ ದ್ರೌಪದಿ ಎಚ್ಚರಗೊಮಡ ಮೇಲೆ ತನ್ನ ಪತಿಗಳು ಎಂದರೆ ಪಾಂಡವರು ಇಲ್ಲದಿರುವುದನ್ನು ಕಂಡು ರೋಧಿಸುತ್ತಿರುವಾಗ ತಿಮಿರಾಸುರನೆಂಬ ರಾಕ್ಷಸ ಆಕೆಯ ಶೀಲಹರಣಕ್ಕೆ ಪ್ರಯತ್ನಿಸುತ್ತಾನೆ. ಆಗ ದ್ರೌಪದಿ ಆತನನ್ನು ನಿಗ್ರಹಿಸುವ ಸಲುವಾಗಿ ವಿರಾಟರೂಪತಾಳಿ ತಲೆಯ ಮೇಲೆ ಕುಂಭವನ್ನು ಧರಿಸಿದಳು. ಇದೇ ಇಂದು ಆರಾಧನೆಗೊಳ್ಳುತ್ತಿರುವ ಕರಗ ಎಂಬ ಹೇಳಿಕೆಯೂ ಇದೆ. ದ್ರೌಪದಿ ಮರಳ ಕಲಶವನ್ನು ಹಿಡಿದು ಸ್ವಯಂವರ ಮಂಟಪಕ್ಕೆ ಹೋಗಿ ಮತ್ಸ್ಯಯಂತ್ರವನ್ನು ಭೇದಿಸಿದ ಅರ್ಜುನನ್ನೂ, ಉಳಿದ ನಾಲ್ವರು ಪಾಂಡವ ಸಹೋದರರನ್ನು ವಿವಾಹವಾದ ಸಂದರ್ಭದಲ್ಲಿ ಸಂತೋಷಭರಿತಗೊಂಡು ಕಲಶವನ್ನು ಶಿರದಲ್ಲಿ ಧರಿಸಿದಳು. ಇದೇ ಕರತ, ಕರಗ ಎಂದರೆ ನೀರಿನ ಕಲಶ ಎಂಬುದು ಮುಖ್ಯಾರ್ಥ.

ಇನ್ನೊಂದು ಅಭಿಪ್ರಾಯದಂತೆ ಪಾಂಡವರು ದ್ರೌಪದಿಯ ಪಾತಿವ್ರತ್ಯ ಪರೀಕ್ಷೆಗಾಗಿ ಪೋತಲು ಎಂಬ ರಾಜನಿಂದ ಕರಗವನ್ನು ತಂದು ಅವಳಿಗೆ ಕೊಟ್ಟರು. ಆಕೆ ಅರಿಶಿನ ಬಟ್ಟೆಯನ್ನು ಉಟ್ಟು ಕರಗವನ್ನು ತಲೆಯ ಮೇಲೆ ಹೊತ್ತು ಕೈಯಲ್ಲಿ ವೀರಚಾಟಿಯನ್ನು ಹಿಡಿದು ಊರೆಲ್ಲಾ ಸುತ್ತಾಡಿ ಕೊನೆಗೆ ಅಗ್ನಿಕುಂಡವನ್ನು ಪ್ರವೇಶಿಸಿ ಯಾವುದೇ ಅಪಾಯವಿಲ್ಲದೆ ಅಲ್ಲಿಂದ

ಹೊರಬಂದಳು. ಇದರ ಪ್ರತೀಕವಾಗಿ ಕರಗದ ಉತ್ಸವ ನಡೆಯುತ್ತದೆ. ಒಟ್ಟಾರೆ ಕರಗದ ಮೂಲ ಮತ್ತು ಕಾರಣ ಸ್ಪಷ್ಟವಿಲ್ಲದಿದ್ದರೂ ಇದೊಂದು ಶಕ್ತಿದೇವತೆಯನ್ನು ಆರಾಧಿಸುವ ಕ್ರಮವೆಂದೇ ಹೇಳಬಹುದು. ಆದಿಶಕ್ತಿ ಸ್ವರೂಪಿಣಿಯಾದ ದ್ರೌಪದಿಯನ್ನು ಕರಗದಲ್ಲಿ ಅವಾಹನೆ ಮಾಡಿ ಮೆರೆಸುವುದು ಇಲ್ಲಿನ ವೈಶಿಷ್ಟ್ಯ. ಅತ್ಯಂತ ವಿಜೃಂಭಣೆಯಿಂದ ನಡೆಯುವ ದೊಡ್ಡಬಳ್ಳಾಪುರ ಕರಗವು ಬೆಂಗಳೂರಿನ ಕರಗ ಆದ ತಿಮಗಳಿಗೆ ಸರಿಯಾಗಿ ನಡೆಯುತ್ತದೆ. ಮೊದಲಿಗೆ ಧರ್ಮರಾಯನ ಗುಡಿಯಲ್ಲಿ ಚೈತ್ರಶುದ್ಧ ಸಪ್ತಮಿಯ ರಾತ್ರಿ ಧ್ವಜಾರೋಹಣ ನಡೆಯುತ್ತದೆ. ನಂತರ ದ್ವಾದಶಿಯ ರಾತ್ರಿ ದೀಪಾರತಿ, ತ್ರಯೋದಶಿ ರಾತ್ರಿ ಹಸಿಕರಗದ ದೇವತಾರಾಧನೆ, ಹುಣ್ಣಿಮೆಯ ರಾತ್ರಿ ಕರಗ ಮಹೊತ್ಸವ ಮತ್ತು ಧ್ವಜಾವತರಣ ಇವಿಷ್ಟು ಕರಗ ಮಹೋತ್ಸವ ಒಂಭತ್ತು ದಿನಗಳ ಕಾರ್ಯಕ್ರಮಗಳು. ಈ ಸಮಯದಲ್ಲಿ ಉತ್ಸವ ನಡೆಸುವ ತಿಗಳ ಜನಾಂಗದವರೆಲ್ಲರೂ ಮಡಿವಂತಿಕೆಯಲ್ಲಿರುತ್ತಾರೆ. ಕಂಕಣ, ಯಜ್ಞೋಪವೀತ (ಜನಿವಾರ) ಧರಿಸುತ್ತಾರೆ ಹಾಗೂ ಉತ್ಸವದ ಪಾವಿತ್ರ್ಯತೆಯನ್ನು ಕಾಪಾಡಿಕೊಳ್ಳುತ್ತಾರೆ.

## 3.6 ಪ್ರಾನ್ಸಿಸ್ ಬುಕಾನನ್ ಕಂಡ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವಿಶ್ಲೇಷಣೆ

ಪ್ರಾನ್ಸಿಸ್ ಬುಕಾನನ್ (ಕ್ರಿ.ಶ.1762–1829) ಈಸ್ಟ್ ಇಂಡಿಯಾ ಕಂಪನಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಒಬ್ಬ ಸರ್ವೆ ಅಧಿಕಾರಿ. ಈತ ಕ್ರಿ.ಶ. 1762ರ ಫೆಬ್ರವರಿಯಲ್ಲಿ ಎಡಿನ್ ಬರೋದಲ್ಲಿ ಜನಿಸಿದನು. ಅಲ್ಲಿಯೇ ವಿದ್ಯಾಭ್ಯಾಸ ಮಾಡಿದ ಬುಕಾನನ್ 1783ರಲ್ಲಿ ಎಂ.ಡಿ. ಪದವಿ ಪಡೆದು. ಭಾರತದಲ್ಲಿ ಈಸ್ಟ್ ಇಂಡಿಯಾ ಕಂಪನಿಯ ಸೇವಗಾಗಿ ಬಂದನು. ಕಂಪನಿಯ ವಶದಲ್ಲಿದ್ದ ಪ್ರದೇಶಗಳ ವಸ್ತುಸ್ಥಿತಿಯ ಪರಿಶೀಲಕನಾಗಿ ಕೆಲಸ ಮಾಡಿದ. ಕಲ್ಕತ್ತಾದ ಸಸ್ಯಶಾಸ್ತ್ರಿಯ ತೋಟದ ಮೇಲ್ವಿಚಾರಕನಾಗಿ, ಲಾರ್ಡ್‌ವೆಲ್ಲೆಸ್ಲಿಯ ಬಳಿ ಸರ್ಜನ್ ಆಗಿ ಕಾರ್ಯನಿರ್ವಹಿಸಿದ್ದ. ಕ್ರಿ.ಶ. 1800–1801 ರಲ್ಲಿ ಟಿಪ್ಪುವಿನಿಂದ ವಶಪಡಿಸಿಕೊಂಡಿದ್ದ ಮೈಸೂರು ಸಂಸ್ಥಾನದ ಪ್ರದೇಶಗಳೂ ಸೇರಿದಂತೆ ಮದ್ರಾಸ್ ಪ್ರೆಸಿಡೆನ್ಸಿಯ ದಕ್ಷಿಣಭಾಗದಲ್ಲಿ ಸರ್ವೇಕ್ಷಣೆ ನಡೆಸಲು ಅರ್ಥರ್ ವೆಲ್ಲೆಸ್ಲಿಯಿಂದ ನಿಯೋಜಿಸಲ್ಪಟ್ಟನು.[87] ಅವನು ಮೈಸೂರು, ಕೆನರಾ ಮತ್ತು ಮಲಬಾರ್‌ಗಳಲ್ಲಿ ಸಂಚಾರಮಾಡಿ ಈ ಪ್ರದೇಶಗಳ ಸಸ್ಯ, ಪ್ರಾಣಿ, ಮಾನವಸಂಪತ್ತು, ಕೃಷಿ, ವ್ಯಾಪಾರವಹಿವಾಟು, ಉದ್ಯೋಗ, ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಮತ್ತು ಆರ್ಥಿಕ ಪರಿಸ್ಥಿತಿಗಳನ್ನು ಅತ್ಯಂತ ಸೂಕ್ಷ್ಮವಾಗಿ ಗಮನಿಸಿ, ಸಂಗ್ರಹಿಸಿ ವರದಿ ಮಾಡಿರುವನು. ಬಹುಶಃ ಕರ್ನಾಟಕವನ್ನು ಕುರಿತು ಕ್ಷೇತ್ರಕಾರ್ಯಮಾಡಿ, ಅಧಿಕೃತವಾಗಿ ಬರೆಯಲ್ಪಟ್ಟ ಮೊದಲ ಮಾಹಿತಿಗಳು ಇವನವೇ ಎನಿಸುತ್ತಿದೆ. ಕ್ರಿ.ಶ. 1800ರ ಏಪ್ರಿಲ್ 23 ರಂದು ಮದ್ರಾಸಿನಿಂದ

ಹೊರಟು, ಕ್ರಿ.ಶ1800ರ ಮೇ 10 ರಂದು ಬೆಂಗಳುರನ್ನು ತಲುಪಿದನು. ಮುಂದೆ ಶ್ರೀರಂಗಪಟ್ಟಣಕ್ಕೆ ಭೇಟಿನೀಡಿ, ಮತ್ತೆ ಬೆಂಗಳೂರಿಗೆ ಹಿಂತಿರುಗಿದನು. ಜುಲೈ 7ರ ವೇಳೆಗೆ ಕೋಲಾರಕ್ಕೆ ಹೋಗಿ ಶಿಡ್ಲಘಟ್ಟ, ಚಿಕ್ಕಬಳ್ಳಾಪುರ, ನಂದಿ, ಹೆಗ್ಗಡಿಹಳ್ಳಿ ಮಾರ್ಗವಾಗಿ ಮುನ್ನಡೆದು ಜುಲೈ 18ರ ಹೊತ್ತಿಗೆ ದೊಡ್ಡಬಳ್ಳಾಪುರ ತಾಲ್ಲೂಕಿನ ಗಡಿ ಪ್ರವೇಶಿಸಿದನು. ಅವನು ಜುಲೈ 21ಕ್ಕೆ ದೊಡ್ಡಬಳ್ಳಾಪುರ ಬಿಟ್ಟು ಹೊರಡುವ ಅವಧಿಯಲ್ಲಿ ದಾಖಲಸಿದ ಈ ಪ್ರದೇಶದ ಸಮಸ್ತ ಆಗುಹೋಗುಗಳನ್ನು ನನ್ನದೇ ರೀತಿಯಲ್ಲಿ ಸಂಗ್ರಹಿಸಿ, ಸಂಕ್ಷೇಪಿಸಿ, ನಿರೂಪಣೆ ಮಾಡಿದ್ದೇನೆ.

ಪ್ರಾನ್ಸಿಸ್ ಬುಕಾನನ್ ಕ್ರಿ.ಶ1800ರ ಜುಲೈ 17ರಂದು ಚಿಕ್ಕಬಳ್ಳಾಪುರದಿಂದ ಹೊರಟು ನಂದಿಗ್ರಾಮ, ಸುಲ್ತಾನ್‌ಪೇಟೆ ಮತ್ತು ಹೆಗ್ಗಡಿಹಳ್ಳಿಯ ಮೂಲಕ ದೊಡ್ಡಬಳ್ಳಾಪುರ ತಾಲ್ಲೂಕಿನ ಗಡಿ ಪ್ರವೇಶಿಸಿದನು. ಅವನು ಅಂದು ಬೆಳಿಗ್ಗೆ ಮೊದಲಿಗೆ ಬೀಡಿಕೆರೆಗೆ ಬಂದನು. ಅವನೇ ಹೇಳುವಂತೆ ಇದು ಬಹಳ ಚಿಕ್ಕದಾದ ಒಂದು ಕೃಷಿನಿರತ ಗ್ರಾಮ. ನಂದಿದುರ್ಗದ ಒಂದು ಕಡೆಗಿರುವ ಈ ಪ್ರದೇಶದಲ್ಲಿ ರಾಗಿಯ ಬೆಳೆ ಅಧಿಕ ಇದರಿಂದ ದನಕರುಗಳಿಗೆ ಮೇವು ಸಿಗುತ್ತದೆ. ಮಾರನೆಯ ದಿನ ಬೀಡಿಕೆರೆಯಿಂದ ಬುಕಾನನ್ ನೇರವಾಗಿ ದೊಡ್ಡಬಳ್ಳಾಪುರ ಪಟ್ಟಣಕ್ಕೆ ಬರುತ್ತಾನೆ. ಕ್ರಿ.ಶ.1800ರ ಜುಲೈ 18 ರಂದು ಪ್ರಾನ್ಸಿಸ್ ಬುಕಾನನ್ನನು ದೊಡ್ಡಬಳ್ಳಾಪುರ ಪಟ್ಟಣಕ್ಕೆ ಕಾಲಿಟ್ಟಾಗ ಇದನ್ನು ಮುಸಲ್ಮಾನ್ ಭಾಷೆಯಲ್ಲಿ 'ಬುರ್ರಾ(ಬಡಾ)ಬಲಾಪುರ್' ಎಂದು, ತೆಲುಗಿನಲ್ಲಿ 'ಪೆದ್ದಬಲಾಪುರ'. ಕನ್ನಡದಲ್ಲಿ 'ದೊಡ್ಡಬಳ್ಳಾಪುರ್' ಹಾಗೂ ಇಂಗ್ಲೀಷಿನಲ್ಲಿ 'ಗ್ರೇಟ್‌ಬಲಾಪುರ್' ಎಂದು ಕರೆಯಲಾಗುತ್ತಿತ್ತೆಂದು ದಾಖಲಿಸಿದ್ದಾರೆ. ಅಲ್ಲದೆ ನಾನು ಇದುವರೆಗೂ ಬಂದ ಮಾರ್ಗ ಕೃಷಿ ಚಟುವಟಿಕೆಗಳಿಂದ ಕೂಡಿದ್ದರೆ. ಈ ಸ್ಥಳ ಯಾವುದೇ ಕೃಷಿಚಟುವಟಿಕೆಯಿಲ್ಲದೆ ಬಣಗುಡುತ್ತದೆ ಎಂದೂ ದಾಖಲಿಸದ್ದಾನೆ. ಪ್ರಾನ್ಸಿಸ್ ಭುಕಾನನು ರವರು ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ 19ನೇ ಶತಮಾನದಲ್ಲಿ ಬೇಟಿ ನೀಡಿದ್ದು ಇಲ್ಲಿರುವಂತಹ ಒಂದು ವಸ್ತುಸ್ಥಿತಿಯನ್ನು ಸ್ವತಃ ತಾನೇ ಕಂಡಿದ್ದು ಎಲ್ಲಾ ರೀತಿಯ ಐತಿಹಾಸಿಕವನ್ನು ಅವನದೇ ಆದಂತ ವಿಶಿಷ್ಟ ಶೈಲಿಯಲ್ಲಿ ದಾಖಲೆಯ ಮುಖಾಂತರ ತಿಳಿಸಿಕೊಟ್ಟಿರುತ್ತಾರೆ.

* * * * * * * * * * * * * *

## ಕೊನೆ ಟಿಪ್ಪಣಿ

1. ರೈಸ್.ಬಿ.ಎಲ್. 1903 *ಎಪಿಗ್ರಾಫಿಯಾ ಕರ್ನಾಟಿಕ* – ಸಂಪುಟ 11. ಪು.ಸಂ. 05
2. ಅದೇ,
3. ಕಾಮತ್ .ಎಸ್.ಎನ್. 1989 *ಬೆಂಗಳೂರು ಗ್ರಾಮಾಂತರ ಜಿಲ್ಲಾ ಗೆಜೆಟಿಯರ್.* ಪು.ಸಂ. 848
4. ಸಂಶೋಧನಾರ್ಥಿ ಕ್ಷೇತ್ರಕಾರ್ಯ 11/06/2018
5. ಕಾಮತ್.ಎಸ್.ಎನ್. 1989 *ಬೆಂಗಳೂರು ಗ್ರಾಮಾಂತರ ಜಿಲ್ಲಾ ಗೆಜೆಟಿಯರ್* ಪು.ಸಂ. 848
6. ಅದೇ,
7. ಅದೇ, ಪು.ಸಂ. 849
8. ರೈಸ್ .ಬಿ.ಎಲ್ 1903. *ಎಪಿಗ್ರಾಫಿಯಾ ಕರ್ನಾಟಿಕ* – ಸಂಪುಟ 11. ಪು.ಸಂ. 74
9. ಸಂಶೋಧನಾರ್ಥಿ ಕ್ಷೇತ್ರಕಾರ್ಯ 15/06/2018– ಸಂದರ್ಶನ. ಹೆಸರು – ರಾಜ್ ಗೋಪಾಲಯ್ಯ. ವಯಸ್ಸು – 65
10. ಸಂಶೋಧನಾರ್ಥಿ ಕ್ಷೇತ್ರಕಾರ್ಯ 10/07/2018
11. ಗೋಪಾಲ್ ರಾವ್2018 *ಕೆಂಪೆಗೌಡ ಮತ್ತು ಜೀವನ ಸಾಧನೆಗಳು.* ಪು.ಸಂ. 148–149
12. ರೈಸ್ .ಬಿ.ಎಲ್. 1903. *ಎಪಿಗ್ರಾಫಿಯಾ ಕರ್ನಾಟಿಕ* – ಸಂಪುಟ 11. ಪು.ಸಂ 83
13. ಅದೇ,
14. ಅದೇ,
15. ಅದೇ,
16. ಅದೇ, ಪು.ಸಂ. 84
17. ಅದೇ,
18. ಅದೇ,
19. ಅದೇ,
20. ಅದೇ, ಪು.ಸಂ. 85
21. ಅದೇ,
22. ಅದೇ,
23. ಸಂಶೋಧನಾರ್ಥಿ ಕ್ಷೇತ್ರಕಾರ್ಯ 20/07/2018
    ಸಂದರ್ಶನ, ಹೆಸರು – ಶೇಕರಪ್ಪ ಗೌಡ. ವಯಸ್ಸು – 71
    ಸಂದರ್ಶನ, ಹೆಸರು – ಸಿದ್ದಗಂಗಯ್ಯ. ವಯಸ್ಸು – 78
24. ಸಂಶೋಧನಾರ್ಥಿ ಕ್ಷೇತ್ರಕಾರ್ಯ 21/07/2018
25. ಸಂಶೋಧನಾರ್ಥಿ ಕ್ಷೇತ್ರಕಾರ್ಯ 22/07/2018
    ಸಂದರ್ಶನ, ಹೆಸರು – ಮುನಿರಾಜಪ್ಪ. ವಯಸ್ಸು – 57
26. ಸಂಶೋಧನಾರ್ಥಿ ಕ್ಷೇತ್ರಕಾರ್ಯ 25/07/2018
    ಸಂದರ್ಶನ, ಹೆಸರು–ಮಂಜುಳಮ್ಮ, ವಯಸ್ಸು – 41
27. ಕಾಮತ್ .ಎಸ್.ಎನ್. 1989, *ಬೆಂಗಳೂರು ಗ್ರಾಮಾಂತರ ಜಿಲ್ಲಾ ಗೆಜೆಟಿಯರ್,*

ಕರ್ನಾಟಕ ಸರ್ಕಾರ, ಬೆಂಗಳೂರು. ಪು.ಸಂ. 863–864
28. ಮೂರ್ತಿಶ್ವರಯ್ಯ. 2013 *ದೇವನಹಳ್ಳಿ ತಾಲ್ಲೂಕು ಪರಿಚಯ*, ಸ್ವಪ್ನ ಬುಕ್‌ಹೌಸ್, ಬೆಂಗಳೂರು. ಪು.ಸಂ 10–11
29.ಶ್ರೀಧರ್‌ಅಡಿಗ. 2017 *ಕರ್ನಾಟಕ ಪ್ರೇಕ್ಷಣೀಯ ಸ್ಥಳಗಳು*, ಚಂದನ ಪ್ರಕಾಶನ, ಬೆಂಗಳೂರು.ಪು.ಸಂ 21
30.ಸಂಶೋಧನಾರ್ಥಿ ಕ್ಷೇತ್ರಕಾರ್ಯ 09/08/2018
31. ಮೂರ್ತಿಶ್ವರಯ್ಯ. 2013 *ದೇವನಹಳ್ಳಿ ತಾಲ್ಲೂಕು ಪರಿಚಯ*, ಸ್ವಪ್ನ ಬುಕ್‌ಹೌಸ್, ಬೆಂಗಳೂರು. ಪು.ಸಂ. 13
32.ಶ್ರೀಧರ್‌ಅಡಿಗ. 2017 *ಕರ್ನಾಟಕ ಪ್ರೇಕ್ಷಣೀಯ ಸ್ಥಳಗಳು* ಚಂದನ ಪ್ರಕಾಶನ, ಬೆಂಗಳೂರು.ಪು.ಸಂ. 21
33.ಮೂರ್ತಿಶ್ವರಯ್ಯ. 2013 – *ದೇವನಹಳ್ಳಿ ತಾಲ್ಲೂಕು ಪರಿಚಯ* ಸ್ವಪ್ನ ಬುಕ್‌ಹೌಸ್, ಬೆಂಗಳೂರು. ಪು.ಸಂ. 16–17 ಸಂಶೋಧನಾರ್ಥಿ ಕ್ಷೇತ್ರಕಾರ್ಯ 11/08/2018
34. ಅದೇ, ಪು.ಸಂ. 10
35.ಕಾಮತ್ .ಎಸ್.ಎನ್. 1989 *ಬೆಂಗಳೂರು ಗ್ರಾಮಾಂತರ ಜಿಲ್ಲಾ ಗೆಜೆಟಿಯರ್* ಪು.ಸಂ. 865–866
36.ಮೂರ್ತಿಶ್ವರಯ್ಯ. 2013 *ದೇವನಹಳ್ಳಿ ತಾಲ್ಲೂಕು ಪರಿಚಯ*, ಸ್ವಪ್ನ ಬುಕ್‌ಹೌಸ್, ಬೆಂಗಳೂರು.
ಪು.ಸಂ. 29–30
37. ಅದೇ, ಪು.ಸಂ. 28
38. ಅದೇ, ಪು.ಸಂ. 29
39. ಅದೇ,
40.ಅದೇ,
41. ಕಾಮತ್ .ಎಸ್.ಎನ್. 1989 *ಬೆಂಗಳೂರು ಗ್ರಾಮಾಂತರ ಜಿಲ್ಲಾ ಗೆಜೆಟಿಯರ್*, ಕರ್ನಾಟಕ ಸರ್ಕಾರ, ಬೆಂಗಳೂರು. ಪು.ಸಂ 794
42.ಅದೇ, ಪು.ಸಂ. 794
43. ಅದೇ,
44. ಅದೇ, ಪು.ಸಂ. 795
45. ಮೂರ್ತಿಶ್ವರಯ್ಯ 2013 *ದೇವನಹಳ್ಳಿ ತಾಲ್ಲೂಕಿನ ಪರಿಚಯ* ಸಪ್ನ ಬುಕ್ ಹೌಸ್, ಬೆಂಗಳೂರು
ಪು.ಸಂ. 15–16
46. ಕಾಮತ್ ಎಸ್ ಎನ್ 1989 *ಬೆಂಗಳೂರು ಗ್ರಾಮಾಂತರ ಜಿಲ್ಲಾ ಗೆಜಿಟಿಯರ್*, ಕರ್ನಾಟಕ ಸರ್ಕಾರ,
ಪು.ಸಂ. 797
47. ಅದೇ, ಪು.ಸಂ. 794
48. ಅದೇ, ಪು.ಸಂ. 795

49. ಮೂರ್ತಿಶ್ವರಯ್ಯ 2013 *ದೇವನಹಳ್ಳಿ ತಾಲ್ಲೂಕಿನ ಪರಿಚಯ* ಸಪ್ನ ಬುಕ್ ಹೌಸ್, ಬೆಂಗಳೂರು

ಪು.ಸಂ. 16–17

50. ಕಾಮತ್ ಎಸ್ ಎನ್ 1989 *ಬೆಂಗಳೂರು ಗ್ರಾಮಾಂತರ ಜಿಲ್ಲಾ ಗೆಜೆಟಿಯರ್,* ಕರ್ನಾಟಕ ಸರ್ಕಾರ,

ಪು.ಸಂ. 839

51. ಅದೇ,

52. ಅದೇ,

53. ಅದೇ, ಪು.ಸಂ. 805–806

54. ಅದೇ, ಪು.ಸಂ. 806

55. ಅದೇ, ಪು.ಸಂ. 839

56. ಅದೇ,

57. ಅದೇ,

58. ಅದೇ,

59. ಅದೇ,

60. ಅದೇ,

61. ವೆಂಕಟೇಶ್ ಎಸ್ 2016 *ದೊಡ್ಡಬಳ್ಳಾಪುರ ಚಾರಿತ್ರಿಕ ಅಧ್ಯಯನ,* ದೃಶ್ಯ ಪ್ರಕಾಶನ ದೊಡ್ಡಬಳ್ಳಾಪುರ

ಪು.ಸಂ. 42

62. ಕಾಮತ್ ಎಸ್ ಎನ್ 1989 *ಬೆಂಗಳೂರು ಗ್ರಾಮಾಂತರ ಜಿಲ್ಲಾ ಗೆಜೆಟಿಯರ್,* ಕರ್ನಾಟಕ ಸರ್ಕಾರ,

ಪು.ಸಂ. 797

63. ಅದೇ, ಪು.ಸಂ. 818

64. ಅದೇ, ಪು.ಸಂ. 819

65. ಅದೇ, ಪು.ಸಂ. 845

66. ಅದೇ, ಪು.ಸಂ. 857

67. ವೆಂಕಟೇಶ್ ಎಸ್ 2016 *ದೊಡ್ಡಬಳ್ಳಾಪುರ ಚಾರಿತ್ರಿಕ ಅಧ್ಯಯನ,* ದೃಶ್ಯ ಪ್ರಕಾಶನ ದೊಡ್ಡಬಳ್ಳಾಪುರ

ಪು.ಸಂ. 43–45

68. ಅದೇ,

69. ಅದೇ, ಪು.ಸಂ. 757–758

ವೆಂಕಟೇಶ್ ಎಸ್ 2016 *ದೊಡ್ಡಬಳ್ಳಾಪುರ ಚಾರಿತ್ರಿಕ ಅಧ್ಯಯನ,* ದೃಶ್ಯ ಪ್ರಕಾಶನ ದೊಡ್ಡಬಳ್ಳಾಪುರ

ಪು.ಸಂ. 166–167

70. ಅದೇ, ಪು.ಸಂ. 199–201

71. ಅದೇ, ಪು.ಸಂ. 201–202
72. ಅದೇ, ಪು.ಸಂ. 70–71
73. ಅದೇ, ಪು.ಸಂ. 71
74. ಅದೇ, ಪು.ಸಂ. 43–45
ಸಂದರ್ಶನ ಹೆಸರು: ಗೋವಿಂದಪ್ಪ, ವಯಸ್ಸು: 68
75. ಅದೇ, ಪು.ಸಂ. 43–45
76. ಅದೇ, ಪು.ಸಂ. 260–263
77. ಅದೇ, ಪು.ಸಂ. 262–263
78. ಅದೇ, ಪು.ಸಂ. 58–59
79. ಅದೇ, ಪು.ಸಂ. 76–77
80. ಅದೇ, ಪು.ಸಂ. 91–93
81. ಅದೇ, ಪು.ಸಂ. 166–167
82. ಅದೇ, ಪು.ಸಂ. 174
83. ಅದೇ, ಪು.ಸಂ. 176–177
84. ಅದೇ, ಪು.ಸಂ. 212
85. ಅದೇ, ಪು.ಸಂ. 178
86. ಅದೇ, ಪು.ಸಂ. 185–186
87. ಅದೇ, ಪು.ಸಂ. 273–274

# ಅಧ್ಯಾಯ – 4

# ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪ್ರವಾಸೋದ್ಯಮದ ಮೂಲಭೂತ ಸೌಕರ್ಯಗಳು

## 4.1 ಪೀಠಿಕೆ

ಮಾನವನು ಪ್ರತಿನಿತ್ಯ ತನ್ನ ಜೀವನಕ್ಕಾಗಿ ಯಾವುದಾದರೊಂದು ಮೂಲಭೂತ ಸೌಕರ್ಯಗಳಿಗೆ ಮನುಷ್ಯನು ಅವಲಂಬನೆಯಾಗಿರುತ್ತಾನೆ ಮತ್ತು ಆರ್ಥಿಕತೆಯಿಂದ ಒಳಗೊಂಡಿರುವ ಚಟುವಟಿಕೆಯಲ್ಲಿ ತೊಡಗಬೇಕಾಗಿರುವ ಅನಿರ್ವಾಯತೆ ಇದೆ. ಹಣದ ಚಲಾವಣೆಯಿಂದ ಕೂಡಿದ ವ್ಯವಹಾರವನ್ನು ವ್ಯಾಪಾರ ಅಥವಾ ವಾಣಿಜ್ಯ ಎಂದು ಕರೆಯುತ್ತಾರೆ. ಕೊಳ್ಳುವ ಮತ್ತು ಮಾರಾಟ ಮಾಡುವ ಪ್ರಕ್ರಿಯೆಯನ್ನು ವ್ಯವಹಾರ ಅಥವಾ ವ್ಯಾಪಾರ ಎಂದು ಕರೆಸಿಕೊಳ್ಳುತ್ತದೆ. ಈ ನಿಟ್ಟಿನಲ್ಲಿ ಇಂತಹ ವ್ಯಾಪಾರ, ವಾಣಿಜ್ಯ ಚಟುವಟಿಕೆಗಳು, ಕೃಷಿ, ಕೈಗಾರಿಕೆ, ಬಂಡವಾಳ, ಹೂಡಿಕೆ. ಉತ್ಪಾದನಾಂಗಗಳು, ಸಂಪನ್ಮೂಲಗಳು, ಸಾರಿಗೆ–ಸಂಪರ್ಕ, ಶ್ರಮ, ಉದ್ಯೋಗ, ನಗರೀಕರಣ ಮತ್ತು ಇತರ ಎಲ್ಲಾ ಮೂಲಭೂತ ಸೌಕರ್ಯ ಮತ್ತು ಆರ್ಥಿಕ ಚಟುವಟಿಕೆಗಳನ್ನು ಒಳಗೊಂಡಿರುತ್ತವೆ. ಲಭ್ಯವಿರುವ ವಿವಿಧ ಬಗೆಯ ಸಂಪನ್ಮೂಲಗಳನ್ನು ವ್ಯವಸ್ಥಿತವಾಗಿ ಬಳಸಿಕೊಂಡು ಒಂದು ರಾಷ್ಟ್ರದ ಆರ್ಥಿಕ ಪ್ರಗತಿಯನ್ನು ಸಾಧಿಸುವುದೇ ಆರ್ಥಿಕತೆ ಎನ್ನಬಹುದು. ಆರ್ಥಿಕ ಅಂಶಗಳಲ್ಲದೆ ತಲಾದಾಯ, ರಾಷ್ಟ್ರಾದಾಯ, ಬಂಡವಾಳ ಹೂಡಿಕೆ ಮತ್ತು ಸಂಚಯನ, ಶ್ರಮವನ್ನು ಒಳಗೊಂಡಂತೆ ಉತ್ಪಾದನಾಂಗಗಳು ಪ್ರಮುಖವಾಗಿವೆ.

ಪ್ರವಾಸೋದ್ಯಮ ಈ ಹಿಂದೆ ಇದ್ದಂತಹ ಕೆಲವೇ ಕೆಲವು ರೂಪಗಳೊಂದಿಗೆ ಮಾನವನ ಪ್ರಗತಿಯೊಂದಿಗೆ ತನ್ನ ವಿಸ್ತಾರವನ್ನು ಪಡೆದುಕೊಳ್ಳುತ್ತಿದೆ. 1991ರ ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣ ಪರಿಕಲ್ಪನೆಗಳು ಆರ್ಥಿಕ ಕ್ಷೇತ್ರವನ್ನು ವಿಸ್ತಾರಗೊಳಿಸುವ ನಿಟ್ಟಿನಲ್ಲಿ ಮಹತ್ವದ ಹೆಜ್ಜೆಗಳೆನ್ನಬಹುದು. ವಿಶ್ವ ಬ್ಯಾಂಕ್ ಮತ್ತು ವಿಶ್ವ ವ್ಯಾಪಾರ ಸಂಸ್ಥೆಗಳು ಜಾಗತೀಕ ಮಟ್ಟದಲ್ಲಿ ಬಂಡವಾಳ ಸಂಚಯನದೊಂದಿಗೆ ಜಾಗತೀಕ ಕುಟುಂಬವನ್ನು ನಿರ್ಮಾಣ ಮಾಡುವ ದಾರಿಯಲ್ಲಿ ಸಾಗುತ್ತಿವೆ. ಆಧುನಿಕ ಸಾರಿಗೆ ಮತ್ತು ಸಂಪರ್ಕ ಕ್ಷೇತ್ರಗಳಲ್ಲಿ ಉಂಟಾಗಿರುವ ಅನ್ವೇಷಣೆಗಳು, ಜಗತ್ತು ಚಿಕ್ಕದಾಗುವಂತೆ ಕಾಣುತ್ತದೆ ಹಾಗೂ ಹತ್ತಿರವಾಗುತ್ತಿದೆ. ಪ್ರಪಂಚದ ಯಾವುದೇ ಮೂಲೆಯಿಂದ ಮತ್ತೊಂದು ಮೂಲೆಯಲ್ಲಿರುವ ಜನರೊಂದಿಗೆ ಸಂಪರ್ಕ ಕಲ್ಪಿಸುವಂತಹ ಸಾಧ್ಯತೆಗಳನ್ನು ಕಂಡುಕೊಳ್ಳಲಾಗಿದೆ. ಇವೆಲ್ಲವುಗಳು ರಾಷ್ಟ್ರ ರಾಷ್ಟ್ರಗಳಲ್ಲಿ ಆರ್ಥಿಕ ಪ್ರಗತಿಯಿಂದ ಸಾಧ್ಯವಾಗಿದೆ.

ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣ ಪಕ್ರಿಯೆಗಳು, ಪ್ರತಿಯೊಂದನ್ನು ವ್ಯವಹಾರಿಕ ಮತ್ತು ವಾಣಿಜ್ಯ ದೃಷ್ಟಿಕೋನದಿಂದ ನೋಡುವಂತೆ ಮಾಡಿವೆ. ಜಾಗತೀಕರಣದ ಹಿನ್ನೆಲೆಯಲ್ಲಿ ಸರ್ಕಾರದ ನೀತಿಗಳು ಸಡಿಲಗೊಂಡು ಒಂದು ರಾಷ್ಟ್ರದ ಬಂಡವಾಳವು ಮತ್ತೊಂದು ರಾಷ್ಟ್ರದಲ್ಲಿ ಹೂಡಿಕೆ ಮಾಡಲು ಸುಲಭ ಅವಕಾಶಗಳನ್ನು ಕಲ್ಪಿಸಿತು. ಜಾಗತಿಕ ಬಂಡವಾಳ ಹೂಡಿಕೆಯಿಂದಾಗಿ ಸರ್ಕಾರಗಳ ಬದಲಾದ ನೀತಿಗಳು ಮತ್ತು ಔದ್ಯೋಗಿಕ ಕ್ಷೇತ್ರದಲ್ಲಿ ಉಂಟಾದ ಅದ್ಭುತ ಪ್ರಗತಿಯು ಆರ್ಥಿಕ ಪ್ರಗತಿಗೆ ಬಲವಾದ ಅಂಶಗಳನ್ನು ಒಳಗೊಂಡಿದೆ. ಈ ನಿಟ್ಟಿನಲ್ಲಿ ಆರ್ಥಿಕ ಪ್ರವಾಸೋದ್ಯಮ ಪರಿಕಲ್ಪನೆಗೆ ವ್ಯಾಪಾರ ಮತ್ತು ವ್ಯವಹಾರ ದೃಷ್ಟಿಕೋನಗಳು ಪ್ರವಾಸೋದ್ಯಮದ ಭಾಗವಾಗುವ ನಿಟ್ಟಿನಲ್ಲಿ ಮಿಶ್ರಣಗೊಂಡಿದೆ.

2014–2019ರ ಕರ್ನಾಟಕ ರಾಜ್ಯ ಕರಡು ಪ್ರವಾಸೋದ್ಯಮ ನೀತಿಯಲ್ಲಿ ವ್ಯವಹಾರಿಕ ಪ್ರವಾಸೋದ್ಯಮ ಮಹತ್ವವನ್ನು ಕುರಿತು ವಿಶ್ಲೇಷಣೆ ಮಾಡಲಾಗಿದೆ. ಆರ್ಥಿಕ ಕ್ಷೇತ್ರದಲ್ಲಿ ಬಂಡವಾಳ ಹೂಡಿಕೆಯೊಂದಿಗೆ ಉತ್ಪನ್ನಗಳಿಗೆ ಮಾರುಕಟ್ಟೆಯನ್ನು ಹುಡುಕುವವರೆಗಿನ ಎಲ್ಲಾ ಪ್ರಕ್ರಿಯೆಗಳೂ ಸಹ ಪ್ರವಾಸೋದ್ಯಮ ವಿಭಿನ್ನ ಪರಿಕಲ್ಪನೆಗಳಲ್ಲಿ ಒಂದಾಗಿವೆ. 'Over the years, Karnataka has also emerged as a strong contender in the global market for business tourism' ಎಂದು ಅಭಿಪ್ರಾಯ ಪಡೆಯಲಾಗಿದೆ.[1] ಕರ್ನಾಟಕವು ವ್ಯವಹಾರಿಕ ಪ್ರವಾಸೋದ್ಯಮ ಕ್ಷೇತ್ರದಲ್ಲಿ ಜಾಗತಿಕ ಮಟ್ಟದಲ್ಲಿ ಪ್ರತಿ ಸ್ವರ್ಧೆಯನ್ನು ಹೊಂದಿರುವ ರಾಜ್ಯವಾಗಿದೆ.

ಜಾಗತಿಕ ಮಾರುಕಟ್ಟೆಯಲ್ಲಿ ವ್ಯಾಪಾರ ಮತ್ತು ವಾಣಿಜ್ಯ ಪ್ರವಾಸೋದ್ಯಮಕ್ಕೆ ಉತ್ತಮ ಅವಕಾಶಗಳನ್ನು ಮತ್ತು ಸಂಪನ್ಮೂಲಗಳನ್ನು ಒಳಗೊಂಡಿರುವುದರ ಮೂಲಕ ಪ್ರಬಲವಾದ ಪೈಪೋಟಿಯನ್ನು ನಡೆಸುವಂತಹ ರಾಜ್ಯವಾಗಿದೆ ಎಂದು ತಿಳಿಸಿದೆ. 2018–19ನೇ ಸಾಲಿಗೆ ಕರ್ನಾಟಕವು 62 ಬಿಲಿಯನ್ ದೇಶೀಯ ಮತ್ತು 7 ಮಿಲಿಯನ್ ವಿದೇಶಿ ಪ್ರವಾಸಿಗರನ್ನು ಆಕರ್ಷಣೆ ಮಾಡುವ ಗುರಿಯನ್ನು ಹೊಂದಿದೆ.[2] ಈ ನಿಟ್ಟಿನಲ್ಲಿ ಆರ್ಥಿಕ ಪ್ರವಾಸೋದ್ಯಮವು ಪ್ರವಾಸೋದ್ಯಮದಲ್ಲಿ ಮಹತ್ವವನ್ನು ಪಡೆದಿದೆ. ಭಾರತದಲ್ಲಿ ದೇಶೀಯ ಪ್ರವಾಸಿಗರನ್ನು ಆಕರ್ಷಣೆ ಮಾಡುತ್ತಿರುವ ಪ್ರವಾಸಿ ತಾಣಗಳನ್ನು ಒಳಗೊಂಡಿರುವ ರಾಜ್ಯಗಳಲ್ಲಿ ನಾಲ್ಕನೇ ಸ್ಥಾನ ಮತ್ತು ಆರ್ಥಿಕ ಪ್ರವಾಸೋದ್ಯಮ ಕ್ಷೇತ್ರದಲ್ಲಿ ಬಂಡವಾಳ ಹೂಡಿಕೆ ಮಾಡಲು ಜಾಗತಿಕ ಮಟ್ಟದಲ್ಲಿ ಆಕರ್ಷಣೆ ಮಾಡುತ್ತಿರುವ ಮೂರನೇ ಪ್ರಮುಖವಾದ ರಾಜ್ಯವಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯು ತನ್ನ ಪ್ರಾಚೀನ ಉದ್ಯಮಗಳೊಂದಿಗೆ ಹಲವು ನೂತನ ಕೈಗಾರಿಕೆಗಳನ್ನು ಹೊಂದಿದ್ದು, ಆರ್ಥಿಕ ಪ್ರವಾಸೋದ್ಯಮದ ಕೇಂದ್ರವಾಗಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲದೆ ಅಂತರ ರಾಷ್ಟ್ರೀಯ ಮಟ್ಟದಲ್ಲಿಯೂ ಪ್ರಖ್ಯಾತಿಯನ್ನು ಪಡೆದಿರುವ

ಮತ್ತು ವಿದೇಶಿ ವಿನಿಮಯವನ್ನು ಗಳಿಸುತ್ತಿರುವ ಸರ್ಕಾರಿ ಮತ್ತು ಖಾಸಗಿ ವಲಯದ ಬೃಹತ್ ಉದ್ಯಮಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿವೆ. ಇಂತಹ ಬೃಹತ್ ಉದ್ಯಮಗಳಲ್ಲಿ ಮಾರುತಿ ಸುಜೂಕಿ ಹಾಗೂ ಜಿಂದಾಲ್ ಕಂಪನಿ ತಯಾರಿಸುವ ಕೈಗಾರಿಕೆಗಳು ಪ್ರಮುಖವಾಗಿವೆ.

ಇವುಗಳಲ್ಲದೇ ಈ ಜಿಲ್ಲೆಯ ನಂದಿನಿ ಹಾಲು ಜಾಗತಿಕ ಮಟ್ಟದಲ್ಲಿ ಪ್ರಸಿದ್ದಿಯನ್ನು ಪಡೆಯುವುದರೊಂದಿಗೆ ವಿದೇಶಿ ವಿನಿಮಯವನ್ನು ಪಡೆಯುತ್ತಿದೆ. ತೋಟಗಾರಿಕೆ ಬೆಳೆಗಳು ಮತ್ತು ದ್ರಾಕ್ಷಿ ಮಾವು ಉದ್ಯಮದಿಂದಲೂ ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಪ್ರಖ್ಯಾತಿಯನ್ನು ಪಡೆದಿದೆ. ರೇಷ್ಮೆ ಉತ್ಪಾದನೆಯೊಂದಿಗೆ ಅಂತರರಾಷ್ಟ್ರೀಯ ಮಟ್ಟದಲ್ಲಿ ಮಾವಿನ ಹಣ್ಣು ರಫ್ತು ಮಾಡುವುದರಿಂದ ಹೆಸರು ಪಡೆದುಕೊಂಡಿದೆ ಮತ್ತು ರೇಷ್ಮೆ ಉತ್ಪಾದನೆಯಲ್ಲಿ ಪ್ರಮುಖವಾದ ಪಾತ್ರವನ್ನು ಪಡೆದುಕೊಂಡಿದ್ದು ಅದರಲ್ಲಿ ದೊಡ್ಡಬಳ್ಳಾಪುರ ತಾಲ್ಲೂಕು ರೇಷ್ಮೆ ಉತ್ಪಾದನೆಯನ್ನು ರಾಜ್ಯದಿಂದಲೂ ಹೆಸರು ಪಡೆದಿರುವ ತಾಲ್ಲೂಕು ಎಂದು ಪ್ರಖ್ಯಾತಿ ಪಡೆದುಕೊಂಡಿದೆ.

ಪ್ರವಾಸಿಗನಿಂದ ಒಂದು ಸ್ಥಳವು ಅಭಿವೃದ್ಧಿಯಾಗಲು ಕಾರಣವಾಗುತ್ತಿದೆ. ದಿನದಿಂದ ದಿನಕ್ಕೆ ಪ್ರವಾಸಿಗರು ಹೋಗುತ್ತಿದ್ದರೆ ಆ ಸ್ಥಳದ ಬಗ್ಗೆ ಕುತೂಹಲ ಉಂಟಾಗುತ್ತದೆ. ಆದ್ದರಿಂದ ಪ್ರವಾಸಿಗನು ಪ್ರಮುಖ ವ್ಯಕ್ತಿಯಾಗುತ್ತಾನೆ.

## 4.2 ಸಾರಿಗೆ ವ್ಯವಸ್ಥೆ

ಸಾರಿಗೆ–ಸಂಪರ್ಕ ಪ್ರಗತಿಯ ನರನಾಡಿಗಳಿದ್ದಂತೆ. ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಸಾಗಲು ಮತ್ತು ವಸ್ತುಗಳನ್ನು ಸಾಗಿಸಲು ರಸ್ತೆಗಳು ಪ್ರಮುಖವಾದ ಪಾತ್ರವನ್ನು ವಹಿಸುತ್ತವೆ. ದೂರದ ನಾಡು ಮತ್ತು ಪ್ರದೇಶಗಳಿಗೆ ಕಡಿಮೆ ಅವಧಿಯಲ್ಲಿ ಸಂಚಾರ ಮತ್ತು ಸಂಪರ್ಕವನ್ನು ಕಲ್ಪಿಸುವ ರಸ್ತೆಗಳು ಒಂದು ಪ್ರದೇಶದ ಸರ್ವತೋಮುಖ ಅಭಿವೃದ್ಧಿಗೆ ಮುಖ್ಯವಾಗುತ್ತವೆ. ಯಾವುದೇ ಉದ್ಯಮದ ಬೆಳವಣಿಗೆ ಮತ್ತು ಪ್ರಗತಿಯು ಅಲ್ಲಿನ ಸಾರಿಗೆ ಮತ್ತು ಸಂಪರ್ಕವನ್ನು ಅವಲಂಭಿಸಿರುತ್ತದೆ.

ಕೈಗಾರಿಕೀಕರಣದ ನಂತರದಲ್ಲಿ ಸಾರಿಗೆ–ಸಂಪರ್ಕ ಕ್ಷೇತ್ರದಲ್ಲೆ ಕ್ರಾಂತಿಯುಂಟಾಯಿತು. ಸ್ವಾತಂತ್ರ್ಯಪೂರ್ವದಲ್ಲಿನ ಮೈಸೂರು ಸಂಸ್ಥಾನದಲ್ಲಿ 1830ಕ್ಕಿಂತ ಹಿಂದೆ ರಸ್ತೆಗಳನ್ನು ನಿರ್ವಹಿಸುವ ಸಂಸ್ಥೆ ಅಥವಾ ಅಭಿವೃದ್ಧಿಪಡಿಸುವ ಇಂಜಿನಿಯರ್‌ಗಳಾಗಲಿ ಇರಲಿಲ್ಲ. ಕಾಲಾನಂತರದಲ್ಲಿ ಮೈಸೂರು ಸಂಸ್ಥಾನದಲ್ಲಿ ಸಾರಿಗೆ–ಸಂಪರ್ಕವನ್ನು ಅಭಿವೃದ್ಧಿಪಡಿಸುವ ನಿಟ್ಟಿನಲ್ಲಿ ಮಹತ್ವದ

ಪ್ರಯತ್ನಗಳು ನಡೆಯಿತು. ಬ್ರಿಟಿಷರ ಆಡಳಿತದ ಕಾಲದಲ್ಲಿ ಕೈಗಾರಿಕೆಗಳನ್ನು, ವಾಣಿಜ್ಯ ಕೇಂದ್ರಗಳನ್ನು ಮತ್ತು ಬಂದರುಗಳನ್ನು ಸಂಪರ್ಕಿಸುವ ರಸ್ತೆಗಳನ್ನು ನಿರ್ಮಾಣ ಮಾಡಿದರು. ಇವು ನಂತರದ ಕಾಲದಲ್ಲಿ ಮೈಸೂರು ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪ್ರಗತಿಗೆ ಕಾರಣವಾದವು.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಸಾರಿಗೆ ರೈಲು ಸಾರಿಗೆ, ಬಸ್‌ಗಳು, ಕಾರುಗಳು, ವಿಮಾನಗಳು ಲಭ್ಯವಿರುತ್ತದೆ.[3] ಬಸ್ಸುಗಳು ಐತಿಹಾಸಿಕವಿರುವ ಸ್ಥಳಗಳಲ್ಲಿ ಸಂಚಾರವನ್ನು ಮಾಡುತ್ತಿದೆ. ರೈಲುಗಳು ಮಾತ್ರ ಕೆಲವೊಂದು ಸ್ಥಳಗಳಲ್ಲಿ ಪ್ರಾಮುಖ್ಯವನ್ನೆ ಪಡೆದು ಕೊಂಡಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯು ರೈಲುಗಳ ಸೌಲಭ್ಯ ತುಂಬಾನೇ ಯಶಸ್ಸನ್ನು ಪಡೆದುಕೊಂಡಿದೆ. ಮತ್ತು ವಿಮಾನ ವ್ಯವಸ್ಥೆಯು ಇಡೀ ರಾಜ್ಯಕ್ಕೆ ಅಂತರಾಷ್ಟ್ರೀಯ ವಿಮಾನ ನಿಲ್ದಾಣವು ಬೆಂಗಳೂರು ಗ್ರಾಮಾಂತರ ಪ್ರದೇಶ ಸೇರಿರುತ್ತದೆ. ಆದ್ದರಿಂದ ಇದು ಒಂದು ವರದಾನವನ್ನೆ ಪಡೆದುಕೊಂಡಿದೆ. ಆದರೆ ಕೆಲಹೊಂದು ಪ್ರದೇಶಗಳಲ್ಲಿ ಯಾವುದೇ ಪ್ರದೇಶಗಳು ಇಲ್ಲದೆ ಹೋದರೆ ಸ್ವಂತ ವಾಹನಗಳನ್ನು ಬಳಿಸಬೇಕಾಗುತ್ತಿದೆ. ಸಾರಿಗೆ ವ್ಯವಸ್ಥೆಯೆ ತುಂಬಾನೇ ಅಭಿವೃದ್ದಿಯನ್ನೆ ಪಡೆದುಕೊಂಡಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಬಹುಪಾಲು ಪಡೆದುಕೊಂಡಿದೆ. ಅದರಲ್ಲಿ ರಾಷ್ಟ್ರೀಯ ಹೆದ್ದಾರಿಗಳು, ರಾಜ್ಯ ಹೆದ್ದಾರಿಗಳು, ಜಿಲ್ಲಾ ಹೆದ್ದಾರಿಗಳು ಸಿಂಹಪಾಲು ಪಡೆದುಕೊಂಡು ಬೆಂಗಳೂರು ಗ್ರಾಮಾಂತರ ಜಿಲ್ಲೆಯಿಂದಲೆ ಹೊರಡಬೇಕಾಗುತ್ತದೆ. ಇನ್ನೊಂದು ವಿಶೇಷವೇನೆಂದರೆ ಬೆಂಗಳೂರು ನಗರ ರಾಜ್ಯದಾನಿಯಿಂದ ಹೊರಟ ಪ್ರವಾಸಿಗರು ರಾಜ್ಯದ 21 ಜಿಲ್ಲೆಗಳಿಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯಿಂದಲೆ ರಾಷ್ಟ್ರೀಯ ಹೆದ್ದಾರಿ ಮುಖಾಂತರ ಪ್ರವಾಸವನ್ನು ಕೈಗೊಳ್ಳಬೇಕಾಗುತ್ತದೆ. ಮತ್ತು ಎಲ್ಲಾ ಜಿಲ್ಲೆಗಳಿಗೆ ಸಂಪರ್ಕವನ್ನು ಕಲ್ಪಿಸುವ ಏಕೈಕ ಜಿಲ್ಲೆ ಅದು ಬೆಂಗಳೂರು ಗ್ರಾಮಾಂತರ ಜಿಲ್ಲೆ ಎಂದು ಹೇಳಬಹುದು.

## ರಸ್ತೆ ಸಾರಿಗೆ

ಬೆಂಗಳೂರು ಗ್ರಾಮಾಂತರ ಜಿಲ್ಲೆಯು ರಾಜ್ಯ ಮತ್ತು ದೇಶದ ವಿವಿಧ ನಗರಗಳನ್ನು ಸಂಪರ್ಕಿಸುವ ರೈಲು ಮತ್ತು ರಸ್ತೆ ಸಾರಿಗೆಯನ್ನು ಹೊಂದಿದೆ. ಇಂತಹ ರೈಲು ಮತ್ತು ರಸ್ತೆ ಸಾರಿಗೆ ಸಂಪರ್ಕಗಳು ಜಿಲ್ಲೆಯ ಪ್ರವಾಸೋದ್ಯಮ ಬೆಳವಣಿಗೆಗೆ ಸಹಾಯಕಾರಿಯಾಗಿವೆ. ಕೇವಲ ಪ್ರವಾಸೋದ್ಯಮ ಕ್ಷೇತ್ರವಲ್ಲದೇ ಜಿಲ್ಲೆಯ ಎಲ್ಲಾ ಕ್ಷೇತ್ರಗಳಲ್ಲಿ ಪ್ರಗತಿ ಸಾಧಿಸಲು ಅವಕಾಶಗಳನ್ನು ಕಲ್ಪಿಸಿವೆ. ಪ್ರಾಚೀನ ಕಾಲದಿಂದಲೂ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ವಿವಿಧ ರಾಜಮನೆತನಗಳ ಆಡಳಿತ ಕಾಲದಲ್ಲಿ ಕಿರುದಾದ ಮತ್ತು ಬಂಡಿಗಳನ್ನು ನಡೆಸುತ್ತಿದ್ದ

ರಸ್ತೆಗಳಿದ್ದವು. ಪ್ರಾಣಿಗಳ ಸಹಾಯದಿಂದ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹಲವು ಸ್ಥಳಗಳಿಗೆ ಧಾರ್ಮಿಕ ಯಾತ್ರೆಗಳನ್ನು ಇಂತಹ ಕಾಲುದಾರಿಗಳ ಮೂಲಕವೂ ಅಥವಾ ಬಂಡಿ ದಾರಿಗಳ ಮೂಲಕ ಪಯಣ ಮಾಡುತ್ತಿದ್ದರು.

ಇವುಗಳಲ್ಲದೇ ಸೈನ್ಯವು ಒಂದು ಸ್ಥಳದಿಂದ  ಮತ್ತೊಂದು ಸ್ಥಳಕ್ಕೆ ಹೊಗಲು ದಂಡಿನ ಅಥವಾ ಸೈನಿಕ ದಾರಿಗಳನ್ನು ಸಹ ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಹೊಂದಿತ್ತು. ಇಂತಹ ದಂಡು ನೆಲೆಸುತ್ತಿದ್ದ ಮತ್ತು ಹಾದು ಹೊಗುತ್ತಿದ್ದ ದಾರಿಗಳು ಮತ್ತು ಸ್ಥಳಗಳು ಇಂದಿಗೂ ಅಸ್ಥಿತ್ವದಲ್ಲವೆ.  ಇಂತಹ ದಾರಿಗಳು ಮಯಣಕ್ಕೆ ಪೂರಕವಾಗಿದ್ದವು. ವಿವಿಧ ಪ್ರದೇಶಗಳಿಂದ ಕಂದಾಯವನ್ನು ಮತ್ತು ಧವಸಧಾನ್ಯಗಳನ್ನು ಆಡಳಿತ ಕೇಂದ್ರಗಳಿಗೆ ಸಾಗಿಸಲು ಬಂಡೆಯ ಚಲನೆಗೆ ಸಹಾಯಕವಾದ ರಸ್ತೆಗಳನ್ನು ಮಣ್ಣನ್ನು ಮತ್ತು ಕಲ್ಲುಗಳನ್ನು ಹಾಸಿ ನಿರ್ಮಾಣ ಮಾಡಿಕೊಂಡಿದ್ದರು.

ಆಧುನಿಕ ಕಾಲದಲ್ಲಿ ಸಾರಿಗೆ ಮತ್ತು ಸಂಪರ್ಕ ಕ್ಷೇತ್ರವು ಹೆಚ್ಚಿನ ಮಹತ್ವವನ್ನು ಪಡೆದುಕೊಂಡಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ರಸ್ತೆ ಸಾರಿಗೆ ಮತ್ತು ರೈಲು ಸಾರಿಗೆಯನ್ನು ಕಾಣಬಹುದಾಗಿದೆ. ಇವೆರಡೂ ಬಗೆಯ ಆಧುನಿಕ ಮತ್ತು ಉತ್ತಮವಾದ ಸಾರಿಗೆ–ಸಂಪರ್ಕವು ಬ್ರಿಟಿಷರ ಮತ್ತು ನಂತರದ ಮೈಸೂರು ಒಡೆಯರ ಕಾಲದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಪ್ರಾರಂಭವಾಯಿತು. ಮುಖ್ಯವಾಗಿ 1880ರ ದಶಕದಿಂದ ಬೆಂಗಳೂರು ಗ್ರಾಮಾಂತರ ಜಿಲ್ಲೆಯಿಂದ ತಮಿಳುನಾಡು, ಪುಣೆ ಮತ್ತು ಬೆಂಗಳೂರು ನಗರಗಳನ್ನು ಸಂಪರ್ಕಿಸುವಂತಹ ರಸ್ತೆ ಮತ್ತು ರೈಲು ಸಾರಿಗೆಯನ್ನು ನಿರ್ಮಾಣ ಮಾಡಲಾಯಿತು. ಪ್ರವಾಸೋದ್ಯಮ ಕ್ಷೇತ್ರವು ಮುಖ್ಯವಾಗಿ ಸಾರಿಗೆ ಮತ್ತು ಸಂಪರ್ಕವನ್ನು ಅವಲಂಭಿಸಿದೆ.

ಪ್ರವಾಸಿಗರು ಒಂದು ಕಡೆಯಿಂದ ಮತ್ತೊಂದು ಕಡೆಗೆ ತಮ್ಮ ಪಯಣವನ್ನು ಅಥವಾ ಪ್ರವಾಸವನ್ನು ಕೈಗೊಳ್ಳಬೇಕಾದರೆ ಉತ್ತಮವಾದ ಸಾರಿಗೆ ವ್ಯವಸ್ಥೆಯಿಂದ ಮಾತ್ರ ಸಾಧ್ಯ ಹೆಚ್ಚು ಪ್ರವಾಸಿಗರನ್ನು ಪ್ರವಾಸಿ ತಾಣಗಳು ಮತ್ತು ವಾಣಿಜ್ಯ ಕೇಂದ್ರಗಳು ಪ್ರವಾಸಿಗರನ್ನು ಆಕರ್ಷಣೆ ಮಾಡುವ ನಿಟ್ಟಿನಲ್ಲಿ ಸಾರಿಗೆಯು ಮಹತ್ವದ್ದಾಗಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಹಲವು ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ, ಐತಿಹಾಸಿಕ, ಆರೋಗ್ಯ, ಶೈಕ್ಷಣಿಕ, ಆರ್ಥಿಕ ಮತ್ತು ಪಾರಂಪರಿಕ ಪ್ರವಾಸಿ ತಾಣಗಳಿಗೆ ಪ್ರವಾಸಿಗರನ್ನು ಸೆಳೆಯುವುದರಲ್ಲಿ ಮುಖ್ಯವಾಗಿ ರಸ್ತೆ ಸಾರಿಗೆಯು ಮುಖ್ಯವಾದ ಮತ್ತು ಪ್ರಧಾನವಾದ ಪಾತ್ರವನ್ನು ವಹಿಸುತ್ತಿದೆ.

ಪ್ರವಾಸೋದ್ಯಮ ಕ್ಷೇತ್ರಕ್ಕೆ ಪೂರಕವಾದ ಮತ್ತು ಅಭಿವೃದ್ಧಿಗೆ ಕಾರಣವಾಗಿರುವ ಹಲವು ರಸ್ತೆಗಳನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಹೊಂದಿದೆ. ಈ ಜಿಲ್ಲೆಯಲ್ಲಿ ಅಂತರರಾಜ್ಯಗಳನ್ನು ಸಂಪರ್ಕಿಸುವ ರಸ್ತೆಗಳನ್ನು ಒಳಗೊಂಡಂತೆ ಹಲವು ರಸ್ತೆಗಳಿವೆ. ಮೈಸೂರು ಸಂಸ್ಥಾನದಲ್ಲಿ ಮಾರ್ಕ್ ಕಬ್ಬನ್ ಕಾಲದಲ್ಲಿ 1956ರಲ್ಲಿ ಸ್ಥಾಪನೆಯಾದ ಲೋಕೋಪಯೋಗಿ ಇಲಾಖೆಯಿಂದ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ರಸ್ತೆಗಳು ತನ್ನ ಸುತ್ತಲಿನ ಎರಡೂ ರಾಜ್ಯಗಳಾದ ತಮಿಳುನಾಡು ಮತ್ತು ಆಂಧ್ರಪ್ರದೇಶಗಳೊಂದಿಗೆ ಉತ್ತಮವಾದ ರಸ್ತೆ ಮತ್ತು ರೈಲು ಸಾರಿಗೆ ಸಂಪರ್ಕವನ್ನು ಹೊಂದಿದೆ[4]. ಈ ಮುಖಾಂತರ ಅಂತರರಾಜ್ಯ ಪ್ರವಾಸಿಗರನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪ್ರವಾಸಿ ತಾಣಗಳನ್ನು ಒಳಗೊಂಡಂತೆ ಆರ್ಥಿಕ ಪ್ರವಾಸೋದ್ಯಮವು ಆರ್ಷಣೆ ಮಾಡಲು ಸಾಧ್ಯವಾಗಿದೆ. ಇಂತಹ ರಸ್ತೆಗಳಲ್ಲಿ ರಾಷ್ಟ್ರೀಯ ಹೆದ್ದಾರಿಗಳು, ಜಿಲ್ಲಾ ಮುಖ್ಯ ರಸ್ತೆಗಳು, ಗ್ರಾಮಾಂತರ, ನೀರಾವರಿ ಮತ್ತು ಅರಣ್ಯ ಇಲಾಖೆ ರಸ್ತೆಗಳು ಮುಖ್ಯವಾಗಿವೆ.

ಮೂಲಭೂತ ಸೌಕರ್ಯಗಳಲ್ಲಿ ತಮಿಳುನಾಡು ಮತ್ತು ಆಂಧ್ರಪ್ರದೇಶ ರಾಜ್ಯಗಳ ಪಕ್ಕದಲ್ಲಿರುವ ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಪ್ರವಾಸಿ ಮತ್ತು ಧಾರ್ಮಿಕ, ಶೈಕ್ಷಣಿಕ ಕೇಂದ್ರಗಳಿಗೆ ರಾಷ್ಟ್ರೀಯ ಹೆದ್ದಾರಿಗಳಾದ ಎನ್.ಹೆಚ್–04, ಎನ್.ಹೆಚ್–65, ಜಿಲ್ಲೆಯ ಪ್ರಮುಖ ರಾಷ್ಟ್ರೀಯ ಹೆದ್ದಾರಿಗಳಲ್ಲಿ ಬಾಂಬೆ, ಪುಣೆ ಮತ್ತು ಮಹಾರಾಷ್ಟ್ರ ಸಂಪರ್ಕಿಸುವ ರಾಷ್ಟ್ರೀಯ ಹೆದ್ದಾರಿ ಎನ್.ಹೆಚ್–04 ಜಿಲ್ಲೆಯಲಿ ಹಾದು ಹೋಗುತ್ತದೆ[5]. ಜಿಲ್ಲೆಯ ನೆಲಮಂಗಲ, ಹೊಸಕೋಟೆ ಮತ್ತು ದೇವನಹಳ್ಳಿ ತಾಲ್ಲೂಕುಗಳ ಮೂಲಕವಾಗಿ ಹಾದುಹೋಗಿ ಆಂಧ್ರಪ್ರದೇಶಕ್ಕೆ ಸಾಗುತ್ತದೆ. ಇದು 2017–18 ಮತ್ತು 2018–19ರಲ್ಲಿ ಆರು ಪಥದ ರಸ್ತೆಯನ್ನಾಗಿ ಅಭಿವೃದ್ಧಿಪಡಿಸುತ್ತದೆ[6] ಕರ್ನಾಟಕ, ಆಂಧ್ರ ಮತ್ತು ತಮಿಳುನಾಡು ರಾಜ್ಯಗಳಿಂದ ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಹಲವು ಉದ್ದೇಶಗಳಿಗಾಗಿ ಆಗಮಿಸಲು ಸಹಾಯಕವಾಗಿದೆ.

ಅಭಿವೃದ್ಧಿಯ ಕಾರಣವಾಗಿ ಜಿಲ್ಲೆಯಲ್ಲಿ ಉತ್ಪಾದನೆಯಾಗುವ ಹಲವು ಉತ್ಪನ್ನಗಳನ್ನು ಆಂಧ್ರಪ್ರದೇಶ ಮತ್ತು ಮಹಾರಾಷ್ಟ್ರಕ್ಕೆ ರವಾನಿಸುವ ಉತ್ತಮವಾದ ಅವಕಾಶವನ್ನು ಕಲ್ಪಿಸಿದೆ. ಈ ನಿಟ್ಟಿನಲ್ಲಿ ಜಿಲ್ಲೆಯ ಆರ್ಥಿಕ ಮತ್ತು ಇತರ ಬಗೆಯ ಪ್ರವಾಸೋದ್ಯಮ ಕ್ಷೇತ್ರಗಳು ಬೆಳವಣಿಗೆಯಾಗಲು ಉತ್ತಮವಾದ ಕೊಡುಗೆಯನ್ನು ನೀಡುತ್ತಿದೆ.

ಮದ್ರಾಸ್ ಮತ್ತು ಮಹರಾಷ್ಟ್ರದ ಥಾಣೆಯ ನಗರಗಳನ್ನು ಸಂಪರ್ಕಿಸುವ ರಾಷ್ಟ್ರೀಯ ಹೆದ್ದಾರಿ ಸಂಖ್ಯೆ–4 ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ ತಾಲ್ಲೂಕುಗಳ

ಮೂಲಕವಾಗಿ ಹಾದುಹೋಗುತ್ತಿದೆ. ಬೆಂಗಳೂರು ಮತ್ತು ಮದ್ರಾಸ್ ನಗರಗಳಿಂದ ಉತ್ತಮ ರೀತಿಯಲ್ಲಿ ಸಂಪರ್ಕವನ್ನು ಹೊಂದಿರುವ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಆರ್ಥಿಕ ಮತ್ತು ಪ್ರವಾಸೋದ್ಯಮ ಬೆಳವಣಿಗೆಯಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತಿದೆ. ಈ ಹೆದ್ದಾರಿಯು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಒಟ್ಟು 55 ಕಿ.ಮೀ ಕ್ರಮಿಸುತ್ತದ[7]. ಅಲ್ಲದೇ ಬೆಂಗಳೂರು ಮತ್ತು ಇತರ ಪ್ರದೇಶಗಳಿಂದ ಸುಲಭವಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಪ್ರವಾಸವನ್ನು ಕೈಗೊಳ್ಳಲು ಅವಕಾಶವನ್ನು ಕಲ್ಪಿಸಿದೆ.

ಈ ಮಾರ್ಗದ ಮುಖಾಂತರವಾಗಿ ರಾಜ್ಯ ಹೆದ್ದಾರಿಗಳಿಂದ ಜಿಲ್ಲೆಯ ನೆಲಮಂಗಲ ದೊಡ್ಡಬಳ್ಳಾಪುರ, ದೇವನಹಳ್ಳಿ ಮತ್ತು ಹೊಸಕೋಟೆ ತಾಲ್ಲೂಕುಗಳಲ್ಲಿರುವ ಹಲವಾರು ಪ್ರವಾಸಿ ತಾಣಗಳಿಗೆ ಪ್ರವಾಸಿಗರು ಪಯಣ ಮಾಡಲು ಅನುಕೂಲವನ್ನು ಮಾಡಿಕೊಟ್ಟಿದೆ. ಸರ್ವತೋಮುಖ ಅಭಿವೃದ್ಧಿಯೊಂದಿಗೆ ಜಿಲ್ಲೆಯಲ್ಲಿ ಈ ತಾಲ್ಲೂಕುಗಳ ಪ್ರವಾಸಿ ತಾಣಗಳು ಮತ್ತು ಪ್ರವಾಸೋದ್ಯಮ ಬೆಳವಣಿಗೆಗೆ ಸಹಾಯಕಾರಿಯಾಗುತ್ತಿದೆ.

ಮೇಲಿನ ಮೂರು ರಾಷ್ಟ್ರೀಯ ಹೆದ್ದಾರಿಗಳು ಜಿಲ್ಲೆಯನ್ನು ತ್ರಿಕೋನ ಆಕಾರದಲ್ಲಿ ಸಂದಿಸುತ್ತಿದ್ದು ಜಿಲ್ಲೆಯ ನಾಲ್ಕು ತಾಲ್ಲೂಕುಗಳಿಗೆ ಉತ್ತಮ ರಸ್ತೆ ಸಾರಿಗೆ ಸಂಪರ್ಕವನ್ನು ಕಲ್ಪಿಸಿವೆ. ಜಿಲ್ಲೆಯಲ್ಲಿ ಹಾದು ಹೋಗುವ ರಾಷ್ಟ್ರೀಯ ಹೆದ್ದಾರಿಗಳಿಂದ ಪ್ರವಾಸೋದ್ಯಮ ಬೆಳವಣಿಗೆಯಾಗಲು ಸಾಧ್ಯವಾಗಿದೆ. ಜಿಲ್ಲೆಯ ಪ್ರವಾಸಿ ತಾಣಗಳಿಗೆ ಶೀಘ್ರವಾಗಿ ಮತ್ತು ಕಡಿಮೆ ವೆಚ್ಚದಲ್ಲಿ ಪ್ರಯಾಣ ಮಾಡಲು ಅನುಕೂಲವನ್ನು ಕಲ್ಪಿಸುತ್ತಿವೆ. ಈ ಹೆದ್ದಾರಿಗಳು ಜಿಲ್ಲೆಯಲ್ಲಿ ಇನ್ನಿತರ ವ್ಯಾಪಾರ ಮತ್ತು ವಾಣಿಜ್ಯ ಕ್ಷೇತ್ರಗಳಲ್ಲದೇ ಹಲವು ಕೈಗಾರಿಕೆಗಳು ಬಂಡವಾಳ ಹೂಡಿಕೆ ಮಾಡಲು ಪ್ರೋತ್ಸಾಹ ನೀಡುತ್ತಿವೆ. ಈ ನಿಟ್ಟಿನಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನಾಲ್ಕು ತಾಲ್ಲೂಕುಗಳಲ್ಲಿ ಬೃಹತ್ ಉದ್ಯಮಗಳು ಸ್ಥಾಪನೆಯಾಗಲು ಸಹಾಯಕಾರಿಯಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಪ್ರವಾಸಿ ತಾಣಗಳನ್ನು ಪ್ರಮುಖವಾಗಿ ರಾಜ್ಯ ಮತ್ತು ರಾಷ್ಟ್ರೀಯ ಹೆದ್ದಾರಿಗಳಿಗೆ ಸಂಪರ್ಕವನ್ನು ಕಲ್ಪಿಸುವಂತಹ ನಿಟ್ಟಿನಲ್ಲಿ ರಾಜ್ಯ ಪ್ರವಾಸೋದ್ಯಮ ಇಲಾಖೆಯು ತನ್ನ ಅನುದಾನದಲ್ಲಿ ಸಂಪರ್ಕ ರಸ್ತೆಗಳನ್ನು ಅಭಿವೃದ್ಧಿ ಪಡಿಸಿದೆ. ಈ ಕಾಲಕ್ಕೆ ಇಂತಹ ರಸ್ತೆಗಳನ್ನು ಪುನರ್ ನಿರ್ಮಾಣ ಮಾಡುವ ಕಾರ್ಯವನ್ನು ಮಾಡುತ್ತಿದೆ. ಈ ಜಿಲ್ಲೆಯಲ್ಲಿ ಅಧಿಕ ಸಂಖ್ಯೆಯಲ್ಲಿ ಪ್ರವಾಸಿಗರು ಭೇಟಿ ನೀಡುವ ರಾಜ್ಯ ಮತ್ತು ರಾಷ್ಟ್ರೀಯ ಸ್ಮಾರಕಗಳಲ್ಲದೆ ಇತರ ಪ್ರಸಿದ್ಧ ಪ್ರವಾಸಿ ನೆಲೆಗಳಿಗೆ ಉತ್ತಮ ರಸ್ತೆಗಳನ್ನು ಕಲ್ಪಿಸುವ ನಿಟ್ಟಿನಲ್ಲಿ ಪ್ರವಾಸೋದ್ಯಮ ಇಲಾಖೆಯು ಕಾರ್ಯನಿರ್ವಹಿಸುತ್ತಿವೆ.

ಹೆದ್ದಾರಿ ರಸ್ತೆಗಳಲ್ಲದೇ ಜಿಲ್ಲೆಯಲ್ಲಿ ರಾಜ್ಯ ಮತ್ತು ಇತರ ರಸ್ತೆಗಳು ಸಹ ಪ್ರವಾಸೋದ್ಯಮ ಅಭಿವೃದ್ದಿಗೆ ಕಾರಣೀಭೂತವಾಗಿದೆ. ಅಂತಹ ಪ್ರಮುಖವಾದ 208.8 ಕಿ.ಮೀ ರಾಜ್ಯ ಹೆದ್ದಾರಿಗಳು ಜಿಲ್ಲೆಯಲ್ಲಿವೆ. ಇವುಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ತಾಲ್ಲೂಕು ಮತ್ತು ಹೋಬಳಿ ಕೇಂದ್ರಗಳನ್ನು ಸಂಪರ್ಕಿಸುತ್ತಿವೆ. 2017–18ರಲ್ಲಿ 205 ಕಿ.ಮೀ ರಾಷ್ಟ್ರೀಯ ಹೆದ್ದಾರಿಗಳಿದ್ದು,[8] 2018–19ರ ಜಿಲ್ಲಾ ಹೆದ್ದಾರಿಗಳ ಉದ್ದ 669.10 ಕಿ.ಮೀ ಆಗಿತ್ತು.[9] ತಾಲ್ಲೂಕುಗಳ ನಡುವೆ ಹಾದು ಹೋಗುವುದರೊಂದಿಗೆ ರಾಜ್ಯದ ಇತರ ಜಿಲ್ಲೆಗಳಿಗೆ ಸಂಪರ್ಕವನ್ನು ಕಲ್ಪಿಸಿವೆ.

2018–19 ರಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಜಿಲ್ಲಾ ಮುಖ್ಯ ಭಾರಿ ಸೇತುವೆಗಳು ಇದು, ಗ್ರಾಮಾಂತರ ರಸ್ತೆಗಳ 2659.55 ಗ್ರಾಮೀಣ ರಸ್ತೆಗಳನ್ನು ಹೊಂದಿದೆ,[10] ಅರಣ್ಯ ಇಲಾಖೆಯ 95 ರಸ್ತೆ ಮತ್ತು ನೀರಾವರಿ ಇಲಾಖೆಯ 178.13 ಕಿ.ಮೀ ರಸ್ತೆಗಳಿದ್ದವು.[11] ನಂತರದಲ್ಲಿ ಸರ್ಕಾರಗಳು ಜಾರಿಗೆ ತಂದ ಹಲವು ಯೋಜನೆಗಳ ಅವಧಿಯಲ್ಲಿ ಇವುಗಳ ಸಂಖ್ಯೆಯು ಅಧಿಕಗೊಂಡಿತ್ತು. ಇದರೊಂದಿಗೆ ಜಿಲ್ಲೆಯಲ್ಲಿ ಪ್ರವಾಸೋದ್ಯಮ ಬೆಳೆಯಲು ಸಹ ಸಹಾಯಕವಾಗಿದೆ.

ಜಿಲ್ಲೆಯಲ್ಲಿನ ಪ್ರವಾಸಿ ತಾಣಗಳಿಗೆ ನೂರಾರು ಸಂಖ್ಯೆಯಲ್ಲಿ ದೇಶೀಯ ಮತ್ತು ವಿದೇಶಿ ಪ್ರವಾಸಿಗರನ್ನು ಆಕರ್ಷಣೆ ಮಾಡುವಲ್ಲಿ ರಸ್ತೆಗಳ ಪಾತ್ರ ಮುಖ್ಯವಾಗಿದೆ. ಗ್ರಾಮೀಣ ಭಾಗದಲ್ಲಿ ಮತ್ತು ಮುಖ್ಯವಾಗಿ ವಿವಿಧ ಬಗೆಯ ಜಿಲ್ಲೆಯಲ್ಲಿನ ಪ್ರವಾಸಿ ತಾಣಗಳಿಗೆ ಉತ್ತಮವಾದ ರಸ್ತೆ ಸಾರಿಗೆಯನ್ನು ಕಲ್ಪಿಸಿದರೆ ಮತ್ತಷ್ಟು ಜಿಲ್ಲೆಯ ಪ್ರವಾಸೋದ್ಯಮ ಸಾಧ್ಯವಾಗುತ್ತದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಆರ್ಥಿಕ ಪ್ರಗತಿ ಮತ್ತು ಪ್ರವಾಸೋದ್ಯಮಕ್ಕೆ ಪೂರಕವಾದ ಮೂಲಭೂತ ಸೌಕರ್ಯಗಳನ್ನು ಕಲ್ಪಿಸುವ ನಿಟ್ಟಿನಲ್ಲಿ ಹಲವು ರಾಜ್ಯ ಹೆದ್ದಾರಿಗಳನ್ನು ಅಭಿವೃದ್ದಿ ಪಡಿಸುವ ಯೋಜನೆಗಳನ್ನು ರೂಪಿಸಲಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ 19ನೇ ಶತಮಾನದವರೆಗೂ ಸಾರ್ವಜನಿಕ ಸಂಚಾರದಲ್ಲಿ ಎತ್ತಿನ ಗಾಡಿ ಕುದುರೆಗಳು, ಜಟಕಾ ಬಂಡಿಗಳನ್ನು ಬಳಸಲಾಗುತ್ತಿದ್ದು, ಇವೆಲ್ಲವೂ ಖಾಸಗಿ ಒಡೆತನದಲ್ಲಿದ್ದವು. ವಿವಿಧ ರಾಜಮನೆತನಗಳ ಕಾಲದಲ್ಲಿ ರಥಗಳನ್ನು ಮತ್ತು ಕುದುರೆಗಳನ್ನು ತಮ್ಮ ಸಂಚಾರಕ್ಕಾಗಿ ಬಳಸುತ್ತಿದ್ದರು. 1966ರಲ್ಲಿ ಜಿಲ್ಲೆಯ ಸಂಚಾರದಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿದ್ದ ಕುದುರೆಗಳು ಮತ್ತು ಎತ್ತಿನ ಬಂಡಿಗಳಿದ್ದವು. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿನ ವಿವಿಧ ಭಾಗದಲ್ಲಿ ಜನರು ತಮ್ಮ ಸಂಚಾರಕ್ಕಾಗಿ ಮುಖ್ಯವಾಗಿ ಎತ್ತಿನ ಬಂಡಿಗಳನ್ನು ಹೆಚ್ಚಾಗಿ ಬಳಕೆ ಮಾಡುತ್ತಿದ್ದರೆಂಬ ಅಂಶ ತಿಳಿಯುತ್ತದೆ. ಅಲ್ಲದೇ ಕುದುರೆಗಳನ್ನು

ಸಹ ಶ್ರೀಮಂತ ವ್ಯಕ್ತಿಗಳು ತಮ್ಮ ಸಂಚಾರಕ್ಕಾಗಿ ಬಳಸುತ್ತಿದ್ದರು. ಜಿಲ್ಲೆಯಲ್ಲಿ ಮೋಟಾರ್ ಬಸ್‌ಗಳ ಸೇವೆಯನ್ನು ಖಾಸಗಿ ಕಂಪನಿಗಳು ಒದಗಿಸುತ್ತಿದ್ದವು. ಅವುಗಳಲ್ಲಿ ಎಸ್.ಎಲ್ ಎನ್.ಎಸ್, ಕಿಸಾ ಮೋಟಾರ್ ಸರ್ವೀಸ್, ಲಕ್ಷ್ಮೀ ವಂಕೆಟೇಶ್ವರ ಟ್ರಾನ್ಸಪೋರ್ಟ್ ಕಂಪನಿಗಳು ಮುಖ್ಯವಾಗಿವೆ.

ಕಾಲಾನಂತರದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಸರ್ಕಾರಿ ಮತ್ತು ಖಾಸಗಿ ಬಸ್‌ಗಳ ಪ್ರಮಾಣದಲ್ಲಿ ಹೆಚ್ಚಳಗೊಂಡಿದೆ. 2018–19ರಲ್ಲಿ ಇವುಗಳ ಸಂಖ್ಯೆಯು 740 ಏರಿಕೆಯಾಯಿತು 2019–20ರಲ್ಲಿ ಸರ್ಕಾರಿ ಬಸ್ ಗಳ ಸಂಖ್ಯೆಯು 845 ಹೆಚ್ಚಳಗೊಂಡಿದ್ದು,[12] ಜಿಲ್ಲೆಯಲ್ಲದೇ ರಾಜ್ಯ ಮತ್ತು ಅಂತರ ರಾಜ್ಯ ಮಾರ್ಗಗಳಲ್ಲಿ ಸಂಚರಿಸುತ್ತಿವೆ. ಜಿಲ್ಲೆಯಲ್ಲಿ ಸರ್ಕಾರಿ ಬಸ್‌ಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಗ್ರಾಮಗಳು ಮತ್ತು ಪಟ್ಟಣಗಳಲ್ಲಿ ಸೇವೆಯನ್ನು ನೀಡುತ್ತಿದ್ದ ಒಟ್ಟು ಹಲವು ಮಾರ್ಗಗಳಲ್ಲಿ ಸಂಚರಿಸುತ್ತಿವೆ. ಹೀಗೆ ಜಿಲ್ಲೆಯಲ್ಲಿರುವ ಸರ್ಕಾರಿ ಬಸ್‌ಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿನ ವಿವಿಧ ಸ್ಥಳಗಳಿಗೆ ಪ್ರಯಾಣ ಮಾಡಲು ಕಡಿಮೆ ದರದಲ್ಲಿ ಉತ್ತಮ ಸೇವೆಯನ್ನು ನೀಡುತ್ತಿವೆ. ಈ ಮೂಲಕವಾಗಿ ಜಿಲ್ಲೆಯಲ್ಲಿ ಪ್ರವಾಸಿಗರು ವಿವಿಧ ಪ್ರವಾಸಿ ತಾಣಗಳಿಗೆ ಭೇಟಿ ನೀಡಲು ಸಹಾಯಕವಾಗಿವೆ.

ಸರ್ಕಾರಿ ಬಸ್ ಸೇವೆಯಲ್ಲದೇ ಸ್ವಾತಂತ್ರ್ಯ ಪೂರ್ವದಿಂದಲೂ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಖಾಸಗಿ ಬಸ್ ಕಂಪನಿಗಳು ಸೇವೆಯನ್ನು ನೀಡುತ್ತಿವೆ. ಅವುಗಳಲ್ಲಿ ಫ್ರೆಂಡ್ಸ್ ಮೋಟಾರ್ಸ್, ಕೆ.ಕೆ ಟ್ರಾವಲ್ಸ್, ಕಿಸಾನ್ ಮೋಟಾರ್ಸ್, ಬಾಲಾಜಿ ಮೋಟಾರ್ಸ್, ವಿಜಯಲಕ್ಷ್ಮೀ ಮೋಟಾರ್ಸ್, ರೇವಣ್ಣ ಸಿದ್ದೇಶ್ವರ ಟ್ರಾವಲ್ಸ್, ಎಸ್.ಎಲ್.ಎನ್.ಎಸ್ ಟ್ರಾವಲ್ಸ್, ಲಕ್ಷ್ಮೀ ಮೋಟಾರ್ಸ್, ರಾಜಕುಮಾರ ಮೋಟಾರ್ಸ್ ಸರ್ವೀಸ್, ವಿನಾಯಕ ಮೋಟಾರ್ಸ್ ಮತ್ತು ವೆಂಕಟೇಶ್ವರ ಮೋಟಾರ್ಸ್ ಕಂಪನಿಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿನ ಪ್ರಮುಖ ಖಾಸಗಿ ಬಸ್ ಕಂಪನಿಗಳಾಗಿವೆ. ಸರ್ಕಾರಿ ಬಸ್ ಸೇವೆಗಿಂತ ಕಡಿಮೆ ದರದಲ್ಲಿ ಜನರಿಗೆ ಉತ್ತಮವಾದ ಸೇವೆಯನ್ನು ನೀಡುತ್ತಿವೆ. ಜಿಲ್ಲೆಯ ಗ್ರಾಮಾಂತರ ಪ್ರದೇಶದಲ್ಲಿಯೂ ತಮ್ಮ ಸೇವೆಯನ್ನು ಒದಗಿಸುತ್ತಿವೆ.

ನೆಲಮಂಗಲ, ದೊಡ್ಡಬಳ್ಳಾಪುರ, ದೇವನಹಳ್ಳಿ ಮತ್ತು ಹೊಸಕೋಟೆ ತಾಲ್ಲೂಕುಗಳಲ್ಲಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದಿಂದ ನೆಲಮಂಗಲ ತಾಲ್ಲೂಕಿನಲ್ಲಿ 2009ರಲ್ಲಿ ನೂತನ ನಗರ ಸಾರಿಗೆ ಬಸ್ ಸೇವೆಯು ಪ್ರಾರಂಭವಾಗಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸುತ್ತಲಿನ ಪ್ರಮುಖ ಸ್ಥಳಗಳಲ್ಲಿ ಸಂಚರಿಸಲಿದ್ದು, ಪ್ರವಾಸಿಗರು ನಗರ ವೀಕ್ಷಣೆಗೆ ಮತ್ತು ಸುತ್ತಮುತ್ತಲಿನ ಪ್ರವಾಸಿ ತಾಣಗಳನ್ನು ನೋಡಲು ಅನುಕೂಲವಾಗಿದೆ. ಹೀಗೆ ಜಿಲ್ಲೆಯಲ್ಲಿ ಆಧುನಿಕ ಮಾದರಿಯ

ಸಾರಿಗೆ ವ್ಯವಸ್ಥೆಯು ಪ್ರವಾಸಿಗರಿಗೂ ಉತ್ತಮ ಸೇವೆಯನ್ನು ನೀಡುತ್ತಿವೆ. ಈ ಜಿಲ್ಲೆಯ ತಾಲ್ಲೂಕು ಮತ್ತು ಜಿಲ್ಲಾ ಕೇಂದ್ರಗಳಲ್ಲಿ ಆಧುನೀಕರಣ ಮಾಡಿರುವ ಹೊಸ ಬಸ್ ನಿಲ್ದಾಣಗಳಿದ್ದು, ಸಾರ್ವಜನಿಕರಿಗೆ ಮತ್ತು ಪ್ರವಾಸಿಗರಿಗೆ ಅತ್ಯುತ್ತಮ ಸೇವೆಯನ್ನು ನೀಡುತ್ತಿವೆ.

## ರೈಲು ಸಾರಿಗೆ

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಉತ್ತಮ ಸಾರಿಗೆಯನ್ನು ಕಲ್ಪಿಸುವ ನಿಟ್ಟಿನಲ್ಲಿ ರೈಲು ಸಾರಿಗೆ ಬಹು ಮುಖ್ಯವಾದ ಪಾತ್ರವನ್ನು ವಹಿಸುತ್ತಿದೆ. ಜಿಲ್ಲೆಯ ನೆಲಮಂಗಲ, ದೇವನಹಳ್ಳಿ, ಹೊಸಕೋಟೆ ಮತ್ತು ದೊಡ್ಡಬಳ್ಳಾಪುರ ತಾಲ್ಲೂಕುಗಳಲ್ಲಿ ಒಟ್ಟು 20 ರೈಲ್ವೆ ನಿಲ್ದಾಣಗಳಿವೆ[13].

ಕರ್ನಾಟಕ ರಾಜ್ಯದಲ್ಲಿನ 176 ತಾಲ್ಲೂಕುಗಳಲ್ಲಿ 95 ತಾಲ್ಲೂಕುಗಳು ರೈಲು ಸಂಪರ್ಕವನ್ನು ಹೊಂದಿವೆ. ಹಾಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆ 4 ತಾಲ್ಲೂಕುಗಳಲ್ಲೂ ರೈಲ್ವೆ ಸೇವೆಯನ್ನು ಹೊಂದಿದೆ[14]. ಕಡಿಮೆ ವೆಚ್ಚದ ರೈಲ್ವೆ ಸಾರಿಗೆಯು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸರ್ವಾಂಗೀಣ ಅಭಿವೃದ್ಧಿಯ ಜೊತೆ ಜೊತೆಗೆ ಪ್ರವಾಸೋದ್ಯಮ ಕ್ಷೇತ್ರವು ಬೆಳವಣಿಗೆ ಸಾಧಿಸಲು ಸಹಾಯಕವಾಗಿದೆ. ರೈಲು ಸಾರಿಗೆಯಲ್ಲಿ ಮೈಸೂರು ಕಮಿಷನರ್ ಲೂಯಿ ಬೆಂಥಾಮ್ ಬೌರಿಂಗ್ ಆಡಳಿತದ ಕಾಲದಲ್ಲಿ ನಿರ್ಮಾಣ ಮಾಡಲ್ಪಟ್ಟ ಮದ್ರಾಸ್–ಬೆಂಗಳೂರು ರೈಲು ಮಾರ್ಗವು ಪ್ರಮುಖವಾಗುತ್ತಿವೆ.

ಬೆಂಗಳೂರು, ಹೊಸಕೋಟೆ, ದೇವನಹಳ್ಳಿ, ಚಿಕ್ಕಬಳ್ಳಾಪುರ, ಕೋಲಾರ ಮತ್ತು ಬಂಗಾರ ಪೇಟೆಗಳನ್ನು ಸಂಪರ್ಕಿಸುವ ರೈಲು ಮಾರ್ಗವು ಗೇಜ್ ಪರಿವರ್ತನೆ ಕಾರ್ಯ ಪೂರ್ಣಗೊಂಡು 2013 ನವೆಂಬರ್ 8 ರಂದು ಪ್ರಾರಂಭವಾಯಿತು.[15] ಜಿಲ್ಲೆಯಲ್ಲಿನೆಲಮಂಗಲ ಮತ್ತು ದೊಡ್ಡಬಳ್ಳಾಪುರ, ಹೊಸಕೋಟೆ, ದೇವನಹಳ್ಳಿ ತಾಲ್ಲೂಕುಗಳು ರೈಲು ಸೇವೆಯನ್ನು ಪಡೆಯಲು ಸಹಾಯಕವಾಗಿದೆ. ಅಲ್ಲದೇ ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಪ್ರವಾಸಿಗರು ಬೇಟಿ ನೀಡಲು ಅನುಕೂಲವಾಗಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಶಿವಗಂಗೆ, ನೆಲಮಂಗಲ, ಬಸವನಹಳ್ಳಿ, ರೈಲ್ವೆ ಗೋಲಹಳ್ಳಿ, ಮಾಕಳಿ ದುರ್ಗ, ಘಾಟಿ ಸುಬ್ರಮಣ್ಯ, ಹಳೇ ನಿಜಗಲ್, ದೇವನಹಳ್ಳಿ, ಹೊಸಕೋಟೆ ನಗರಗಳ ಪ್ರವಾಸಿ ತಾಣಗಳನ್ನು ಸಂದರ್ಶನ ಮಾಡುವ ಪ್ರವಾಸಿಗರಿಗೆ ಕಡಿಮೆ ವೆಚ್ಚದಲ್ಲಿ ತಮ್ಮ ಪ್ರವಾಸವನ್ನು ಮಾಡಲು ಸಹಾಯಕವಾಗಿದೆ.

ವೈಟ್ ಪೀಲ್ಡ್, ಹೊಸಕೋಟೆ ಮತ್ತು ಕೋಲಾರ ಮುಳಬಾಗಿಲನ್ನು ಸಂಪರ್ಕಿಸುವ 52 ಕಿ.ಮೀ ದೂರದ ರೈಲು ಮಾರ್ಗದ ಮಾಪನ ಕಾರ್ಯವು ಮುಗಿದಿದೆ. 2009 ರಲ್ಲಿ ರೈಲು ಹಳಿಯನ್ನು ಹಾಕಲು ಕೇಂದ್ರದ ರೈಲ್ವೆ ಮಂಡಳಿಗೆ 350 ಕೋಟಿ ರೂಪಾಯಿಗಳ ರೈಲ್ವೆ ಅಳಿಯನ್ನು ಪೂರ್ಣಗೊಳಿಸಲಾಗಿದೆ.[16] ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಬೆಂಗಳೂರು ರಾಜಧಾನಿಯಿಂದ ನೆಲಮಂಗಲ ತಾಲ್ಲೂಕು ಮುಖಾಂತರ ಹಾಸನ ಜಿಲ್ಲೆಯ ನಡುವೆ ರೈಲು ಸಂಪರ್ಕವನ್ನು ಕಲ್ಪಿಸುವಂತಹ ಮತ್ತೊಂದು ರೈಲು ಮಾರ್ಗವು ಪೂರ್ಣಗೊಂಡಿವೆ. ಈ ಮಾರ್ಗವು 172 ಕಿ.ಮೀ ಉದ್ದವನ್ನು ಹೊಂದಿದೆ,[17] ಜಿಲ್ಲೆಯ ಪ್ರವಾಸೋದ್ಯಮ ಬೆಳವಣಿಗೆಗೆ ಪೂರಕವಾಗಿದೆ. 4 ತಾಲ್ಲೂಕುಗಳಲ್ಲಿ ರೈಲ್ವೆ ಸಂಪರ್ಕ ಒಳಗೊಂಡಿದ್ದು, ಉತ್ತಮ ಸಾರಿಗೆ ಸಂಪರ್ಕದಿಂದಾಗಿ ಪ್ರವಾಸಿ ತಾಣಗಳು ಅಭಿವೃದ್ದಿಗೊಂಡು ಜಿಲ್ಲೆಯ ಆರ್ಥಿಕ ಪ್ರಗತಿಗೆ ಕಾರಣವಾಗಿವೆ.

### ವಾಯು ಸಾರಿಗೆ

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವಿಮಾನ ನಿಲ್ದಾಣವು ದೇವನಹಳ್ಳಿ ಬೆಂಗಳೂರಿನ ವಿಮಾನ ನಿಲ್ದಾಣಕ್ಕೆ ಪರ್ಯಾಯವಾಗಿ ಇದನ್ನು ನಿರ್ಮಾಣ ಮಾಡಲಾಗಿದೆ. ಚಾಲಕ ರಹಿತವಾದ ವಿಮಾನಗಳನ್ನು ಹಾರಾಟ ನಡೆಸಲು ಬಳಸಿಕೊಳ್ಳಲಾಗುತ್ತಿದೆ. ಅಲ್ಲದೇ ಜಿಲ್ಲೆಗೆ ಆಗಮಿಸುವ ಗಣ್ಯರ ವಿಮಾನಗಳನ್ನು ನಿಲ್ಲಿಸಲು ಇದನ್ನು ಬಳಸಲಾಗುತ್ತಿದೆ.

ಬೆಂಗಳೂರು ರಾಜಧಾನಿಯಿಂದ ಕೇವಲ 45 ಕಿ,ಮೀ. ದೂರದಲ್ಲಿ ದೇವನಹಳ್ಳಿಯ ಕೆಂಪೇಗೌಡ ಅಂತರ ರಾಷ್ಟ್ರೀಯ ವಿಮಾನ ನಿಲ್ದಾಣವಿದ್ದು[18], ಜಿಲ್ಲೆಯ ಬೆಳವಣಿಗೆಗೆ ಸಹಕಾರಿಯಾಗಿದೆ. ಮುಖ್ಯವಾಗಿ ಭಾರತದ ಮತ್ತು ವಿದೇಶಗಳಿಂದ ಆಗಮಿಸುವ ಪ್ರವಾಸಿಗರು ಬೆಂಗಳೂರು ಜಿಲ್ಲೆಗೆ ಪ್ರವಾಸ ಕೈಗೊಳ್ಳುವ ಅನುಕೂಲವನ್ನು ಕಲ್ಪಿಸಿದೆ. ಜಿಲ್ಲೆಯ ಅಭಿವೃದ್ದಿಗೆ ಅನುಕೂಲವಾಗಿದೆ. ಹೀಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯು ರಸ್ತೆ, ರೈಲು ಸಾರಿಗೆ, ವಾಯು ಸಾರಿಗೆ ಸಂಪರ್ಕವನ್ನು ಹೊಂದಿದ್ದು, ಪ್ರವಾಸೋದ್ಯಮ ಕ್ಷೇತ್ರದಲ್ಲಿ ಅಭಿವೃದ್ದಿಯನ್ನು ಸಾಧಿಸಲು ಸಹಕಾರಿಯಾಗಿವೆ.

## 4.3 ಮೂಲಭೂತ ಸೌಕರ್ಯಗಳು

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಮೂಲಭೂತ ಸೌಕರ್ಯಗಳು ಪ್ರಮುಖವಾಗಿರುತ್ತದೆ. ಏಕೆಂದರೆ ಗ್ರಾಮಾಂತರ ಪ್ರದೇಶಗಳಲ್ಲಿ ಪ್ರವಾಸವನ್ನೆ ಕೈಗೊಳ್ಳಬೇಕಾದ್ದರೆ ಮೂಲಭೂತ ಸೌಕರ್ಯಗಳು ಪ್ರಮುಖವಾಗಿರುತ್ತದೆ. ಗ್ರಾಮಾಂತರ ಜಿಲ್ಲೆಯಲ್ಲಿ ಉತ್ತಮ ಸಾರಿಗೆ

ಸಂಪರ್ಕ ಅವರೇ ರಾಷ್ಟರೀಯ ಹೆದ್ದಾರಿಗಳು ರಾಜ್ಯ ಹೆದ್ದಾರಿಗಳು, ಜಿಲ್ಲಾ ಹೆದ್ದಾರಿಗಳು, ತಾಲ್ಲೂಕು ಹೆದ್ದಾರಿಗಳು ಉತ್ತಮವಾಗಿ ಅಭಿವೃದ್ದಿಯನ್ನೆ ಏರ್ಪಡಿಸಿರುತ್ತಾರೆ. ವಾಹನಗಳು ಬಸ್ಸುಗಳು, ಕಾರುಗಳು ಸ್ವಂತ ವಾಹನಗಳು ಬಳಸಿಕೊಂಡು ಪ್ರವಾಸಿಗರು ಬರುತ್ತಾರೆ.

ಹೆದ್ದಾರಿಯ ಪಕ್ಕದಲ್ಲಿ ಹೋಟೆಲ್‌ಗಳು, ರೆಸ್ಟೋರೆಂಟ್‌ಗಳು ಸ್ಥಾಪನೆಗೊಂಡಿವೆ. ಅದರಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಎಲ್ಲಾ ತಾಲ್ಲೂಕಿನಲ್ಲಿ ರೈಲು ಸಾರಿಗೆ ವ್ಯವಸ್ಥೆ ಮಾಡಲಾಗಿದೆ. ಇದ್ದರಿಂದ ಉತ್ತಮ ಆದಾಯವನ್ನು ಸರ್ಕಾರಕ್ಕೆ ಬರುತ್ತಿದೆ. ಮತ್ತು ಅಂತರಾಷ್ಟ್ರೀಯ ವಿಮಾನ ನಿಲ್ದಾಣ ಇದೇ ಜಿಲ್ಲೆಯಲ್ಲಿ ಇರುತ್ತದೆ. ವಿಮಾನ ನಿಲ್ದಾಣ ಇದೇ ಜಿಲ್ಲೆಯಲ್ಲಿ ಇರುತ್ತದೆ. ವಿಮಾನ ನಿಲ್ದಾಣ ಪಕ್ಕದಲ್ಲಿ ಪ್ರವಾಸಿಗರಿಗೆ ಬರುವಂತವರಿಗೆ ವಿಶ್ರಾಂತಿ ಗೃಹಗಳನ್ನೆ ಆಹಾರ ವ್ಯವಸ್ಥೆಯನ್ನ ಹೋಟೆಲ್‌ಗಳು ಮೂಲಕ ಸೌಲಭ್ಯವನ್ನೆ ಮಾಡಲಾಗುತ್ತದೆ. ಅವರಿಗೆ ವಿವಿಧ ದರ್ಜೆಯ ಹೋಟೆಲ್‌ಗಳು ವಿಮಾನ ನಿಲ್ದಾಣ ಪಕ್ಕದಲ್ಲಿ ವಿಶ್ರಾಂತಿ ಧಾಮಗಳು ಸೌಲಭ್ಯಗಳು ಇರುತ್ತದೆ.

## 4.4 ಸಂಪರ್ಕ ವ್ಯವಸ್ಥೆ

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಅಂಚೆ ಮತ್ತು ತಂತಿ ಇಲಾಖೆಯು ಕಾರ್ಯನಿರ್ವಹಣೆ ಮಾಡುತ್ತಿದೆ. ಹಿಂದಿನ ರಾಜ ಮನೆತನಗಳ ಆಡಳಿತದ ಕಾಲದಲ್ಲಿಯೂ ಮಾಹಿತಿಯನ್ನು ರವಾನೆ ಮಾಡಲು ವ್ಯಕ್ತಿಗಳನ್ನು ಮತ್ತು ಪ್ರಾಣಿಗಳನ್ನು ಬಳಸಿಕೊಳ್ಳಲಾಗುತ್ತಿತು. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಗಣಿ ಉದ್ಯಮವು ಪ್ರಾರಂಭವಾದ ನಂತರದಲ್ಲಿ ಆಧುನಿಕ ಬ್ರಿಟಿಷ್ ಮಾದರಿಯ ಅಂಚೆ ಕಛೇರಿಗಳು ಪ್ರಾರಂಭಗೊಂಡವು. ಬೆಂಗಳೂರು ಗ್ರಾಮಾಂತರ ಮತ್ತು 4 ತಾಲ್ಲೂಕುಗಳಲ್ಲಿ 143 ಅಂಚೆ ಕಛೇರಿಗಳಿದ್ದು,[19] ವಿವಿಧ ಬಗೆಯ ಅಂಚೆ ಮತ್ತು ತಂತಿ ಸೇವೆಗಳನ್ನು ಒದಗಿಸುತ್ತಿವೆ.

ಇವುಗಳು ಗ್ರಾಮಗಳಲ್ಲಿ ಮತ್ತು ತಾಲ್ಲೂಕುಗಳಲ್ಲಿ ಅಂಚೆ ಮತ್ತು ಉಪ ಅಂಚೆ ಕಛೇರಿಗಳು ಕಾರ್ಯ ನಿರ್ವಹಿಸುತ್ತಿವೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ 143 ಗ್ರಾಮಾಂತರ ಅಂಚೆ ಕಛೇರಿಗಳು,ನೆಲಮಂಗಲ ತಾಲ್ಲೂಕುನಲ್ಲಿ 42, ಹೊಸಕೋಟೆ ತಾಲ್ಲೂಕಿನಲ್ಲಿ 35, ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ 39, ದೇವನಹಳ್ಳಿ ತಾಲ್ಲೂಕಿನಲ್ಲಿ 25 ಅಂಚೆ ಕಛೇರಿಗಳಿದ್ದು ಉತ್ತಮ ಸೇವೆಯನ್ನು ಕೊಡುತ್ತಿವೆ.[20] ಸರ್ಕಾರಿ ಅಂಚೆ ಸೇವೆಯಲ್ಲದೇ ಖಾಸಗಿ ವಲಯದ ಡಿ.ಟಿ.ಟಿ.ಸಿ ಮತ್ತು ಪ್ರೊಫೆಷನಲ್ ಕೊರಿಯರ್ ಸೇವೆ ಕಂಪನಿಗಳಲ್ಲದೇ ಇತರ ಕೊರಿಯರ್ ಕಂಪನಿಗಳು ಅಂಚೆ ಸೇವೆಯನ್ನು ಒದಗಿಸುತ್ತಿವೆ.

ಜಿಲ್ಲೆಯಲ್ಲಿ ಪ್ರವಾಸ ಕೈಗೊಳ್ಳುವ ಪ್ರವಾಸಿಗರಿಗೆ ಮತ್ತು ಪ್ರವಾಸೋದ್ಯಮ ಕ್ಷೇತ್ರಕ್ಕೆ ಸಹಾಯಕಾರಿಯಾಗಿರುವ ಹಲವು ಸಂಪರ್ಕ ಕಂಪನಿಗಳು ತಮ್ಮ ಸೇವೆಯನ್ನು ನೀಡುತ್ತಿವೆ. ಗ್ರಾಮಾಂತರ ಮತ್ತು ನಗರ ಪ್ರದೇಶಗಳಲ್ಲಿ ಉತ್ತಮ ಸಂಪರ್ಕ ಸೇವೆಯನ್ನು ನೀಡುತ್ತಾ ದೇಶದಲ್ಲೇ ಮುಂಚೂಣಿಯಲ್ಲಿರುವ ಸಂಪರ್ಕ ಕಂಪನಿಯಾದ ಭಾರತ್ ಸಂಚಾರ್ ನಿಗಮ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಉತ್ತಮ ಸೇವೆಯನ್ನು ನೀಡುತ್ತಿವೆ. ಸರ್ಕಾರಿ ಸಂಸ್ಥೆಯಾಗಿರುವ ಬಿ.ಎಸ್.ಎನ್.ಎಲ್ ಜಿಲ್ಲೆಯ ವಿವಿಧ ಪ್ರದೇಶಗಳಲ್ಲಿ ಒಟ್ಟು 04 ತಂತಿ ಕಛೇರಿಗಳು ಹೊಂದಿದ್ದು ಮತ್ತು 42 ದೂರವಾಣಿ ವಿನಿಮಯ ಕೇಂದ್ರಗಳ ಮೂಲಕ 6251 ದೂರವಾಣಿ ಸಂಪರ್ಕಗಳನ್ನು ಕಲ್ಪಿಸಿದೆ.[21] ಇದರೊಂದಿಗೆ ಉತ್ತಮ ರೀತಿಯಲ್ಲಿ ನಿಸ್ತಂತು ಮತ್ತು ಅಂತರ್ ಜಾಲ ಸಂಪರ್ಕ (3ಜಿ ಮತ್ತು 4ಜಿ) ಸೇವೆಯನ್ನು ನೀಡುತ್ತಿದೆ.

ಪ್ರವಾಸಿಗರಿಗೆ ಅನುಕೂಲವಾಗುವ ನಿಟ್ಟಿನಲ್ಲಿ ಗ್ರಾಮಗಳಲ್ಲಿ ಸಮುದಾಯ ದೂರವಾಣಿ ಸೇವೆಯನ್ನು ಒದಗಿಸುತ್ತಿವೆ. ಇದಲ್ಲದೇ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ದೂರವಾಣಿ, ನಿಸ್ತಂತು ಅಂತರ್ ಜಾಲ ಕ್ಷೇತ್ರದಲ್ಲಿ ಖಾಸಗಿ ವಲಯದ ಏರ್‌ಟೆಲ್, ಜಿಯೋ, ಐಡಿಯಾ ಮತ್ತು ಇತರ ಕಂಪನಿಗಳು ಸಂಪರ್ಕ ಸೇವೆಯನ್ನು ಒದಗಿಸುತ್ತಿವೆ. ನಗರಗಳಲ್ಲದೇ ಗ್ರಾಮೀಣ ಪ್ರದೇಶದಲ್ಲಿ ಏರ್‌ಟೆಲ್ ಮೊಬೈಲ್ ಕಂಪನಿಯು ತನ್ನ ಉತ್ತಮ ಸೇವೆಯನ್ನು ನೀಡುವ ಮೂಲಕ ಮಹತ್ವದ ಕಂಪನಿಯಾಗಿದೆ.

**ಸೇವೆಗಳು**

ಪ್ರವಾಸಕ್ಕೆ ಬೇಕಾಗಿರುವುದು ಪ್ರಯಾಣದ ಏಜೆಂಟರು ಪ್ರವಾಸದ ಮಾರ್ಗದರ್ಶಕರು, ಸ್ಥಳೀಕರ ಮಾಹಿತಿ ಮತ್ತು ಸ್ಥಳೀಯ ಬಗ್ಗೆ ಮಾಹಿತಿಯನ್ನು ತಿಳಿಸಿದ್ದರೆ ಪ್ರವಾಸವನ್ನೆ ಮಾಡಲು ಬಹಳಷ್ಟೆ ಸಹಕಾರಿಯಾಗುತ್ತಿದೆ.

## 4.5 ಪ್ರವಾಸೋಧ್ಯಮದಲ್ಲಿ ಬೃಹತ್ ಪ್ರಮಾಣದ ಕೈಗಾರಿಕೆಗಳ ಪಾತ್ರ

ಕರ್ನಾಟಕ ರಾಜ್ಯದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಆರ್ಥಿಕ ಪ್ರವಾಸೋದ್ಯಮದ ಲಕ್ಷಣಗಳನ್ನು ಒಳಗೊಂಡಿವೆ. ಪ್ರಾಚೀನ ಕಾಲದಿಂದಲೂ ಕೇವಲ ಖನಿಜಗಳಿಗೆ ಅಲ್ಲದೇ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕಂಬಳಿಯು ಅಂತರ ರಾಷ್ಟ್ರೀಯ ಪ್ರಸಿದ್ದಿಯನ್ನು ಪಡೆದಿಕೊಂಡಿತ್ತು. ಹಿಂದೆ ಪ್ರಾಮುಖ್ಯತೆ ಪಡೆದಿದ್ದ ಚಿನ್ನದ ಎಣ್ಣೆ ಉತ್ಪಾದನೆ, ಸಿಗರೇಟ್ ಉದ್ಯಮ, ಸ್ಟೀಲ್, ಹತ್ತಿ ಬಟ್ಟೆ, ಕಂಬಳಿ, ಉಪ್ಪಿನ ಉದ್ಯಮ, ಬಳೆಗಳ ಉದ್ಯಮ, ಕಲ್ಲು ಸಕ್ಕರೆ ಮತ್ತು ಸಕ್ಕರೆಗಳು ಹಲವಾರು ವರ್ಷಗಳ ಕಾಲ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ

ಪ್ರಾಮುಖ್ಯತೆಯನ್ನು ಪಡೆದಿದ್ದವು,. ವಿವಿಧ ಕಾರಣಗಳಿಂದ ಮತ್ತು ಕಾಲ ಬದಲಾವಣೆಯಿಂದಾಗಿ ಮೇಲಿನ ಕೈಗಾರಿಕೆಗಳು ತಮ್ಮ ಅಸ್ಥಿತ್ವವನ್ನು ಕಳೆದುಕೊಂಡವು. ಉಣ್ಣೆಯ ಕೊರತೆಯಿಂದಾಗಿ ಬಹು ಕಾಲ ಅಸ್ಥಿತ್ವದಲ್ಲಿದ್ದ ಕಂಬಳಿ ಉದ್ಯಮವು ಕಣ್ಮರೆಯಾಯಿತು.

ಅಂತರರಾಷ್ಟ್ರೀಯ ಮಟ್ಟದ ವೀಕ್ಷಣಾ ತಂಡಗಳನ್ನು ಮತ್ತು ಸಂದರ್ಶಕರು ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಭೇಟಿ ನೀಡಿದ್ದಾರೆ. ಸ್ಥಳೀಯ ಆರ್ಥಿಕ ಪ್ರಗತಿಯೊಂದಿಗೆ ರಾಜ್ಯದ ಆರ್ಥಿಕ ಪ್ರಗತಿಗೆ ಕಾರಣವಾಗಿದ್ದವು. ಸಾವಿರಾರು ಸಂಖ್ಯೆಯ ಕುಟುಂಬಗಳಿಗೆ ಉದ್ಯೋಗವನ್ನು ಮತ್ತು ವರಮಾನವನ್ನು ನೀಡಿದ್ದವು. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ನಗರವು ಅಸ್ಥಿತ್ವಕ್ಕೆ ಬರಲು ಮತ್ತು ಬೆಳವಣಿಗೆಯಾಗಲು ಸಹ ಬೆಂಗಳೂರು ಗ್ರಾಮಾಂತರ ಗಣಿಗಳು ಕಾರಣವಾಗಿವೆ.

ಪ್ರವಾಸೋದ್ಯಮವು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ, ವೈದ್ಯಕೀಯ, ವಿಜ್ಞಾನ, ತಂತ್ರಜ್ಞಾನ ಮತ್ತು ಸಾರಿಗೆ–ಸಂಪರ್ಕ ಕ್ಷೇತ್ರಗಳು ಅಭಿವೃದ್ಧಿಯಾಗಲು ಮಹತ್ವದ ಕೊಡುಗೆಯನ್ನು ನೀಡಿವೆ. ನೇರವಾಗಿ ಮತ್ತು ಪರೋಕ್ಷವಾಗಿ ಜಿಲ್ಲೆಯ ಪ್ರವಾಸೋದ್ಯಮ ಕ್ಷೇತ್ರದೊಂದಿಗೆ ವಸತಿ, ಆರೋಗ್ಯ ಮತ್ತು ಇನ್ನಿತರ ಕ್ಷೇತ್ರಗಳಿಗೆ ಉತ್ತೇಜನ ದೊರಕಿತ್ತು. ಇಂದಿಗೂ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪ್ರವಾಸಿ ಪ್ರದೇಶದಲ್ಲಿರುವ ಹಲವು ಪಾರಂಪರಿಕ ಕಟ್ಟಡಗಳು ಮತ್ತು ಯಂತ್ರೋಪಕರಣಗಳು ಮತ್ತು ಇಲ್ಲಿನ ವಿಭಿನ್ನ ಸಂಸ್ಕೃತಿಯು ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಪ್ರವಾಸಿಗರನ್ನು ಆರ್ಕಷಣೆ ಮಾಡುತ್ತಿದೆ.

ಕೆಲವು ಬೃಹತ್ ಪ್ರಮಾಣದ ಉದ್ಯಮಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿದ್ದು, ರಾಜ್ಯವಲ್ಲದೇ ವಿದೇಶಗಳಿಗೂ ತನ್ನ ಉತ್ಪನ್ನಗಳನ್ನು ತಯಾರುಮಾಡಿ ಮಾರಾಟ ಮಾಡುತ್ತಿವೆ. ಜಿಲ್ಲೆಯ ಆರ್ಥಿಕ ಪ್ರಗತಿಯೊಂದಿಗೆ ಜನರಿಗೆ ಉದ್ಯೋಗವನ್ನು ಮತ್ತು ಇತರ ಉದ್ಯಮಗಳ ಬೆಳವಣಿಗೆಗೆ ಸಹಾಯಕವಾಗಿವೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕೇಂದ್ರ ಸರ್ಕಾರದ ಅದೀನದಲ್ಲಿ ಕಾರ್ಯನಿರ್ವಹಣೆ ಮಾಡುತ್ತಿರುವ ಪ್ರಮುಖ ಕೈಗಾರಿಕೆಯಾಗಿದೆ. (ಛಾಯಾ ಚಿತ್ರ – 24)

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲದೇ ಕರ್ನಾಟಕ, ಆಂಧ್ರ ಮತ್ತು ತಮಿಳುನಾಡು ಜನರಿಗೂ ಸಹ ಉದ್ಯೋಗವನ್ನು ಕಲ್ಪಿಸಿದೆ. ಜಿಂದಾಲ್ ಕಂಪನಿ ಇಂದು ಬೃಹತ್ ಪ್ರಮಾಣದ ವಾಣಿಜ್ಯ ಉದ್ಧೇಶಗಳಿಗೆ ಮತ್ತು ಕಟ್ಟಡ ನಿರ್ಮಾಣಕ್ಕಾಗಿ ಮಣ್ಣನ್ನು ಸಾಗಿಸುವಂತಹ ಯಂತ್ರಗಳನ್ನು ಇಲ್ಲಿ ಉತ್ಪಾದನೆ ಮಾಡುತ್ತಿದೆ. ಹೆಚ್ಚು ಪ್ರಮಾಣದ ಮಣ್ಣು ಸಾಗಿಸುವ, ಕ್ರಾಲರ್ ಟ್ರಾಕ್ಟರ್, ಬುಲ್‌ಡೋಜರ್, ಡಂಪರ್ ಮತ್ತು ಎ.ಆರ್.ವಿ. ಟಾಟ್ರ ಯಂತ್ರಗಳನ್ನು ಉತ್ಪಾದಿಸುತ್ತಿದ್ದು ಅಂತರಾಷ್ಟ್ರೀಯ ಮಟ್ಟದಲ್ಲಿ ಮಾರುಕಟ್ಟೆಯನ್ನು ಹೊಂದಿದೆ. ವಿವಿಧ ದೇಶಗಳಿಗೆ ತನ್ನ

ಉತ್ಪನ್ನಗಳನ್ನು ಮಾರಾಟ ಮಾಡಿ ವಿದೇಶಿ ಮತ್ತು ವೀಕ್ಷಕರು ಈ ಕೈಗಾರಿಕೆಗೆ ಪ್ರವಾಸವನ್ನು ಕೈಗೊಳ್ಳುತ್ತಿದ್ದಾರೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಆರ್ಥಿಕ ಪ್ರಗತಿಗೆ ಮಹತ್ವ ಕೊಡುಗೆಯನ್ನು ನೀಡುತ್ತಿದೆ. ಈ ಕೈಗಾರಿಕೆಯಿಂದಾಗಿ ಜಿಲ್ಲೆಯಲ್ಲಿ ಉತ್ತಮವಾದ ರಸ್ತೆಗಳು, ವಸತಿ ಸೌಲಭ್ಯಗಳು, ಸಂಪರ್ಕ ವ್ಯವಸ್ಥೆ, ಇತರ ಅವಲಂಬಿತ ಉದ್ಯಮಗಳು ಬೆಳವಣಿಗೆಯಾಗಲು ಸಹಾಯಕಾರಿಯಾಗಿದೆ. ಇದರ ಉತ್ಪನ್ನಗಳನ್ನು ವೀಕ್ಷಣೆ ಮಾಡಲು ವಿದೇಶಿ ಪ್ರವಾಸಿಗರನ್ನು ಆಕರ್ಷಣೆ ಮಾಡುತ್ತಿದೆ. ಈನಿಟ್ಟಿನಲ್ಲಿ ಜಿಲ್ಲೆಯ ವಿಭಿನ್ನ ಉದ್ಯಮಗಳು ಮತ್ತು ಇದರ ಬಹುರೂಪಿ ಪರಿಣಾಮಗಳಿಂದ ಹಲವು ಸಹಾಯಕ ಸೇವೆಗಳ ಕೈಗಾರಿಕೆಗಳು ಅಭಿವೃದ್ಧಿಯಾಗಿವೆ. ಸುಮಾರು ಆರು ಸಾವಿರಕ್ಕಿಂತ ಹೆಚ್ಚು ಉದ್ಯೋಗಿಗಳಿಗೆ ಜೀವನವನ್ನು ಸಾಗಿಸಲು ಮತ್ತು ತಮ್ಮ ಕುಟುಂಬಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ನೆಲೆಸಲು ವರಮಾನವನ್ನು ನೀಡುತ್ತಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಉತ್ತಮ ಜೀವನ ಮಟ್ಟ ಸಾಧನೆಯು ಉತ್ತಮವಾಗಿದೆ. ತಮ್ಮ ವರಮಾನದಿಂದ ಇತರ ಆರ್ಥಿಕ ಚಟುವಟಿಕೆಗಳನ್ನು ನಡೆಸುವುದಕ್ಕೆ ಪ್ರೇರೆಪಣೆ ನೀಡುವುದರೊಂದಿಗೆ ಜಿಲ್ಲೆಯ ಸಮಗ್ರ ಆರ್ಥಿಕ ಅಭಿವೃದ್ದಿಗೆ ಪೂರಕವಾಗಿದೆ. ಜಿಲ್ಲೆಯ ಆರ್ಥಿಕ, ಸಾಂಸ್ಕೃತಿಕ ಮತ್ತು ಮನರಂಜನಾ ಪ್ರವಾಸೋದ್ಯಮ ಬೆಳವಣಿಗೆಯಲ್ಲಿ ಮುಖ್ಯವಾದ ಪಾತ್ರವನ್ನು ವಹಿಸುತ್ತದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಆರ್ಥಿಕ ಪ್ರವಾಸೋದ್ಯಮ ಬೆಳೆವಣಿಗೆಯಲ್ಲಿ ಮಹತ್ವದ ಹೆಜ್ಜೆಯೆಂದರೆ 2012ರಲ್ಲಿ ಬೆಂಗಳೂರಿನಲ್ಲಿ ಆಯೋಜಿಸಲಾಗಿದ್ದ ಜಾಗತಿಕ ಬಂಡವಾಳ ಹೂಡಿಕೆ ಸಮಾವೇಶದಲ್ಲಿ ಬೆಂಗಳೂರು ಜಿಲ್ಲೆಯಲ್ಲಿ ದ್ವಿಚಕ್ರ ವಾಹನಗಳನ್ನು ಉತ್ಪಾದನೆ ಮಾಡಲು ಜಿಂದಾಲ್ ಪ್ರಸಿದ್ದ ಕಂಪನಿ, ಹೋಂಡಾ ಕಂಪನಿಯು ಪ್ರತಿ ವರ್ಷವು ಸಾವಿರಾರು ದ್ವಿಚಕ್ರ ವಾಹನಗಳನ್ನು ಉತ್ಪಾದನೆ ಮಾಡುವ ಮೂಲಕ ಸ್ಥಳೀಯ ಜನರಿಗೆ ಉದ್ಯೋಗವನ್ನು ನೀಡುವ ಗುರಿಯನ್ನು ಹೊಂದಿದೆ.

ಬೆಂಗಳೂರು ಮತ್ತು ತುಮಕೂರು ರಸ್ತೆಯಲ್ಲಿರುವ ಸೋಂಪುರ ಕೈಗಾರಿಕಾ ಪ್ರದೇಶದಲ್ಲಿ ನಿರ್ಮಾಣಗೊಳ್ಳುತ್ತಿರುವ ಈ ಕೈಗಾರಿಕೆಯಲ್ಲಿ 110 ಸಿ.ಸಿ ಮತ್ತು 250 ಸಿ.ಸಿ ಮಾದರಿಯ ಒಟ್ಟು ಆರು ಮೋಟಾರ್ ಬೈಕ್‌ಗಳು 100 ಸಿ.ಸಿ.ಯ ಮೂರು ವಿಧದ ಮೋಟಾರ್ ಬೈಕ್ ಗಳನ್ನು ಉತ್ಪಾದನೆ ಮಾಡುತ್ತಿದೆ.[22] 2010 ರಲ್ಲಿ ಉತ್ಪಾದನೆಯನ್ನು ಪ್ರಾರಂಭಿಸಿದ್ದು, ಹಲವು ತಂತ್ರಜ್ಞರು ಮತ್ತು ಕುಶಲಕರ್ಮಿಗಳಿವೆ. ಉದ್ಯೋಗವನ್ನು ನೀಡುವುದರ ಮೂಲಕ ಬೃಹತ್ ಪ್ರಮಾಣದ

ಬಂಡವಾಳವನ್ನು ತೊಡಗಿಸಿರುವ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕೈಗಾರಿಕೆಗಳಲ್ಲಿ ಪ್ರಮುಖವಾಗಿದೆ.

ಈ ನಿಟ್ಟಿನಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯು ನಾನಾ ವಿದೇಶಿಯ ಜೊತೆ ಬಂಡವಾಳವನ್ನು ಆಕರ್ಷಣೆ ಮಾಡುವಷ್ಟು ಸಾಮರ್ಥ್ಯವನ್ನು ಹೊಂದಿರುವುದು ಸ್ಪಷ್ಟವಾಗುತ್ತದೆ. ಇದರಿಂದಾಗಿ ಜಿಲ್ಲೆಯ ಸಿಮೆಂಟ್, ಇಟ್ಟಿಗೆ, ಕಬ್ಬಿಣ, ಮರ, ಟಿಂಬರ್, ಸೇರಾಮಿಕ್ಸ್, ವಿದ್ಯುತ್ ಮತ್ತು ಮೂಲಭೂತ ಸೌಲಭ್ಯಗಳ ಉದ್ಯಮಗಳ ಪ್ರಗತಿಗೆ ಮಹತ್ವದ ಕೊಡುಗೆಯನ್ನು ನೀಡುತ್ತಿದೆ. ವಾಣಿಜ್ಯ ಬ್ಯಾಂಕಿಂಗ್ ವಲಯ ಮತ್ತು ಇತರ ಸಹಾಯಕ ಸೇವೆಗಳ ಉದ್ಯಮಗಳು ಅಭಿವೃದ್ದಿಯಾಗುವಲ್ಲಿ ಉನ್ನತ ಪಾತ್ರವನ್ನು ವಹಿಸುತ್ತಿದೆ. ಇದರಿಂದ ವಾಹನ, ಸಾರಿಗೆ ಮತ್ತು ಸಂಪರ್ಕ ಉದ್ಯಮಗಳಿಗೆ ಅವಕಾಶಗಳನ್ನು ಕಲ್ಪಿಸುವುದರೊಂದಿಗೆ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಉದ್ಯೋಗವನ್ನು ಕಲ್ಪಿಸುವಲ್ಲಿ ನೆರವಾಗುತ್ತಿದೆ. ಅಲ್ಲದೇ ನೆಲಮಂಗಲ, ದೊಡ್ಡಬಳ್ಳಾಪುರ, ಹೊಸಕೋಟೆ, ದೇವನಹಳ್ಳಿ ತಾಲ್ಲೂಕಿನಲ್ಲಿ ಆಹಾರ, ಪಾನೀಯ, ಸಾರಿಗೆ, ಬ್ಯಾಂಕಿಂಗ್, ಇಂಧನ ಉದ್ಯಮಗಳು ಸ್ಥಾಪನೆಯಾಗಲು ಪ್ರೇರೆಪಣೆ ನೀಡಿದೆ. ಹೀಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಆರ್ಥಿಕ ಪ್ರವಾಸೋದ್ಯಮ ಬೆಳವಣಿಗೆಯಾಗಲು ತನ್ನ ಕೊಡುಗೆಯನ್ನು ನೀಡುತ್ತಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಆರ್ಥಿಕ ಪ್ರಗತಿಯಲ್ಲಿ ಮತ್ತು ಇತರ ವಲಯಗಳ ಅಭಿವೃದ್ದಿಗೆ ಕಾರಣವಾಗಿರುವ ಪ್ರಮುಖವಾದ ವಿವಿಧ ರೀತಿಯ ವಾಹನಗಳನ್ನು ಮತ್ತು ಬಿಡಿಭಾಗಗಳನ್ನು ಉತ್ಪಾದನೆ ಮಾಡುವಂತಹ ಕೈಗಾರಿಕೆಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿದೆ. ಭಾರತದ ಪ್ರಖ್ಯಾತ ಕೈಗಾರಿಕೆಗಳು ಜಿಂದಾಲ್ ಕಂಪನಿ, ಹೊಂಡಾ ಕಂಪನಿ, ಮಾರುತಿ ಸುಜುಕಿ ಕಂಪನಿ, ಹಿಮಾಲಯ ಡ್ರಗ್ ಕಂಪನಿಗಳು ಉತ್ಪಾದಿಸಿದ ಉತ್ಪಾದನೆಯನ್ನು ಪೂರೈಸುತ್ತಿದೆ. ಕೃಷಿಗೆ ಅಗತ್ಯವಾಗಿರುವ ವಿವಿಧ ಯಂತ್ರಗಳನ್ನು ಸಹ ಉತ್ಪಾದನೆ ಮಾಡುತ್ತಿದ್ದು, ರಾಜ್ಯವಲ್ಲದೇ ಭಾರತದ ವಿವಿಧ ಭಾಗಗಳಿಗೆ ತನ್ನ ಉತ್ಪನ್ನಗಳನ್ನು ರವಾನಿಸುತ್ತಿದೆ.

ಈ ಮೂಲಕವಾಗಿ ಹಿಮಾಲಯ ಡ್ರಗ್ಸ್ ಕಂಪನಿ, ಮೋಟಾರ್ ಕಂಪನಿಗಳು, ಕೃಷಿ ಉತ್ಪಾದನೆ ಕಂಪನಿಗಳು ವಿಸ್ತೃತ ಮಾರುಕಟ್ಟೆಯನ್ನು ಹೊಂದಿದ್ದು ವಿಫುಲವಾದ ಉದ್ಯೋಗ ಅವಕಾಶಗಳನ್ನು ಕಲ್ಪಿಸಿದೆ.[23] ಈ ಮೂಲಕವಾಗಿ ಜಿಲ್ಲೆಯ ಆರ್ಥಿಕ ಮತ್ತು ಉದ್ಯಮ ಕ್ಷೇತ್ರದಲ್ಲಿ ಪ್ರಮುಖವಾದ ಕೈಗಾರಿಕೆಯಾಗಿದೆ. ಅಂತರರಾಷ್ಟ್ರೀಯ ಮಟ್ಟದಲ್ಲಿ ಉತ್ತಮ ಗುಣಮಟ್ಟವನ್ನು ಹೊಂದಿರುವ ಉತ್ಪನ್ನಗಳನ್ನು ಉತ್ಪಾದನೆ ಮಾಡುತ್ತಿರುವ ಉದ್ಯಮವಾಗಿರುತ್ತದೆ. ಇದು ಉತ್ಪಾದಿಸುವಂತಹ ಉತ್ಪನ್ನಗಳನ್ನು ಭಾರತದ ಪ್ರಮುಖ ರಕ್ಷಣಾ ಕೈಗಾರಿಕೆಗಳು ಖರೀದಿಸುತ್ತಿವೆ. ಸುಮಾರು ಹತ್ತು ಕೋಟಿ ಬಂಡವಾಳದೊಂದಿಗೆ ಕಾರ್ಯನಿರ್ವಹಣೆ ಮಾಡುತ್ತಿದ್ದು, ನೂರಕ್ಕಿಂತ ಹೆಚ್ಚು ಸಂಖ್ಯೆಯ ಜನರಿಗೆ ನೇರ ಉದ್ಯೋಗವನ್ನು ಕಲ್ಪಿಸಿದೆ. ಸರ್ಕಾರಕ್ಕೆ ತೆರಿಗೆಯನ್ನು

ಪಾವತಿಸುವುದರೊಂದಿಗೆ ಪರೋಕ್ಷವಾಗಿ ವ್ಯಾಪಾರಿಗಳಿಗೆ, ಸಾರಿಗೆ, ವಸತಿ ಮತ್ತು ನಗರಗಳ ಬೆಳವಣಿಗೆಯಲ್ಲಿ ಪ್ರಮುಖವಾದ ಪಾತ್ರವನ್ನು ವಹಿಸಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಕಾರ್ಖಾನೆಯು ವಿಫುಲವಾದ ಅವಕಾಶಗಳನ್ನು ಮತ್ತು ಬಂಡವಾಳ ಸಂಚಯನದೊಂದಿಗೆ ಜಿಲ್ಲೆಯ ಕೈಗಾರಿಕಾ ಕ್ಷೇತ್ರದಲ್ಲಿ ಮುಖ್ಯವಾದ ಪಾತ್ರವನ್ನು ವಹಿಸಿದೆ. ಈ ಕಾರ್ಖಾನೆಯು ಸಾವಿರಾರು ಸಂಖ್ಯೆಯ ಜನರಿಗೆ ನೇರ ಉದ್ಯೋಗವನ್ನು ಒದಗಿಸುತ್ತಿದೆ. ಹಾಗೂ ಜಿಲ್ಲೆಯ ವಿವಿಧ ವಿಭಾಗದ ವಿದ್ಯಾರ್ಥಿಗಳಿಗೆ ತನ್ನ ಕಾರ್ಖಾನೆ ವತಿಯಿಂದ ಉಚಿತವಾದ ಅಧ್ಯಯನ ಶಿಬಿರಗಳನ್ನು ಆಯೋಜಿಸಿ ಜಾಗೃತಿ ಕಾರ್ಯಕ್ರಮಗಳನ್ನು ನಡೆಸುತ್ತಿದೆ. ಈ ಮೂಲಕ ಜಿಲ್ಲೆಯ ತಂಪುಪಾನೀಯ ಕಾರ್ಖಾನೆಯು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲದೇ ಭಾರತದ ವಿವಿಧ ಪ್ರದೇಶಗಳಿಗೆ ತನ್ನ ತಂಪುಪಾನೀಯಗಳನ್ನು ರವಾನಿಸುತ್ತಿದ್ದು, ಅಂತರ ರಾಜ್ಯ ಮಾರುಕಟ್ಟೆಯನ್ನು ಹೊಂದಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಜನರಿಗೆ ಉದ್ಯೋಗವನ್ನು ಒದಗಿಸುವುದರೊಂದಿಗೆ ಜೀವನ ಮಟ್ಟ ಸುಧಾರಣೆಯಾಗಲು ಮತ್ತು ನೆಲಮಂಗಲ, ಹೊಸಕೋಟೆ ಸುತ್ತಲಿನ ಇತರ ಉದ್ಯೋಗಗಳು ಅಭಿವೃದ್ಧಿಯಾಗಲು ಸಹಾಯಕವಾಗಿದೆ. ಅಲ್ಲದೇ ಪರೋಕ್ಷವಾಗಿ ಅಂದರೆ ಸಾರಿಗೆ ಉದ್ಯಮ, ಕಾರ್ಮಿಕರು ಡೀಲರ್‌ಗಳಿಗೆ ಮತ್ತು ಇನ್ನಿತರ ಉದ್ಯಮಗಳು ಬೆಳವಣಿಗೆಯಾಗಲು ಸಹಾಯಕವಾಗಿದೆ.

ಈ ತಂಪುಪಾನೀಯ ಘಟಕಕ್ಕೆ ಬೇರೆ ಬೇರೆ ಪ್ರದೇಶಗಳಿಂದ ವೀಕ್ಷಕರು ಕೈಗಾರಿಕೋದ್ಯಮಿಗಳು ಮತ್ತು ವಿದ್ಯಾರ್ಥಿಗಳು ತಮ್ಮ ಅಧ್ಯಯನದ ಸಲುವಾಗಿ ಪ್ರವಾಸವನ್ನು ಕೈಗೊಳ್ಳುವುದರ ಮೂಲಕವಾಗಿ ಜಿಲ್ಲೆಯ ಆರ್ಥಿಕ ಪ್ರವಾಸೋದ್ಯಮವು ಅಭಿವೃದ್ಧಿಯಾಗಲು ಕಾರಣವಾಗಿದೆ. ಸಿಮೆಂಟ್ ಘಟಕವು ಪರಿಸರ ಸಂರಕ್ಷಣೆಯಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದು, ಸುಮಾರು ಐದು ಎಕರೆ ಭೂ ಪ್ರದೇಶದಲ್ಲಿ ಒಡ್ಡುಗಳನ್ನು ನಿರ್ಮಾಣ ಮಾಡಿ ಅದರ ಸುತ್ತಲಿನ ಪ್ರದೇಶದಲ್ಲಿ ವನವನ್ನು ಬೆಳೆಸಿದೆ. ಇದು ಸಹ ಪರಿಸರ ಪ್ರಿಯ ಪ್ರವಾಸಿಗರನ್ನು ಆಕರ್ಷಣೆ ಮಾಡುತ್ತಿರುವ ತಾಣವಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸುತ್ತಲಿನ ಸ್ಥಳೀಯರಿಗೆ ಉದ್ಯೋಗವನ್ನು ನೀಡುವುದರ ಜೊತೆಗೆ ರಸ್ತೆ, ಮೂಲಭೂತ ಸೌಕರ್ಯಗಳು, ಬ್ಯಾಂಕಿಂಗ್, ರಿಯಲ್ ಎಸ್ಟೇಟ್, ವಸತಿ ಮತ್ತು ಶಿಕ್ಷಣ ಕ್ಷೇತ್ರಗಳಲ್ಲಿ ಪ್ರಗತಿಯನ್ನು ಸಾಧಿಸಿಕೊಂಡು ಬಂದಿದೆ. ವಿವಿಧ ಕಾಲೇಜುಗಳ ವಿದ್ಯಾರ್ಥಿಗಳು, ವೀಕ್ಷಕರು, ಪರಿವೀಕ್ಷಣ ತಂಡಗಳು ಮತ್ತು ಹೂಡಿಕೆದಾರರು ಅಧ್ಯಯನ ಪ್ರವಾಸ ಕೈಗೊಳ್ಳಲು ಅವಕಾಶಗಳನ್ನು ಕಲ್ಪಿಸುವುದರ ಮೂಲಕ ಜಿಲ್ಲೆಯ ಪ್ರವಾಸೋದ್ಯಮ ಅಭಿವೃದ್ಧಿಯಲ್ಲಿ ಮುಖ್ಯವಾದ ಪಾತ್ರವನ್ನು ವಹಿಸುತ್ತಿದೆ.

ಭಾರತದ ಪ್ರಸಿದ್ದ ವಾಹನ ತಯಾರಕ ಕಂಪನಿಯಾದ ಮಾರುತಿ ಸುಜುಕಿಯವರು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ತಯಾರಿಕ ಘಟಕವನ್ನು ಸ್ಥಾಪಿಸಿದ್ದಾರೆ. ವಿದೇಶ ತಂತ್ರಜ್ಞಾನದೊಂದಿಗೆ ಈ ಉತ್ಪಾದನಾ ಘಟಕವು ಕಾರ್ಯನಿರ್ವಹಣೆ ಮಾಡುತ್ತಿದೆ. ಪ್ರತಿ ವರ್ಷ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನಾನೂರು ಜನರಿಗೆ ಉದ್ಯೋಗ ನೀಡುತ್ತಿದೆ. ವಿದೇಶದ ತಾಂತ್ರಿಕ ತಜ್ಞರು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪ್ರವಾಸ ಕೈಗೊಳ್ಳಲು ಕಾರಣವಾಗಿದೆ. ಈ ಕೇಂದ್ರದ ಸ್ಥಾಪನೆಗಾಗಿ ಸುಮಾರು ಮುನ್ನೂರುಕ್ಕೂ ಹೆಚ್ಚು ಕೋಟಿ ರೂಪಾಯಿಗಳ ಬಂಡವಾಳವನ್ನು ಹೂಡಿಕೆ ಮಾಡಿ ವಾರ್ಷಿಕವಾಗಿ ಆದಾಯವನ್ನು ನೀರಿಕ್ಷೆ ಮಾಡಬಹುದು.

ದೊಡ್ಡಬಳ್ಳಾಪುರ, ನೆಲಮಂಗಲ, ದೇವನಹಳ್ಳಿ, ಹೋಸಕೋಟೆ ತಾಲೂಕಿನಲ್ಲಿ ರೇಷ್ಮ ಬಟ್ಟೆಗಳನ್ನು ಉತ್ಪಾಧಿಸುತ್ತಿದ್ದು, ತನ್ನ ಉತ್ಪನ್ನಗಳನ್ನು ವಿದೇಶಗಳಿಗೂ ಸಹ ರಫ್ತು ಮಾಡಿ ವಿದೇಶಿ ವಿನಿಮಯವನ್ನು ಗಳಿಸುತ್ತಿದೆ. ವಿದೇಶಿ ಮತ್ತು ಭಾರತ ವ್ಯಾಪಾರಸ್ಥರು ವಹಿವಾಟು ನಡೆಸಲು ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಪ್ರವಾಸವನ್ನು ಕೈಗೊಳ್ಳಲು ಪ್ರೋತ್ಸಾಹ ನೀಡುತ್ತಿದೆ. ರೇಷ್ಮ ಉದ್ಯಮದಿಂದ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ವಸತಿ, ಆಹಾರ ಮತ್ತು ಸಾರಿಗೆ ಕ್ಷೇತ್ರಗಳು ಅಭಿವೃದ್ಧಿಯಾಗಲು ಸಾದ್ಯವಾಗಿದೆ, ರೇಷ್ಮ ಉದ್ಯಮವು ಸುಮಾರು 37,224 ಜನರಿಗೆ ನೇರ ಉದ್ಯೋಗವನ್ನು ಒದಗಿಸಿದೆ.[24] ಅಲ್ಲದೇ ಪರೋಕ್ಷವಾಗಿ ಈ ಉದ್ಯಮಕ್ಕೆ ಸಂಬಂಧಿಸಿದಂತೆ ಸಾರಿಗೆ ಇಂಧನ, ಕಾರ್ಮಿಕರಿಗೆ, ವ್ಯಾಪಾರಿಗಳು ಮತ್ತು ಮಧ್ಯವರ್ತಿಗಳಿಗೆ ಉದ್ಯೋಗವನ್ನು ಒದಗಿಸುವುದರೊಂದಿಗೆ ಜಿಲ್ಲೆಯ ಆರ್ಥಿಕ ಪ್ರವಾಸೋದ್ಯಮದೊಂದಿಗೆ ಆರ್ಥಿಕ ಪ್ರಗತಿಗೆ ಕಾರಣವಾಗಿದೆ. (ಛಾಯಾ ಚಿತ್ರ – 25)

2017–18ರಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಸುಮಾರು 98 ಬೃಹತ್ ಮತ್ತು ಮಧ್ಯ,ಮ ಗಾತ್ರದ ಉದ್ಯಮಗಳಿದ್ದವು.[25] ಈ ಉದ್ಯಮಗಳಲ್ಲಿ ರಾಸಾಯನಿಕ ಕಾರ್ಖನೆ ಮತ್ತು ಸಿದ್ಧ ಉಡುಪು, ಪೆಪ್ಸಿ ಕಂಪನಿ ಮತ್ತು ಇತರ ಪ್ರಮುಖ ಕೈಗಾರಿಕೆಗಳು ಸಹ ಒಳಗೊಂಡಿದ್ದವು. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿದ್ದ ಈ ಉದ್ಯಮಗಳಲ್ಲಿ ಒಟ್ಟು 950.14 ಕೋಟಿ ಬಂಡವಾಳವನ್ನು ತೊಡಗಿಸಲಾಗಿತ್ತು.[26] ವಿವಿಧ ಹುದ್ದೆಗಳಲ್ಲಿ 35,753 ಜನರಿಗೆ ಉದ್ಯೋಗವನ್ನು ನೀಡಿದ್ದವು. ಕ್ರಾಲರ್ಸ್, ಮಣ್ಣು ಅಗೆಯುವ ಯಂತ್ರಗಳು, ಗ್ರಾನೈಟ್, ಸ್ಪನ್ ಸಿಲ್ಕ್, ಕಾರ್ಬನ್ ಬಾಕ್ಸ್, ಗ್ಲಸಸ್, ಕೆಮಿಕಲ್ಸ ಮತ್ತು ಸ್ಟೀಲ್ ಉದ್ಯಮಗಳು ಅಸ್ಥಿತ್ವದಲ್ಲಿದ್ದವು. ಇಂತಹ ಬೃಹತ್ ಮತ್ತು ಮಧ್ಯಮ ಗಾತ್ರದ ಉದ್ಯಮಗಳು ಜಿಲ್ಲೆಯ ಆರ್ಥಿಕ ಪ್ರಗತಿಯೊಂದಿಗೆ ವಿದೇಶಿ ವಿನಿಮಯ ಪಡೆಯಲು ಕಾರಣವಾಗಿದ್ದವು. ಜಿಲ್ಲೆಯ ಸಂಪನ್ಮೂಲಗಳ ಸದುಪಯೋಗಕ್ಕೆ ಸಹಾಯಕಾರಿಯಾಗಿದ್ದವು. ಜಿಲ್ಲೆಯ ಸಾರಿಗೆ, ಆಹಾರ, ವಾಹನ, ವಸತಿ, ಕೃಷಿ, ತೋಟಗಾರಿಕೆ,

ರೇಷ್ಮೆ ಉತ್ಪಾದನೆ ಹಾಗೂ ಇತರ ಉದ್ಯಮಗಳ ಬೆಳವಣಿಗೆಯಲ್ಲಿ ಪ್ರಮುಖವಾದ ಪಾತ್ರವನ್ನು ವಹಿಸಿವೆ. ಅಲ್ಲದೇ ವ್ಯಾಪಾರ ಮತ್ತು ವಾಣಿಜ್ಯ, ಬ್ಯಾಂಕಿಂಗ್ ಕ್ಷೇತ್ರವು ಬೆಳವಣಿಗೆಯಾಗಲು ತಮ್ಮ ಕೊಡುಗೆಯನ್ನು ನೀಡಿವೆ.

## 4.6 ಪ್ರವಾಸೋಧ್ಯಮದಲ್ಲಿ ಸಣ್ಣ ಮತ್ತು ಕರಕುಶಲ ಕೈಗಾರಿಕೆಗಳ ಪಾತ್ರ

ಸಣ್ಣ ಮತ್ತು ಕರಕುಶಲ ಕೈಗಾರಿಕೆಗಳ ಬಗ್ಗೆ ಹೇಳುವುದಾದರೆ ಶಿಲಾಯುಗ ಕಾಲದಿಂದಲೂ ಹೇಳಬಹುದು ಮಾನವ ತಾನು ಬಳಸುವಂತಹ ವಸ್ತುಗಳನ್ನು ತಾನೇ ತಯಾರುಮಾಡುವಂತ ಕಸುಬುಗಳನ್ನು ಕಲಿತು ಹಲವಾರು ಉಪಯೋಗವಾಗುವಂತಹ ವಸ್ತುಗಳನ್ನು ತಯಾರು ಮಾಡಿ ಜನರಿಗೆ ಮಾರಾಟ ಮಾಡಿಕೊಂಡು ಹಣವನ್ನು ಸಂಪಾದಿಸಿ ತನ್ನ ಜೀವನವನ್ನು ನಡೆಸಿಕೊಂಡು ಬಂದಿರುತ್ತಾನೆ. ಮಾನವ ಬೆಳೆದು ಹೋದಂತೆಲ್ಲ ವಿವಿಧ ರೀತಿಯ ಕರಕುಶಲ ಕೈಗಾರಿಕೆಗಳು ಬೆಳಕಿಗೆ ಬಂದವು ಮಾನವನ ಜ್ಞಾನವು ಬೆಳೆದಂತೆಲ್ಲಾ ತಾನು ಬಳಸುವಂತಹ ವಸ್ತುಗಳನ್ನು ಪ್ರಾಮುಖ್ಯತೆಯನ್ನು ಕೊಡುತ್ತಾ ಬಂದಿರುತ್ತಾನೆ. ಆರಂಭದಲ್ಲಿ ಜನರು ಉಪಯೋಗಿಸುವಂತಹ ವಸ್ತುಗಳನ್ನು ಮಾಡುವಂತಹ ಕಲೆಯನ್ನು ಕಲಿತಿರುತ್ತಾನೆ. ಅದರಲ್ಲಿ ಕೃಷಿಯಲ್ಲಿ ಬಳಸುವಂತಹ ವಸ್ತುಗಳು ಆಹಾರ ತಯಾರಿಸುವಂತಹ ವಸ್ತುಗಳು ತಾನೇ ತಯಾರು ಮಾಡುತ್ತಾ ಹೋಗಿರುತ್ತಾನೆ. ನಂತರದ ದಿನಗಳಲ್ಲಿ ಸಣ್ಣ ಕೈಗಾರಿಕೆಗಳ ಅಥವಾ ಗುಡಿಕೈಗಾರಿಕೆಗಳನ್ನು ಅಭಿವೃದ್ದಿ ಪಡಿಸುತ್ತಾ ಬಂದಿರುತ್ತಾನೆ.

ಭಾರತದಲ್ಲಿ ಸಣ್ಣ ಕೈಗಾರಿಕೆಗಳು ಅತಿ ಹೆಚ್ಚಾಗಿ ಸ್ಥಾಪಿತವಾಗಿವೆ ಅಂತಹ ಸಣ್ಣ ಕೈಗಾರಿಕೆಗಳಿಗೆ ಸರ್ಕಾರಗಳಿಂದ ಅನುದಾನವನ್ನು ಕೊಟ್ಟು ಸಣ್ಣ ಕೈಗಾರಿಕೆಗಳಿಗೆ ಪ್ರೋತ್ಸಾಹವನ್ನು ನೀಡಿ ಸಾವಿರಾರು ಜನರಿಗೆ ಉದ್ಯೋಗಾವಕಾಶವನ್ನು ನೀಡಬಹುದಾಗಿದೆ. (ಛಾಯಾಚಿತ್ರ – 26)

ಪಾರಂಪರಿಕವಾಗಿ ಬಂದ ವೃತ್ತಿ ಆಧಾರಿತವಾದ ಕುಟುಂಬಗಳು ಹಲವು ಕೆಲಸಗಳಲ್ಲಿ ತೊಡಗಿಸಿಕೊಂಡಿದ್ದವು ಇಂದು ಎಲ್ಲವನ್ನು ಹಣದಿಂದ ಅಳತೆಮಾಡುವ ಮನೋಭಾವವನ್ನು ಬೆಳವಣಿಗೆ ಆಗಿರುವುದರಿಂದ ವೃತ್ತಿಗಳ, ಕಸುಬುಗಳ ಮಹತ್ವವನ್ನು ಪಡೆದುಕೊಂಡಿದೆ. ಈ ಜಿಲ್ಲೆಯಲ್ಲಿ ಆಳ್ವಿಕೆಮಾಡಿದ ರಾಜ ಮನೆತನಗಳ ಕಾಲದಲ್ಲಿ ಮತ್ತು ಪಾಳೇಗಾರರ ಕಾಲದಲ್ಲಿ ಗ್ರಾಮಾಂತರ ಪ್ರದೇಶಗಳಲ್ಲಿ ಜನರು ತನ್ನ ಕುಲಕಸುಬುಗಳನ್ನು ಮಾಡುತ್ತಾ ಬಂದಿರುತ್ತಾನೆ. ಅವುಗಳಲ್ಲಿ ಪ್ರಮುಖವಾಗಿ ಬಟ್ಟೆ ತಯಾರಿಕೆ, ನೇಯ್ಗೆ, ಮಡಿಕೆ ತಯಾರಿಕೆ, ಕರಕುಶಲ ಕಲೆಗಳು ಹೆಚ್ಚು ಪ್ರಾಧ್ಯಾನತೆಯನ್ನು ಪಡೆದುಕೊಂಡಿದೆ. ಇದರಿಂದ ಜನಸಾಮಾನ್ಯರಿಗೂ ಆರ್ಥಿಕ ಪ್ರಗತಿ

ಸುಧಾರಿಸಿದೆ ಇಂದಿಗೂ ಈ ಜಿಲ್ಲೆಯಲ್ಲಿ ನೂರಾರು ಕುಟುಂಬಗಳಿಗೆ ಜೀವನವನ್ನು ಕಲ್ಪಿಸುವುದರೊಂದಿಗೆ ಆರ್ಥಿಕ ಪ್ರವಾಸೋಧ್ಯಮ ಅಭಿವೃದ್ದಿಯಾಗಲು ಕಾರಣವಾಗಿದೆ.

ಐತಿಹಾಸಿಕ ಸ್ಥಳಗಳಿಗೆ ಪ್ರವಾಸಿಗರು ಬೇಟಿ ನೀಡಿದ ಸಂದರ್ಭದಲ್ಲಿ ಅಲ್ಲಿ ದೊರೆಯುವಂತಹ ಸ್ಥಳೀಯ ಸಿದ್ದಪಡಿಸಿದಂತಹ ವಸ್ತುಗಳನ್ನು ಕೊಂಡುಕೊಳ್ಳುತ್ತಾರೆ. ನಾವು ಹೇಳುವುದಾದರೆ ಘಾಟಿಸುಬ್ರಹ್ಮಣ್ಯ ದೇವಾಲಯಕ್ಕೆ ಬೇಟಿಕೊಟ್ಟ ಪ್ರವಾಸಿಗರು ಅಲ್ಲಿ ಸಿಗುವಂತ ರೇಷ್ಮೇ ಸೀರೆ ತುಂಬಾ ಅಲಂಕೃತವಾಗಿರುವಂತ ವಸ್ತುವಾಗಿರುವುದರಿಂದ ವಸ್ತುವನ್ನು ಕೊಂಡುಕೊಳ್ಳಲು ಹೊರ ಜಿಲ್ಲೆಯಿಂದ ಮತ್ತು ಹೊರ ರಾಜ್ಯದಿಂದ ಪ್ರವಾಸಿಗರು ಬೇಟಿಯನ್ನು ನೀಡಲಾಗಿದೆ.

ಸಣ್ಣ ಕೈಗಾರಿಕೆಗಳಲ್ಲಿ ಕಂಡುಬರುವಂತ ಪ್ರಮುಖ ವಸ್ತುಗಳಲ್ಲಿ ಬಟ್ಟೆ ನೇಯ್ಯುವುದು, ಸೀರೆ ನೇಯ್ಯುವುದು, ಹಗ್ಗಸುತ್ತುವುದು, ಆಹಾರ ಪದಾರ್ಥಗಳ ಉತ್ಪಾದನೆ ಮಾಡುವುದು, ಚಿನ್ನ ಮತ್ತು ಬೆಳ್ಳಿಯ ವಸ್ತುಗಳನ್ನು ಕಚ್ಚಾವಸ್ತುವಿನಿಂದ ಸಿದ್ದವಸ್ತುಗಳನ್ನಾಗಿ ಮಾಡಿ ಇತರ ವಸ್ತುಗಳನ್ನು ತಯಾರುಮಾಡಿ ವ್ಯಾಪರ ವಹಿವಾಟನ್ನು ನಡೆಸಲಾಗುತ್ತದೆ. ಈ ಜಿಲ್ಲೆಯಲ್ಲಿ ಒಂದು ವಸ್ತು ಸಿಕ್ಕಿದ್ದರೆ ಮತ್ತೊಂದು ಜಿಲ್ಲೆಯಲ್ಲಿ ಸಿಗುವುದಿಲ್ಲ ಆದರಿಂದ ವಸ್ತುಗಳ ವಹಿವಾಟಿಗೆ ಸಂಚಾರವು ಅಗತ್ಯವಾಗಿರುತ್ತದೆ. ಇದರಿಂದ ಆರ್ಥಿಕ ಪರಿಸ್ಥಿತಿಯು ಉತ್ತಮವಾಗಿರುತ್ತದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಸಣ್ಣ ಕರಕುಶಲ ಕೈಗಾರಿಕೆಗಳ ಆರ್ಥಿಕ ಪ್ರಗತಿಯಲ್ಲಿ ಮುಖ್ಯವಾದ ಪಾತ್ರವನ್ನು ನಿರ್ವಹಿಸಿವೆ ಸಣ್ಣ ಪ್ರಮಾಣದ ಕೈಗಾರಿಕೆಗಳಿಂದ ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ನೇರವಾಗಿ ಮತ್ತು ಪರೋಕ್ಷವಾಗಿ ಉದ್ಯೋಗವನ್ನು ಒದಗಿಸಿದೆ ಅಲ್ಲದೆ ಜಿಲ್ಲೆಗೆ ಆಗಮಿಸುವ ಪ್ರವಾಸಿಗರಿಗೆ ಹಲವಾರು ಸೇವೆಗಳನ್ನು ಒದಗಿಸುತ್ತಿದೆ. ಇದರಿಂದ ಪ್ರವಾಸೋಧ್ಯಮ ಕ್ಷೇತ್ರವು ಬೆಳವಣಿಗೆಯಾಗಲು ಪ್ರಮುಖ ಕಾರಣವಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಹಲವಾರು ಕರಕುಶಲ ಕೈಗಾರಿಕೆಗಳಲ್ಲಿ ಪ್ರಮುಖವಾದುದೆಂದರೆ ಮೂರ್ತಿ ಶಿಲ್ಪಗಳನ್ನು ಕೆತ್ತನೆ ಮಾಡುವುದು. ಈ ಕರಕುಶಲ ಚಟುವಟಿಕೆಯು ಹಲವಾರು ಶತಮಾನಗಳಿಂದ ಕುಲಕಸುಬಾಗಿ ಮಾಡಿಕೊಂಡು ಬಂದಿರುತ್ತಾರೆ. ಇದರಿಂದ ಹೊರಗಿನ ಜಿಲ್ಲೆಯವರು ಮತ್ತು ಹೊರ ರಾಜ್ಯದವರು ಮೂರ್ತಿ ಶಿಲ್ಪವನ್ನು ಮಾಡಿಸಿಕೊಂಡು ಹೋಗುವುದಕ್ಕೆ ಈ ಜಿಲ್ಲೆಗೆ ಬರುತ್ತಾರೆ. ಇದೇ ರೀತಿಯಲ್ಲಿ ಇದು ಸಣ್ಣಕೈಗಾರಿಕೆಗಳಲ್ಲಿ ಒಂದಾಗಿದೆ.

ಬೃಹತ್ ಶಿಲಾಯುಗದಿಂದ ಇದುವವರೆಗೂ ಪ್ರಚಲಿತವಾಗಿರುವಂತಹ ಬೇಡಿಕೆಯ ವಸ್ತುವೆಂದರೆ ಹೆಂಚು ಇದು ಮಾನವನ ಅವಶ್ಯಕವಾಗಿರುವಂತಹ ಒಂದು

ಮೂಲಭೂತವಾಗಿರುವ ವಸ್ತು ಪ್ರಾಚೀನಕಾಲದಲ್ಲಿ ಮಧ್ಯಕಾಲೀನ ಆಧುನಿಕಾಲದಲ್ಲಿ ವಿವಿಧ ರೀತಿಯ ಹೆಂಚುಗಳನ್ನು ನೋಡಬಹುದು. ಒಂದೊಂದು ರೀತಿಯ ಕಾಲಘಟ್ಟಗಳಲ್ಲಿ ತನ್ನದೇ ಆದ ಆಕಾರಗಳನ್ನು ಆಕರ್ಷಕವಾಗಿ ನೋಡಬಹುದು. ಮೊದಲು ಹೆಂಚನ್ನು ಕೈಯಿಂದ ಮಾಡಬಹುದಾಗಿದ್ದು ಇದರಿಂದ ಹಲವಾರು ಬಡ ಜನರಿಗೆ ಉದ್ಯೋಗವನ್ನು ನೀಡಬಹುದಾಗಿತ್ತು. ಆದರೆ ಇಪ್ಪತ್ತೊಂದನೇ ಶತಮಾನದಲ್ಲಿ ತಂತ್ರಜ್ಞಾನ ಹೆಂಚನ್ನು ತಯಾರು ಮಾಡಲಾಗುತ್ತದೆ. ಮಾನವನಿಗೆ ಅತ್ಯಂತ ವೇಗವಾಗಿ ವಸ್ತುವನ್ನು ಪೂರೈಸಬೇಕು ಆದ್ದರಿಂದ ಈ ತಂತ್ರಜ್ಞಾನವನ್ನು ಅಳವಡಿಸಿಕೊಳ್ಳಲಾಗಿದೆ. ಇದರಿಂದ ಜಿಲ್ಲೆಯ ಸರ್ವತೋಮುಖ ಅಭಿವೃದ್ದಿಯನ್ನು ಹೊಂದಬಹುದು.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ರೇಷ್ಮೆ ಉದ್ಯಮವು ಪ್ರಖ್ಯಾತಿಯನ್ನು ಪಡೆದುಕೊಂಡಿದೆ ಈ ಉದ್ಯಮಕ್ಕೆ ಅಂದರೆ ರೇಷ್ಮೆ ಹುಳು ಸಾಕಾಣಿಕೆಗೆ ಅಗತ್ಯವಾದ ಬುಟ್ಟಿಗಳನ್ನು ಮತ್ತು ತಟ್ಟೆಗಳನ್ನು ತಯಾರಿಸುವಂತಹ ಉದ್ಯಮವು ಬೆಳೆದಿದೆ. ಇಂತಹ ಉದ್ಯಮವು ಈ ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ಪ್ರಸಿದ್ದಿಯನ್ನು ಪಡೆದುಕೊಂಡು ಪ್ರಮುಖ ವ್ಯಾಪಾರ ಕೇಂದ್ರವಾಗಿ ಮಹತ್ವ ಪಡೆದುಕೊಂಡಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆ ರೇಷ್ಮೆ ಹುಳು ಸಾಕಾಣಿಕೆಯಲ್ಲಿ ಬಳಸುವಂತ ತಟ್ಟೆಗಳು ಮತ್ತು ಬುಟ್ಟಿಗಳು ಖರೀದಿಸುವಂತಹ ಮಾರುಕಟ್ಟೆ ಸ್ಥಳವಾಗಿದೆ[27]. ಇಲ್ಲಿರುವ ರೇಷ್ಮೇ ಗೂಡಿನ ಮಾರುಕಟ್ಟೆಯು ಬಿದಿರಿನ ತಟ್ಟೆಗಳ ಮಾರುಕಟ್ಟೆಯಾಗಿದೆ. ಬೆಂಗಳೂರು ಮತ್ತು ತುಮಕೂರು ನಡುವಿನ ರಾಷ್ಟ್ರೀಯ ಹೆದ್ದಾರಿಯಲ್ಲಿರುವ ಉತ್ತಮವಾದ ಸಾರಿಗೆ ವ್ಯವಸ್ಥೆಯನ್ನು ಹೊಂದಿದ್ದು ವಾಣಿಜ್ಯ ಉದ್ಯಮಗಳು ಹೊಂದಿದ್ದು ಇಂದನ ಪೂರೈಕೆಗಳ ಕೇಂದ್ರಗಳು ಇಲ್ಲಿ ಸ್ಥಾಪನೆಗೊಂಡಿವೆ. ಹೀಗೆ ಜಿಲ್ಲೆಯ ಆರ್ಥಿಕ ಪ್ರವಾಸೋಧ್ಯಮ ಬೆಳವಣಿಗೆಗೆ ಮಹತ್ವವನ್ನು ಪಡೆದುಕೊಂಡಿದೆ.

## 4.7 ಹೈನುಗಾರಿಕೆ ಉದ್ಯಮ

ಹೈನುಗಾರಿಕೆ ಉದ್ಯಮವು ಆಧುನಿಕ ದಿನಗಳಲ್ಲಿ ಪ್ರಗತಿಯನ್ನು ಸಾಧಿಸುವಲ್ಲಿ ಸಫಲವಾಗಿದೆ ಪ್ರಾಚೀನ ಕಾಲದಿಂದ ಹೈನುಗಾರಿಕೆ ಒಂದು ಪ್ರಮುಖವಾದ ಒಂದು ಉದ್ಯಮವಾಗಿದೆ. ಭಾರತ ದೇಶ ಕೃಷಿ ಪ್ರಧಾನವಾದ ರಾಷ್ಟ್ರವಾಗಿದೆ ರೈತರು ಕೃಷಿ ಚಟುವಟಿಕೆಯಲ್ಲಿ ತೊಡಗ ಬೇಕಾದರೆ ದನಗಳು ಬೇಕಾಗುತ್ತದೆ. ರೈತರು ದನಗಳಮೇಲೆ ಅತಿ ಹೆಚ್ಚು ಅವಲಂಬಿತರಾಗುತ್ತಾರೆ. ರೈತರು ದನಗಳನ್ನು ಕೊಂಡುಕೊಳ್ಳಬೇಕಾದರೆ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವ್ಯಾಪಾರವನ್ನು ಮಾಡಲು ಹೋಗಬೇಕಾಗುತ್ತದೆ. ಅದಕ್ಕೆ ವಾರದ ಸಂತೆ,

ತಿಂಗಳಿನ ಸಂತೆ ಮತ್ತು ವರ್ಷದ ಜಾತ್ರೆಯು ನಡೆಯುವಂತಹ ಸ್ಥಳಗಳಿಗೆ ಬೇಟಿಕೊಟ್ಟು ದನಗಳನ್ನು ಕೊಂಡು ಕೊಳ್ಳಲು ಬೇಟಿಯನ್ನು ನೀಡುತ್ತಾರೆ. ರೈತರು ಕೃಷಿಯನ್ನು ಮಾಡಿ ಆಯಾಸವಾಗಿರುವಂತಹ ದನಗಳನ್ನು ಬೇರೆ ಸಂತೆಯಲ್ಲಿ ಮಾರಾಟಮಾಡಿ ಅವರು ಹೊಸ ದನಗಳನ್ನು ಕೊಂಡುಕೊಳ್ಳಲು ಸಂತೆಗಳಿಗೆ ಅಥವಾ ಜಾತ್ರೆಗಳಿಗೆ ಬೇಟಿಯನ್ನು ನೀಡುತ್ತಾರೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಈ ಹೈನುಗಾರಿಕೆ ಉದ್ಯಮವು ಬೆಳವಣಿಗೆಯಾಗುತ್ತಿರುವ ಒಂದು ಅಭಿವೃದ್ದಿ ಕ್ಷೇತ್ರವಾಗಿದೆ. ಈ ಜಿಲ್ಲೆಯಲ್ಲಿ ನಾಲ್ಕು ತಾಲ್ಲೂಕುಗಳನ್ನು ಒಳಗೊಂಡಿದ್ದು ಅವು ನೆಲಮಂಗಲ, ದೊಡ್ಡಬಳ್ಳಾಪುರ, ದೇವನಹಳ್ಳಿ, ಹೊಸಕೋಟೆ ತಾಲ್ಲೂಕುಗಳು ಒಳಗೊಂಡಿರುತ್ತದೆ. ಈ ತಾಲ್ಲೂಕುಗಳಲ್ಲಿ ಹೈನುಗಾರಿಕೆ ಉದ್ಯಮವು ಕ್ಷಿಪ್ರ ರೀತಿಯಲ್ಲಿ ಪ್ರಗತಿಯನ್ನು ಸಾಧಿಸುತ್ತಿದೆ ಕೃಷಿಯಲ್ಲಿ ತೊಡಗುವಂತಹ ಹಸು ಮತ್ತು ದನಗಳನ್ನು ಜಾತ್ರೆಯ ಮೂಲಕ ಖರೀದಿಸಬಹುದಾಗಿದೆ. ಈ ಜಿಲ್ಲೆಯಲ್ಲಿ ಹಲವಾರು ಐತಿಹಾಸಿಕ ಜಾತ್ರೆಗಳು ನಡೆಯುತ್ತಾ ಬಂದಿರುತ್ತದೆ. ಈ ಐತಿಹಾಸಿಕ ಸ್ಥಳಗಳಿಗೆ ಬೆಳೆಬಾಳುವಂತಹ ದನಗಳು ಮತ್ತು ಹಸುಗಳು ಸಿಗುವಂತಾಗಿದೆ. (ಛಾಯಾಚಿತ್ರ – 27)

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪ್ರಮುಖ ಮೂರು ಧನದ ಜಾತ್ರೆಯೂ ಸಹ ಆಚರಿಸಿಕೊಂಡು ಬಂದಿರುತ್ತಾರೆ. ಅವುಗಳಲ್ಲಿ

1. **ಶಿವಗಂಗೆ ದನಗಳ ಜಾತ್ರೆ** : ಈ ಐತಿಹಾಸಿಕ ಸ್ಥಳದಲ್ಲಿ ಸುಮಾರು ನೂರಾರು ವರ್ಷಗಳಿಂದ ತನ್ನ ಆಚರಣೆಯನ್ನು ಅನುಸರಿಸಿಕೊಂಡು ಬಂದಿರುತ್ತಾರೆ. ಈ ಐತಿಹಾಸಿಕ ಜಾತ್ರೆಯನ್ನು ಕೆಂಪೇಗೌಡನ ಕಾಲದಿಂದಲೂ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ ಪ್ರತೀ ವರ್ಷ ಜನವರಿ ತಿಂಗಳಿನ ಆರಂಭದಿಂದ ಸಂಕ್ರಾಂತಿ ಹಬ್ಬದ ದಿನದ ಹಿಂದೆವರೆಗೂ ಈ ದನಗಳ ಜಾತ್ರೆಯು ನಡೆಯುತ್ತಾ ಬಂದಿರುತ್ತದೆ. ಈ ಜಾತ್ರೆಯಲ್ಲಿ ಕೃಷಿಗೆ ಪ್ರಧಾನವಾಗಿರುವಂತ ದನಗಳು ಸಿಗುತ್ತವೆ. ಮತ್ತು ಹಲವಾರು ರೀತಿಯ ತಳಿಗಳು ಸಹ ಸಿಗುತ್ತವೆ. ಈ ಐತಿಹಾಸಿಕ ಸ್ಥಳಕ್ಕೆ ಹಲವಾರು ಜಿಲ್ಲೆಗಳಿಂದ ಬರುವಂತಹ ರೈತರು ದನಗಳನ್ನು ಮಾರಿ ಲಾಭವನ್ನು ಸಹ ಮತ್ತು ಅದರ ಜೊತೆ ದನಗಳನ್ನು ಕೊಂಡುಕೊಳ್ಳುತ್ತಾರೆ.[28] ಇದರಿಂದ ರೈತರಿಗೆ ಆರ್ಥಿಕ ಲಾಭವನ್ನು ಪಡೆದುಕೊಂಡಿರುತ್ತಾರೆ.

2. **ಮಹಿಮಾಪುರ ದನಗಳ ಜಾತ್ರೆ**: ಈ ಜಾತ್ರೆಯು ಮಾರ್ಚ್ ತಿಂಗಳಿನಲ್ಲಿ ನಡೆಯುವಂತ ಒಂದು ದನದ ಜಾತ್ರೆಯಾಗಿರುತ್ತದೆ ಇಲ್ಲಿ ಸುತ್ತಮುತ್ತಲಿನ ಪ್ರದೇಶವು ಕೃಷಿಯನ್ನು ಅವಲಂಭಿತವಾಗಿರುತ್ತವೆ ಈ ಜಾತ್ರೆಯ ಮೂರು ದಿನಗಳ ಕಾಲ ನಡೆಯುತ್ತದೆ. ಇಲ್ಲಿ ಅಕ್ಕಪಕ್ಕದ

ತಾಲ್ಲೂಕಿನಿಂದ ರೈತರು ಮತ್ತು ಕೃಷಿಕರು ಸಂಚಾರ ಮಾಡುತ್ತಾರೆ. ಏಕೆಂದರೆ ಈ ಜಾತ್ರೆಯ ವಿಶೇಷ ಇಲ್ಲಿ ರಂಗನಾಥಸ್ವಾಮಿ ದೇವಾಲಯವು ಇರುವುದರಿಂದ ದೇವಾಲಯಕ್ಕೂ ಬೇಟಿಕೊಟ್ಟು ತನ್ನ ಕೆಲಸ ಕಾರ್ಯಗಳನ್ನು ಮುಗಿಸಿಕೊಂಡು ತಮ್ಮ ಊರಿಗೆ ವಾಪಸ್ಸು ಹೋಗುವರು. ಈ ದನಗಳ ಜಾತ್ರೆಯಿಂದ ರೈತರಿಗೆ ಉತ್ತಮವಾದಂತ ಕೃಷಿಗೆ ಅನುಕೂಲವಾಗುವಂತಹ ದನಗಳು ಸಿಗುತ್ತವೆ.

3. **ಘಾಟಿ ಸುಬ್ರಹ್ಮಣ್ಯ:** ಈ ಐತಿಹಾಸಿಕ ಸ್ಥಳದಲ್ಲಿ ಧಾರ್ಮಿಕ ಕ್ಷೇತ್ರವಾಗಿ ಸುಭ್ರಹ್ಮಣ್ಯ ದೇವಾಲಯವು ಇರುವುದರಿಂದ ಪ್ರವಾಸಿಗರು ಅತಿ ಹೆಚ್ಚಾಗಿ ಬರುತ್ತಾರೆ. ಇಲ್ಲೂ ಸಹ ಮಾರ್ಚ್ ಮತ್ತು ಏಪ್ರಿಲ್ ತಿಂಗಳಿನಲ್ಲಿ ದನಗಳ ಜಾತ್ರೆಯು ಪ್ರಸಿದ್ದಿಯನ್ನು ಪಡೆದುಕೊಂಡಿದೆ. ಈ ಜಾತ್ರೆಯು ಐದುದಿನಗಳ ಕಾಲ ವೈಭವದಿಂದ ಜಾತ್ರೆಯು ನಡೆಯುತ್ತದೆ. ನಂತರದ ದಿನದಲ್ಲಿ ಸುಬ್ರಹ್ಮಣ್ಯ ದೇವಾಲಯದ ಬಹಳ ವಿಜ್ರಂಭಣೆಯಿಂದ ಜಾತ್ರೆಯು ನಡೆಯುತ್ತದೆ ಪ್ರವಾಸಿಗರು ಸಹ ಇಲ್ಲಿ ಅತಿ ಹೆಚ್ಚಾಗಿ ಬರುವುದಕ್ಕೆ ಸರ್ಕಾರದವರು ಬಸ್ಸುಗಳ ವ್ಯವಸ್ಥೆಯು ಮಾಡಿಕೊಡಲಾಗುತ್ತದೆ.

ಧನದ ಜಾತ್ರೆಯಲ್ಲಿ ರೈತರು ಬಳಸುವಂತಹ ಹಸುಗಳು ಮತ್ತು ಧನಗಳನ್ನು ಇಲ್ಲೂ ಕೊಂಡು ಕೊಳ್ಳಬಹುದು. ಇಲ್ಲಿ ಅತಿ ಬೆಲೆಬಾಳುವ ಹಸುಗಳು ಕೊಂಡುಕೊಳ್ಳಬಹುದು. ಇಲ್ಲಿ ದೇಶೀಯ ಮತ್ತು ವಿದೇಶೀಯ ತಳಿಯ ಹಸುಗಳು ಸಿಗುತ್ತವೆ.[29] ಈ ಜಾತ್ರೆಯಲ್ಲಿ ವಿಶೇಷವೇನೆಂದರೆ ಉತ್ತರ ಕರ್ನಾಟಕದ ವಿವಿಧ ರೀತಿಯ ತಳಿಗಳು ಹೊಂದಿರುವ ಹಸುಗಳು ಮತ್ತು ಧನಗಳು ಅತಿಹೆಚ್ಚಾಗಿ ಬೇಡಿಕೆಯನ್ನು ಹೊಂದಿರುತ್ತದೆ. ಆದ್ದರಿಂದ ಈ ಹೈನುಗಾರಿಕೆ ಉಧ್ಯಮವು ಬೆಳವಣಿಗೆಯಾಗಲು ಮತ್ತು ಒಂದು ಕ್ಷೇತ್ರ ಸರ್ವತೋಮುಖವಾಗಿ ಆರ್ಥಿಕ ಅಭಿವೃದ್ದಿಯಾಗಲು ಇದು ಒಂದು ಕಾರಣವಾಗುತ್ತದೆ.

ಈ ಹೈನುಗಾರಿಕೆ ಉಧ್ಯಮವು ಒಂದು ಪ್ರಮುಖವಾದ ಆರ್ಥಿಕ ಚಟುವಟಿಕೆಯಾಗಿದೆ ಆಧುನಿಕ ಕಾಲದಲ್ಲಿ ಹಸುಗಳನ್ನು ಉಧ್ಯಮವನ್ನಾಗಿ ಮಾರ್ಪಟ್ಟು ಗ್ರಾಮಾಂತರ ಪ್ರದೇಶಗಳಲ್ಲಿ ರೈತರನ್ನು ಮತ್ತು ಕೃಷಿಕರನ್ನು ಒಂದು ಅಭಿವೃದ್ದಿಯನ್ನು ಸಾದಿಸುವಲ್ಲಿ ಪ್ರಮುಖವಾದ ಅಂಶವಾಗಿದೆ ಈ ಉದ್ಯಮಕ್ಕೆ ರೈತರು ಸರ್ಕಾರದಿಂದ ಸಾಲವನ್ನು ಪಡೆದು ತನ್ನ ಹೈನುಗಾರಿಕೆ ಉಧ್ಯಮವನ್ನು ಪ್ರಾರಂಭಮಾಡಿ ಅದರಲ್ಲಿ ಬರುವಂತಹ ಹಾಲು ಉತ್ಪಾದನೆ ಅಧಿಕ ಲಾಭವನ್ನು ಪಡೆದುಕೊಂಡು ರೈತರು ತನ್ನ ಜೀವನವನ್ನು ಸಾಗಿಸುತ್ತಾರೆ. ಅವರು ಮಾಡುವ ಹೈನುಗಾರಿಕೆ ಉದ್ಯಮದಿಂದ ಸಾಕುವಂತಹ ಹಸುಗಳನ್ನು ವಿದೇಶಿಯ ತಳಿಯನ್ನು ಕೊಂಡುಕೊಳ್ಳಲು ಬೇರೆ ಜಿಲ್ಲೆಯಿಂದ, ಹೊರರಾಜ್ಯಗಳಿಂದ ಬೆಡಿಕೆ ಇರುವುದರಿಂದ ಈ ಉಧ್ಯಮವು ಪ್ರಮುಖವಾದ ಆಕರ್ಷಣೆಯನ್ನು ಹೋಂದಿದೆ.

ಒಟ್ಟಿನಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಹೈನುಗಾರಿಕೆ ಉಧ್ಯಮ ತನ್ನದೇ ಆದ ಐತಿಹಾಸಿಕವನ್ನು ಹೊಂದಿದ್ದು ಪ್ರಾಚೀನ ಕಾಲದಲ್ಲಿ ಮಧ್ಯಕಾಲೀನ ಹಾಗೂ ಆಧುನಿಕ ಕಾಲದಲ್ಲೂ ಸಹ ಈ ಹೈನುಗಾರಿಕೆ ಉದ್ಯಮವು ಜಾತ್ರೆಗಳ ಮುಖಾಂತರವಾಗಿ ಬೆಳೆದುಬಂದಿದ್ದು ಇದರಿಂದ ಪ್ರಚಲಿತ ದಿನದಲ್ಲೂ ಜಾತ್ರೆಯ ಮುಖಾಂತೆರವೂ ಸಹ ಹೈನುಗಾರಿಕೆ ಉದ್ಯಮವು ನಡೆಯುತ್ತಿದ್ದು ತನ್ನದೇ ಆದಂತಹ ಒಂದು ಸ್ಥಾನಮಾನವನ್ನು ಗಳಿಸಕೊಂಡಿರುತ್ತದೆ. ಇತ್ತೀಚಿನ ದಿನಗಳಲ್ಲಿ ಹೈನುಗಾರಿಕೆ ಉದ್ಯಮವು ರೈತರು ಮತ್ತು ಸಾರ್ವಜನಿಕರ ನಿಕಟವಾದ ಸಂಪರ್ಕದಿಂದ ಆರ್ಥಿಕ ಬೆಳವಣಿಗೆ ಮತ್ತು ಉದ್ಯೋಗಾವಕಾಸವನ್ನು ನೀಡುವಂತ ಒಂದು ಪ್ರಮುಖ ಉದ್ಯೋಗವಾಗಿದೆ. ಆಧುನಿಕ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪ್ರತಿಯೊಂದು ಹಳ್ಳಿಗಳಿಗೂ ಹೈನುಗಾರಿಕೆ ಉದ್ಯಮದಿಂದ ಹಲವಾರು ರೈತ ಕುಟುಂಬ ಮತ್ತು ಬಡಕುಟುಂಬ ವರ್ಗದವರು ಸಂತೋಷದಿಂದ ಜೀವನವನ್ನು ನಡೆಸಿಕೊಂಡು ಬಂದಿರುತ್ತಾರೆ.

## 4.8 ಪ್ರವಾಸೋಧ್ಯಮದಲ್ಲಿ ಪ್ರಯಾಣ ಏಜೆನ್ಸಿಗಳ ಪಾತ್ರ

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಮೋಟಾರ್ ವಾಹನಗಳು, ಕಾರ್, ಬಾಡಿಗೆ ವಾಹನಗಳು, ಮಿನಿ ಬಸ್ ಗಳು ತುರ್ತು ಸೇವೆಯನ್ನು ನೀಡುವಂತಹ ಅಂಬುಲೆನ್ಸ್ ಸೇರಿದಂತೆ ಒಟ್ಟು 97994 ವಾಹನಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿವೆ. ಇವುಗಳಲ್ಲಿ ಬಾಡಿಗೆ ಕಾರುಗಳು 816 ಮತ್ತು ಆಟೋಗಳು 2094 ಸಂಖ್ಯೆಯಲ್ಲಿದ್ದು,[30] ಜಿಲ್ಲೆಯಲ್ಲಿ ಪ್ರವಾಸಕ್ಕೆ ಬರುವ ಮತ್ತು ಪ್ರವಾಸವನ್ನು ಕೈಗೊಳ್ಳುವ ಪ್ರವಾಸಿಗರಿಗೆ ಸೇವೆಯನ್ನು ನೀಡುತ್ತಿವೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ, ದೊಡ್ಡಬಳ್ಳಾಪುರ, ದೇವನಹಳ್ಳಿ, ಮತ್ತು ಹೊಸಕೋಟೆ ತಾಲ್ಲೂಕುಗಳಲ್ಲಿ ಖಾಸಗಿ ವಾಹನ ಕಂಪನಿಗಳು ಪ್ರವಾಸವನ್ನು ಆಯೋಜಿಸುತ್ತಿದ್ದಾರೆ. ಪ್ರವಾಸಿಗರ ಬೇಡಿಕೆಗೆ ಅನುಗುಣವಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಸ್ಥಳೀಯ ಮತ್ತು ಅಂತರ ರಾಜ್ಯ ಪ್ರವಾಸವನ್ನು ಆಯೋಜಿಸುವ ಟ್ರಾವೆಲ್ ಏಜೆಂಟ್ ಕಂಪನಿಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿವೆ.

ಅವುಗಳೆಂದರೆ ವಿ.ಆರ್,ಎಲ್ ಟ್ರಾವೆಲ್ಸ್ ಕಂಪನಿ ಎಸ್.ಆರ್.ಎಸ್ ಟ್ರಾವೆಲ್ಸ್ ಕಂಪನಿ, ದುರ್ಗಾಂಭ ಟ್ರಾವೆಲ್ಸ್ ಕಂಪನಿ, ಎಸ್.ಎಲ್.ಎನ್ ಟ್ರಾವೆಲ್ಸ್ ಕಂಪನಿಗಳು ಮುಖ್ಯವಾಗಿದೆ. ಇವುಗಳಲ್ಲದೇ ರಾಜ್ಯದ ಪ್ರಮುಖ ಪ್ರವಾಸಿ ಸಂಸ್ಥೆಯಾದ ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಅಭಿವೃದ್ದಿ ನಿಗಮವನ್ನು ಒಳಗೊಂಡಂತೆ ಬೆಂಗಳೂರು ಮತ್ತು ಇತರ ನಗರಗಳಲ್ಲಿರುವ ಟ್ರಾವೆಲ್ ಏಜೆಂಟ್ ಕಂಪನಿಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಪ್ರವಾಸಗಳನ್ನು ಆಯೋಜಿಸುತ್ತಿದ್ದಾರೆ. ಹೀಗೆ ಜಿಲ್ಲೆಯಲ್ಲಿನ ಮತ್ತು ಇತರ ಭಾಗದಲ್ಲಿರುವ ವಾಹನ ಕಂಪನಿಗಳು ಜಿಲ್ಲೆಯ

ಪ್ರವಾಸೋದ್ಯಮ ಅಭಿವೃದ್ಧಿಗೆ ಉತ್ತಮವಾದ ಕೊಡುಗೆಯನ್ನು ನೀಡುತ್ತಿವೆ. ಇವುಗಳ ಸೇವೆಯು ಜಿಲ್ಲೆಯ ಪ್ರವಾಸೋದ್ಯಮ ಮತ್ತು ಇತರ ಆರ್ಥಿಕ ಪ್ರಗತಿಗೆ ಪ್ರಧಾನವಾಗಿದೆ.

## 4.9 ಹೋಟೇಲ್ ಮತ್ತು ಪ್ರವಾಸಿ ವಸತಿ ವ್ಯವಸ್ಥೆ

ಪ್ರವಾಸಿ ನಿವಾಸಿತರಲ್ಲದ ಸ್ಥಳಕ್ಕೆ ಪ್ರಯಾಣಿಸಿದಾಗ ಅವನಿಗೆ ವಸತಿ ಕೊಡುವುದೇ ಹೋಟೆಲುಗಳು, ಅವು ಅವನಿಗೆ ವಸತಿ ಸೌಲಭ್ಯ ಅಲ್ಲದೆ ಉತ್ತಮ ಆಹಾರ ಒದಗಿಸುತ್ತವೆ.[31] ಅನ್ನಛತ್ರ, ಧರ್ಮಶಾಲೆ, ಸಮುದಾಯ ಭವನ, ಹೋಟೆಲ್‌ಗಳ ವಸತಿ ಗೃಹಗಳು ವಸತಿ ಸೌಲಭ್ಯ ಒದಗಿಸುತ್ತವೆ. ವಸತಿ ಸೌಲಭ್ಯಗಳಿಲ್ಲದಿದ್ದರೆ ಪ್ರವಾಸಿ ಆಕರ್ಷಣೆ ಇದ್ದರೂ ಪ್ರವಾಸಗಳು ಬರುವುದಿಲ್ಲ ಆದ್ದರಿಂದ ವಸತಿ ಪ್ರವಾಸೋದ್ಯಮದ ಹೃದಯ ಇದ್ದಂತೆ.ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಪ್ರವಾಸೋದ್ಯಮಕ್ಕೆ ಪೂರಕವಾಗಿರುವ ವಸತಿ ಮತ್ತು ಹೋಟೇಲ್ ಉದ್ಯಮವು ಸಹ ಬೆಳವಣಿಗೆಯಾಗಿದೆ. ಪ್ರಾಚೀನ ಕಾಲದಿಂದಲೂ ಜಿಲ್ಲೆಯಲ್ಲಿ ಸಾರ್ವಜನಿಕ ವಸತಿ ಕೇಂದ್ರಗಳಿದ್ದವು. ವಿವಿಧ ರಾಜಮನೆತನಗಳ ಆಡಳಿತದ ಕಾಲದಲ್ಲಿ ಹಲವು ಧರ್ಮ ಛತ್ರಗಳನ್ನು ವಿಶ್ರಾಂತಿ ಧಾಮಗಳಾಗಿ ಬಳಸುತ್ತಿದ್ದರು, ಪ್ರಮುಖ ಧಾರ್ಮಿಕ ಮತ್ತು ಹೆಚ್ಚು ಜನ ವಸತಿಯಿದ್ದ ಸ್ಥಳಗಳಲ್ಲಿ ಇವುಗಳನ್ನು ನಿರ್ಮಾಣ ಮಾಡಲಾಯಿತು. ದಾರಿ ಹೋಕರಿಕೆ ಮತ್ತು ಪ್ರಯಾಣಿಕರಿಗೆ ಅನುಕೂಲವಾಗುವ ನಿಟ್ಟಿನಲ್ಲಿ ರಸ್ತೆ ಮಾರ್ಗಗಳಲ್ಲಿ ಕಲ್ಲು ಮಂಟಪಗಳನ್ನು ನಿರ್ಮಾಣ ಮಾಡಿದರು. ಇಂದಿಗೂ ಬೆಂಗಳೂರು ಗ್ರಾಮಾತರ ಜಿಲ್ಲೆಯಲ್ಲಿ ನೆಲಮಂಗಲ, ದೊಡ್ಡಬಳ್ಳಾಪುರ, ದೇವನಹಳ್ಳಿ, ಹೊಸಕೋಟೆ ತಾಲ್ಲೂಕುಗಳನ್ನು ಒಳಗೊಂಡಂತೆ ಇತರ ಭಾಗಗಳಲ್ಲಿ ನೋಡಬಹುದಾಗಿದೆ. ಮತ್ತು ಹೊರಗಿನಿಂದ ಬಂದ ಅಧಿಕಾರಿಗಳಿಗೆ ಮತ್ತು ಪ್ರವಾಸಿಗರಿಗೆ ಪ್ರವಾಸಿ ತಾಣಗಳನ್ನು ಸ್ಥಾಪನೆಯನ್ನು ಮಾಡಲಾಗಿದೆ. ಜಿಲ್ಲೆಗೆ ಆಗಮಿಸುವ ಪ್ರವಾಸಿಗರಿಗೆ ವಸತಿಯನ್ನು ನೀಡುತ್ತಿದ್ದವು. ಸ್ವಾತಂತ್ರ್ಯ ನಂತರದಲ್ಲಿ ಪ್ರತಿ ತಾಲ್ಲೂಕು ಕೇಂದ್ರದಲ್ಲಿ ಕೆಲವು ಹೋಬಳಿ ಸ್ಥಳಗಳಲ್ಲಿ ಪ್ರವಾಸಿ ಮಂದಿರಗಳನ್ನು ನಿರ್ಮಾಣ ಮಾಡಲಾಗಿದೆ. ಇವುಗಳು ಜಿಲ್ಲೆಗ ಪ್ರವಾಸ ಕೈಗೊಳ್ಳುವ ಅಧಿಕಾರಿಗಳಿಗೆ ಉತ್ತಮವಾದ ವಸತಿಯನ್ನು ಒದಗಿಸುತ್ತಿವೆ. ಇಂತಹ ಪ್ರವಾಸಿಗಳು ರಾಜ್ಯ ಲೋಕೋಪಯೋಗಿ ಇಲಾಖೆಯು ನಿರ್ವಹಣೆ ಮಾಡುತ್ತಿದೆ. (ಛಾಯಾ ಚಿತ್ರ – 28)

ಸರ್ಕಾರಿ ಪ್ರವಾಸಿ ಮಂದಿರಗಳಲ್ಲದೇ ಜಿಲ್ಲೆಯ ಎಲ್ಲಾ ತಾಲ್ಲೂಕುಗಳಲ್ಲಿ ಖಾಸಗಿ ವಸತಿ ಗೃಹಗಳಿವೆ. ಹೊರಗಿನ ಪ್ರದೇಶಗಳಿಂದ ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಭೇಟಿ ನೀಡುವ ಪ್ರವಾಸಿಗರಿಗೆ ಉತ್ತಮ ವಸತಿ ಸೌಲಭ್ಯವನ್ನು ನೀಡುತ್ತಿವೆ. ಆಧುನಿಕ ರೀತಿಯ ಎಲ್ಲಾ

ಸೌಲಭ್ಯಗಳನ್ನು ಹೊಂದಿದ್ದು, ಜಿಲ್ಲೆಯಲ್ಲಿರುವ ವಿಶಾಲವಾದ ರೆಸಾರ್ಟ್‌ಗಳು ನಿರ್ಮಾಣಗೊಂಡಿವೆ, ಅವುಗಳಲ್ಲಿ ಪ್ರಮುಖವಾದ ರೆಸಾರ್ಟ್‌ಗಳು ಎಂದರೆ ಧರ್ಮಶ್ರೀ ರೆಸಾರ್ಟ್ ನೆಲಮಂಗಲ ತಾಲ್ಲೂಕಿನಲ್ಲಿದೆ. ಇದಲ್ಲದೇ ಜಿಲ್ಲೆಯ ಪ್ರಮುಖವಾದ ರಾಷ್ಟ್ರೀಯ ಹೆದ್ದಾರಿ ಭಾಗದಲ್ಲಿ ಹಲವು ಖಾಸಗಿ ವಸತಿ ಗೃಹಗಳು ಪ್ರವಾಸಿಗರಿಗೆ ಸೇವೆಯನ್ನು ನೀಡುತ್ತಿವೆ ಮತ್ತು ಪ್ರವಾಸಿಗರಿಗೆ ಉತ್ತಮ ಬಗೆಯ ಆಹಾರವನ್ನು ಒದಗಿಸುತ್ತಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಸುಮಾರು 175 ಹೋಟೇಲ್ ಗಳು 12 ರೆಸ್ಟೋರೆಂಟ್‌ಗಳು ಪ್ರವಾಸಿಗರಿಗೆ ಉತ್ತಮ ಆಹಾರವನ್ನು ನೀಡುತ್ತಿವೆ.[32] ಪ್ರಮುಖವಾದ ಹೋಟೇಲ್ ಗಳನ್ನು ನೆಲಮಂಗಲ, ದೊಡ್ಡಬಳ್ಳಾಪುರ, ದೇವನಹಳ್ಳಿ, ಹೊಸಕೋಟೆ ತಾಲ್ಲೂಕುಗಳಲ್ಲಿ ಇವೆ. ಅವುಗಳೆಂದರೆ ನೆಲಮಂಗಲ ತಾಲ್ಲೂಕಿನಲ್ಲಿ ಏಕೈಕ ರೆಸಾರ್ಟ್ ಧರ್ಮಶ್ರೀ ರೆಸಾರ್ಟ್ ಪ್ರಮುಖವಾಗಿದೆ. ದೇಶಿಯ ಮತ್ತು ವಿದೇಶಿ ಪ್ರವಾಸಿಗರಿಗೆ ಉತ್ತಮ ಆಹಾರ ನೀಡುವಂತಹ ಪ್ರಖ್ಯಾತವಾದ ರೆಸಾರ್ಟ್‌ನ್ನು ಕಾಣಬಹುದಾಗಿದೆ. ಜಿಲ್ಲೆಯ ರಾಷ್ಟ್ರೀಯ ಹೆದ್ದಾರಿ ಮತ್ತು ಜನ ಸಂದಣಿ ಸೇರುವ ವಿವಿಧ ವೃತ್ತಗಳಲ್ಲಿ ಶಾಕ ಆಹಾರ ಮತ್ತು ಮಾಂಸ ಆಹಾರವನ್ನು ಒದಗಿಸುವ ಡಾಭಗಳಿವೆ. ಡಾಭಗಳು ಆಹಾರದ ಜೊತೆಗೆ ಮಧ್ಯವನ್ನು ಸಹ ಪೂರೈಸುತ್ತವೆ. ಇವುಗಳಲ್ಲದೇ  ಮಧ್ಯ ಮತ್ತು ಆಹಾರವನ್ನು ಒಗಗಿಸುವಂತಹ ಬಾರ್ ಮತ್ತು ರೆಸ್ಟೋರಂಟ್‌ಗಳಿವೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವಿವಿಧ ಬಗೆಯ ಸ್ಥಳೀಯ ಆಹಾರ ಪದ್ದತಿಗೆ ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ತನ್ನ ರಾಗಿ ಮುದ್ದೆಯಿಂದ ಹೆಚ್ಚು ಪ್ರಾಮುಖ್ಯತೆಯನ್ನು ಗಳಿಸಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಉತ್ಪಾದನೆಯಾಗುವ ಆಹಾರ ಧಾನ್ಯಗಳಲ್ಲಿ ರಾಗಿಯು ಪ್ರಥಮ ಸ್ಥಾನ ಹೊಂದಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿನ ವಿವಿಧ ಪ್ರದೇಶಗಳಲ್ಲಿ ಸರಳವಾದ ಮತ್ತು ದುಬಾರಿಯಾದ ಬೆಲೆಯಲ್ಲಿ ಆಹಾರವನ್ನು ನೀಡುವಂತಹ ಹೋಟೇಲ್‌ಗಳು ಸ್ಥಾಪನೆಯಾಗಿವೆ. ಇವುಗಳಲ್ಲಿ ಸಸ್ಯಹಾರಿ ಮತ್ತು ಮಾಂಸಹಾರಿ ಆಹಾರವನ್ನು ಒದಗಿಸುತ್ತಿವೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ 4 ತಾಲ್ಲೂಕುಗಳಲ್ಲಿ ವಿಭಿನ್ನ ಬಗೆಯ ಆಹಾರವನ್ನು ಒದಗಿಸುವಂತೆ ಸಣ್ಣ ಮಧ್ಯಮ ಮತ್ತು ದೊಡ್ಡ ಪ್ರಮಾಣದ ಹೋಟೇಲ್‌ಗಳಿವೆ. ಇವುಗಳಲ್ಲಿ ಕೆಲವು ಬೆಳಗ್ಗೆ ಮತ್ತು ಸಂಜೆ ಕಾರ್ಯನಿರ್ವಹಿಸುತ್ತವೆ. ಇನ್ನು ಕೆಲವು ದಿನ ಪೂರ್ತಿ ಅಂದರೆ ರಾತ್ರಿ 11 ಗಂಟೆಯವರೆಗೂ ಆಹಾರವನ್ನು ಒದಗಿಸುವಂತಹ ಹೋಟೇಲ್ ಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿವೆ.

2018ನೇ ಸಾಲಿನಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ವಿವಿಧ ಬಗೆಯ ಆಹಾರವನ್ನು ಒದಗಿಸುವಂತಹ ಸಾವಿರಾರು ಹೋಟೇಲ್‌ಗಳು ಇವೆ.

ಊಟ ವಸತಿ ಮತ್ತು ಇತರ ಸೇವೆಗಳನ್ನು ಸಾಮಾನ್ಯ ಜನರನ್ನು ಒಳಗೊಂಡಂತೆ ಪ್ರವಾಸಿಗರಿಗೆ ವಿವಿಧ ಬಗೆಯ ಸೇವೆಗಳನ್ನು ಒದಗಿಸುವಂತಹ ಉದ್ಯಮಗಳು ಬೆಂಗಳೂರು ಗ್ರಾಮಾಂತರ ಜಿಲ್ಲಾದ್ಯಂತ ಅಸ್ಥಿತ್ವದಲ್ಲಿವೆ. ಪ್ರವಾಸಿಗರನ್ನು ಆಕರ್ಷಣೆ ಮಾಡುವಲ್ಲಿ ಇವುಗಳ ಪಾತ್ರ ಮಹತ್ವದ್ದಾಗಿದೆ. 2018 ಮತ್ತು 2019ನೆಯ ಸಾಲಿನಲ್ಲಿ ವಿವಿಧ ಬಗೆಯ ಸೇವೆಗಳನ್ನು ನೀಡುತ್ತಿವೆ ಹಾಗೂ ಹಲವು ಉದ್ಯಮಗಳು ಕಾರ್ಯನಿರ್ವಹಿಸುತ್ತಿದ್ದವು. ಅಂದರೆ ದೊಡ್ಡ ಪ್ರಮಾಣದಲ್ಲಿ ಸೇವೆಗಳನ್ನು ನೀಡುತ್ತಿರುವ ಉದ್ಯಮಗಳಿದ್ದು, ಪ್ರವಾಸಿಗರಿಗೆ ಮತ್ತಷ್ಟು ಉತ್ತಮ ಸೇವೆಗಳನ್ನು ನೀಡುತ್ತಿವೆ.  ಹೆಚ್ಚು ಹೆಚ್ಚು ಪ್ರವಾಸಿಗರ ಹರಿವು ಉಂಟಾದಂತೆಲ್ಲ ಇಂತಹ ಉದ್ಯಮಗಳಿಗೆ ಬೇಡಿಕೆ ಹೆಚ್ಚಾಗುತ್ತದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಪ್ರವಾಸಿಗರ ಒಳ ಹರಿವು ಹೆಚ್ಚಾಗುತ್ತಿದೆ, ಎಂಬುದನ್ನು ತಿಳಿಯುತ್ತದೆ.

ನೆಲಮಂಗಲ, ದೇವನಹಳ್ಳಿ, ಹೊಸಕೋಟೆ, ದೊಡ್ಡಬಳ್ಳಾಪುರ ತಾಲ್ಲೂಕುಗಳಲ್ಲಿ ಕಡಿಮೆ ಬೆಲೆ ಆಹಾರವನ್ನು ನೀಡುವಂತಹ ಮೆಸ್ಸುಗಳನ್ನು ನೋಡಬಹುದಾಗಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಸ್ಥಳೀಯ ಆಹಾರದೊಂದಿಗೆ ದಕ್ಷಿಣ ಭಾರತ ಮತ್ತು ಉತ್ತರ ಭಾರತದ ಆಹಾರಗಳು ಸಿಗುತ್ತದೆ. ಹಿಂದಿನ ಕಾಲದಿಂದಲೂ ಪ್ರಾಮುಖ್ಯತೆಯನ್ನು ಪಡೆದಿದ್ದ ರಾಗಿ ಮುದ್ದೆ ಊಟವು ಇಂದು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲದೇ ಇತರ ನಗರಗಳಲ್ಲಿಯೂ ಹೆಚ್ಚು ಪ್ರಖ್ಯಾತಿಯನ್ನು ಪಡೆದುಕೊಳ್ಳುತ್ತಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ನಡೆಯುವ ವಿವಿಧ ವಿಶೇಷ ಸಮಾರಂಭಗಳಂದು ರಾಗಿ ಮುದ್ದೆ ಊಟವನ್ನು ಆಯೋಜಿಸುತ್ತಿದ್ದಾರೆ. ರಾಗಿಯು ಹೊಂದಿರುವ ಉತ್ತಮ ಪೌಷ್ಟಿಕಾಂಶಗಳಿಂದ ತನ್ನ ಪ್ರಸಿದ್ದಿಯನ್ನು ಪಡೆದುಕೊಂಡಿದೆ.

ಜಿಲ್ಲೆಯ ಹೋಟೆಲ್‌ಗಳಲ್ಲಿ ವಿವಿಧ ಬಗೆಯ ಆಹಾರಗಳನ್ನು ಗ್ರಾಹಕರಿಗೆ ಮಾಂಸದ ಪದಾರ್ಥಗಳಾದ ವಿವಿಧ ಬಗೆಯ ಆಹಾರಗಳು ದೊರೆಯುತ್ತವೆ. ಇದರೊಂದಿಗೆ ಜಿಲ್ಲೆಯಲ್ಲಿ ಉತ್ಪಾದನೆ ಮಾಡಿರುವ ಮತ್ತು ಬೇರೆ ಪ್ರದೇಶಗಳಿಂದ ತರಿಸಿರುವ ಮೀನು ಆಹಾರವು ಸಹ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನಗರಗಳು ಕೆಲವು ಹೋಟೆಲುಗಳಲ್ಲಿ ಪೂರೈಸಲಾಗುತ್ತಿದೆ.

ಇತ್ತೀಚಿಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಹೆಚ್ಚಾಗಿ ಪ್ರವಾಸಿಗರಿಗೆ ಆಹಾರವನ್ನು ಪೂರೈಸುವಲ್ಲಿ ಹೋಟೆಲ್ ಹೆಚ್ಚಾಗಿ ನಿರ್ಮಾಣಗೊಂಡಿವೆ. ಇಂತಹ ಹೋಟೆಲ್ ಪ್ರಮುಖ ರಸ್ತೆ

ಭಾಗದಲ್ಲಿ ಕಾರ್ಯನಿರ್ವಹಿಸುತ್ತಿವೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಉತ್ತಮ ರಸ್ತೆ ಸಂಪರ್ಕದೊಂದಿಗೆ ವ್ಯಾಪಾರ ಮತ್ತು ವಾಣಿಜ್ಯಕ್ಕೆ ಹೆಚ್ಚು ಪ್ರಸಿದ್ಧಿಯನ್ನು ಪಡೆದುಕೊಂಡಿರುವುದರಿಂದ ಅಧಿಕ ಸಂಖ್ಯೆಯಲ್ಲಿ ವ್ಯಾಪಾರಸ್ಥರು ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಭೇಟಿ ನೀಡುತ್ತಿದ್ದಾರೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಉತ್ತಮವಾದ ವಿವಿಧ ಬಗೆಯ ಪ್ರವಾಸಿ ತಾಣಗಳನ್ನು ಒಳಗೊಂಡಿದ್ದು ಹೆಚ್ಚಿನ ಸಂಖ್ಯೆಯಲ್ಲಿ ಪ್ರವಾಸಿಗರು ಆಗಮಿಸುತ್ತಿರುವುದರಿಂದ ಹೋಟೆಲ್‌ಗಳು ಹೆಚ್ಚು ಮಹತ್ವವನ್ನು ಪಡೆದುಕೊಂಡಿವೆ.

ಜಿಲ್ಲೆಯಲ್ಲಿ ಸ್ಥಳೀಯವಾಗಿ ಲಭ್ಯವಾಗುವಂತಹ ಪಾರಂಪರಿಕವಾದ ವಿವಿಧ ಬಗೆಯ ಪಾನೀಯಗಳನ್ನು ಪೂರೈಸುವ ಕೇಂದ್ರಗಳಿವೆ. ಜಿಲ್ಲೆಯ ಹೋಟೆಲ್ ಮತ್ತು ಚಹಾ, ಕಾಫಿಯನ್ನು ಸಹ ಒದಗಿಸುತ್ತಿವೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಾದ್ಯಂತ ಎಳನೀರು ಪ್ರಮುಖವಾಗಿ ದೊರೆಯುವಂತಹ ಪಾನೀಯವಾಗಿದೆ. ಅಲ್ಲದೇ ಎಪ್ರಿಲ್–ಮೇ ಅವಧಿಯಲ್ಲಿ ಆಧುನಿಕ ಮಾದರಿಯ ಇತರ ಪಾನೀಯಗಳು ಸಹ ಜಿಲ್ಲೆಯಲ್ಲಿ ಸಿಗುತ್ತವೆ.

1997ಕ್ಕಿಂತ ಮುಂಚೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಈಚಲು ಮರದಿಂದ ತೆಗೆದ **'ಕಲ್ಲು'** ಎಂಬ ಪಾನೀಯಕ್ಕೆ ಹೆಚ್ಚು ಪ್ರಖ್ಯಾತಿಯನ್ನು ಪಡೆದಿತ್ತು. ಆದರೆ ಸರ್ಕಾರವು ಅದರ ಉಪಯೋಗವನ್ನು ಮತ್ತು ಉತ್ಪಾದನೆಯನ್ನು 1997ರಲ್ಲಿ ನಿಷೇದಿಸಿತು. ಇದರೊಂದಿಗೆ ಅಧಿಕ ಬೇಡಿಕೆಯನ್ನು ಹೊಂದಿದ್ದ **'ಕಲ್ಲು'** ತನ್ನ ಅಸ್ಥಿತ್ವವನ್ನು ಕಳೆದುಕೊಂಡಿತು. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ವಿವಿಧ ಬಗೆಯ ಮದ್ಯವನ್ನು ಮಾರಾಟ ಮಾಡುವಂತಹ ವೈನ್ ಮತ್ತು ಬಾರ್ ಅಂಡ್ ರೆಸ್ಟೋರೆಂಟ್ ಒಳಗೊಂಡಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ವೈನ್ ಅಂಗಡಿಗಳು, ಬಾರ್ ಅಂಡ್ ರೆಸ್ಟೋರೆಂಟ್ ಮತ್ತು ಚಿಲ್ಲರೆ ಮಾರಾಟದ ಅಂಗಡಿಗಳು ಹಾಗೂ ಕ್ಲಬ್‌ಗಳನ್ನು ಒಳಗೊಂಡಂತೆ 183 ಮದ್ಯದ ಅಂಗಡಿಗಳಿವೆ.[33] ವಿಭಿನ್ನ ಮಾದರಿಯ ಮದ್ಯವು ಸರ್ಕಾರದಿಂದ ಇವುಗಳಿಗೆ ಪೂರೈಕೆಯಾಗುತ್ತಿದ್ದು, ಮದ್ಯ ಪ್ರಿಯರಿಗೆ ಉತ್ತಮ ಅವಕಾಶವನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಕಲ್ಪಿಸಿದೆ.

ಈ ಜಿಲ್ಲೆಯಲ್ಲಿ ವಿವಿಧ ತೋಟಗಾರಿಕೆ ಉತ್ಪನ್ನಗಳಿಗೆ ರಾಜ್ಯದಲೇ ಪ್ರಖ್ಯಾತಿಯನ್ನು ಪಡೆದುಕೊಂಡಿದೆ. ಜಿಲ್ಲೆಯಲ್ಲಿ ಆಹಾರ ಜೊತೆಗೆ ವಿವಿಧ ಬಗೆಯ ಹಣ್ಣುಗಳು ಸಹ ಪ್ರವಾಸಿಗರಿಗೆ ಲಭಿಸುತ್ತವೆ. ಅಂತಹ ಪ್ರಮುಖವಾದ ಹಣ್ಣುಗಳಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಮತ್ತು ಅದರ ಸುತ್ತಲಿನ ಪ್ರದೇಶದಲ್ಲಿ ಮಾವು, ಸಪೋಟ, ಪರಂಗಿ, ಸೀಬೆ, ಹಲಸು, ವಿವಿಧ ಬಗೆಯ

ದ್ರಾಕ್ಷೀ, ಬಾಳೆ ಹಣ್ಣು, ಚಕ್ಕೋತ್ತ, ನೇರಳೆ ಹಣ್ಣು ಮತ್ತು ಕಡಲೇಕಾಯಿ, ಸೀತಾಫಲ ಹಣ್ಣುಗಳು ಪ್ರಮುಖವಾಗಿದೆ.

ಕರ್ನಾಟಕ ರಾಜ್ಯ ಪ್ರವಾಸೊದ್ಯಮ ಇಲಾಖೆಯ ಅನುದಾನದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕೆಲವು ಪ್ರಮುಖವಾದ ಪ್ರವಾಸ ತಾಣಗಳಲ್ಲಿ ವಸತಿನಿಲಯಗಳನ್ನು ನಿರ್ಮಾಣ ಮಾಡಲಾಗಿದೆ. ಮುಖ್ಯವಾಗಿ ಶಿವಗಂಗೆಬೆಟ್ಟ, ಮಾಕಳಿದುರ್ಗ, ಘಾಟಿ ಸಿಬ್ರಮಣ್ಯ, ನಿಜಗಲ್‌ಬೆಟ್ಟ, ಹೆಗುಂದಬೆಟ್ಟ, ವಿಮಾನ ನಿಲ್ದಾಣದಲ್ಲಿ ತಾಲ್ಲೂಕು ಇಲಾಖೆಯು ತನ್ನ ಅನುದಾನದಿಂದ ಪ್ರವಾಸಿಗರಿಗೆ ಅನುಕೂಲವಾಗುವಂತೆ ಸಮುದಾಯ ಭವನ, ವಸತಿ ನಿಲಯಗಳನ್ನು ನಿರ್ಮಾಣ ಮಾಡಿದೆ. ಇವುಗಳು ಪ್ರವಾಸಿಗರಿಗಾಗಿ ವಿಷೇಶವಾಗಿ ನಿರ್ಮಾಣ ಮಾಡಲಾಗಿದೆ.

ಇವುಗಳಲ್ಲದೇ ಜಿಲ್ಲೆಯ ಎಲ್ಲಾ ತಾಲ್ಲೂಕು ಕೇಂದ್ರಗಳಲ್ಲಿ ಇರುವಂತಹ ಖಾಸಗಿ ವಸತಿ ನಿಲಯಗಳು ಪ್ರವಾಸಿಗರಿಗೆ ಅನುಕೂಲವನ್ನು ಕಲ್ಪಿಸಿವೆ. ಸರ್ಕಾರದ ಪ್ರವಾಸಿ ಮಂದಿರಗಳು ಸಹ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪ್ರಮುಖ ಸ್ಥಳಗಳಲ್ಲಿದ್ದು ಪ್ರವಾಸಿಗರಿಗೆ ಸೌಲಭ್ಯವನ್ನು ನೀಡುತ್ತಿವೆ. ಪ್ರಮುಖ ಧಾರ್ಮಿಕ ಮತ್ತು ಐತಿಹಾಸಿಕ ಪ್ರವಾಸಿ ತಾಣಗಳಲ್ಲಿ ವಿವಿಧ ಸಮುಧಾಯಗಳು ತಮ್ಮ ಜನಾಂಗದ ಸಮುದಾಯ ಭವನಗಳನ್ನು ನಿರ್ಮಾಣ ಮಾಡಿಕೊಂಡಿದ್ದರೆ. ಈ ಮೂಲಕವಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿನ ವಸತಿ ವ್ಯವಸ್ಥೆಯು ಪ್ರವಾಸೋದ್ಯಮ ಬೆಳವಣಿಗೆಗೆ ಪೂರಕವಾಗಿದೆ.

ಬೆಂಗಳೂರು ಗ್ರಾಮಾಂತರ ಪ್ರದೇಶಗಳಲ್ಲಿ ವಿಹಾರ ತಾಣಗಳನ್ನು ಪ್ರಸ್ತುತವಾಗಿ ಅಭಿವೃದ್ದಿಯನ್ನ ಪಡೆಸುತ್ತಿದ್ದಾರೆ ಅದರಲ್ಲಿ ಪ್ರಮುಖವಾಗಿ ಬೆಟ್ಟಗಳಲ್ಲಿ, ಶಿವಗಂಗೆ ಬೆಟ್ಟ ರಂಗನಾಥಬೆಟ್ಟ, ಸಿದ್ದರಬೆಟ್ಟ, ಮಾಕಳಿದುರ್ಗ, ಹುಲ್ಲಡಿಬೆಟ್ಟ, ಕುಂದಾಣ ಬೆಟ್ಟ ಇವು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಅಭಿವೃದ್ದಿಯನ್ನು ಪಡೆಸಿಕೊಂಡಿದ್ದಾರೆ. ಇಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಂಡು ಪ್ರವಾಸಿಗರು ಆಕರ್ಷಿತರಾಗಲು ಅತಿಯಾದ ಪ್ರಭಾವವನ್ನೆ ಬೀರಿರುತ್ತಾರೆ. ಮುಂದಿನ ದಿನಗಳಲ್ಲಿ ಎಲ್ಲಾ ಬೇರೆ ಬೇರೆ ಎಲ್ಲಾ ಸ್ಥಳಗಳನ್ನು ವಿಹಾರ ತಾಣಗಳಾಗಿ ಮಾಡಬಹುದೆಂದು ಹೇಳಬಹುದು.

## 4.10 ಬ್ಯಾಂಕಿಂಗ್ ಸೇವೆಗಳು

ಪ್ರವಾಸಿಗರಿಗೆ ಉತ್ತಮ ಬ್ಯಾಂಕಿಂಗ್ ಸೇವೆಯನ್ನು ನೀಡುವ ನಿಟ್ಟಿನಲ್ಲಿ ಖಾಸಗಿ ಮತ್ತು ಸರ್ಕಾರಿ ವಾಣಿಜ್ಯ ಮತ್ತು ಸಹಕಾರಿ ಬ್ಯಾಂಕುಗಳು ಕಾರ್ಯನಿರ್ವಹಿಸುತ್ತಿವೆ. ಪ್ರಮುಖವಾಗಿ ಭಾರತೀಯ ಸ್ಟೇಟ್ ಬ್ಯಾಂಕ್, ಕೆನರಾ ಬ್ಯಾಂಕ್, ಕರ್ನಾಟಕ ಬ್ಯಾಂಕ್ ಒಳಗೊಂಡಂತೆ ಇತರ ವಾಣಿಜ್ಯಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿದ್ದು ಗ್ರಾಹಕರಿಗೆ ಸೇವೆಯನ್ನು ನೀಡುತ್ತಿವೆ. ಪ್ರವಾಸಿಗರಿಗೆ ಅಗತ್ಯವಾದ ಹಣವನ್ನು ಪಡೆಯಲು ತಾಲ್ಲೂಕು ಕೇಂದ್ರಗಳಲ್ಲಿ ಮತ್ತು ಪ್ರಮುಖ ಇತರ ಸ್ಥಳಗಳಲ್ಲಿ ಹಣ ಪಡೆಯುವ ಯಂತ್ರಗಳನ್ನು ನಿರ್ಮಾಣ ಮಾಡಿವೆ. ಅತಿ ಹೆಚ್ಚು ಜನಸಂಖ್ಯೆಯ ಚಲನೆಯಾಗುವ ಸ್ಥಳಗಳಲ್ಲಿ ಈ ಹಣ ತೆಗೆಯುವ ಎ.ಟಿ.ಎಂ. ಕೇಂದ್ರಗಳನ್ನು ಸ್ಥಾಪಿಸಿವೆ. ಜಿಲ್ಲೆಯ ಪ್ರವಾಸೋದ್ಯಮ ಅಭಿವೃದ್ಧಿಯ ನಿಟ್ಟಿನಲ್ಲಿ ವಾಹನಗಳಿಗೆ ಇಂಧನವನ್ನು ಪೂರೈಸುವ ಭಾರತ ಪೆಟ್ರೋಲಿಯಂ, ಹಿಂದೂಸ್ಥಾನ್ ಪೆಟ್ರೋಲಿಯಂ ಮತ್ತು ಇಂಡಿಯನ್ ಆಯಿಲ್ ಕಾರ್ಪೋರೇಷನ್‌ಗಳು ತಮ್ಮ ಡೀಲರ್ ಮುಖೇನವಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಪೆಟ್ರೋಲ್ ಮತ್ತು ಡೀಸಲ್‌ನ್ನು ಪೂರೈಸುವ ಸ್ಟೇಷನ್‌ಗಳನ್ನು ಸ್ಥಾಪಿಸಿವೆ. ವಾಹನಗಳ ರಿಪೇರಿ ಮಾಡುವ ಮೈಕಾನಿಕ್ ಷಾಪ್‌ಗಳು, ಪಂಚರ್ ಅಂಗಡಿಗಳು, ಟೈಯರ್‌ಗಳ ಮಾರಾಟ ಕೇಂದ್ರಗಳು ವಾಹನಗಳ ಬಿಡಿ ಭಾಗಗಳ ಅಂಗಡಿಗಳನ್ನು ಕಾಣಬಹುದಾಗಿದೆ. ಇವುಗಳು ಸ್ಥಳಿಯರಿಗೆ ಅಲ್ಲದೇ ಪ್ರವಾಸಿಗರಿಗೂ ಉತ್ತಮ ಸೇವೆಯನ್ನು ನೀಡುತ್ತಿವೆ.

## 4.11 ರಕ್ಷಣೆ ಮತ್ತು ಆರೋಗ್ಯ ಸೇವೆಗಳು

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಉತ್ತಮವಾದ ಪೋಲಿಸ್ ವ್ಯವಸ್ಥೆಯನ್ನು ಒಳಗೊಂಡಿದೆ. ಬ್ರಿಟಿಷರ ಕಾಲದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಆತ್ಯಾಧುನಿಕ ಮಾದರಿಯ ಪೋಲಿಸ್ ವ್ಯವಸ್ಥೆಯು ಪ್ರಾರಂಭವಾಯಿತು. ಸ್ಥಳಿಯರು ಮತ್ತು ಪ್ರವಾಸಿಗರನ್ನು ಒಳಗೊಂಡಂತೆ ರಕ್ಷಣೆಯನ್ನು ಒದಗಿಸುವ ಪೋಲಿಸ್ ಇಲಾಖೆಯನ್ನು ಹೊಂದಿದ್ದು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಐ.ಪಿ.ಎಸ್. ಅಧಿಕಾರಿಗಳು ಮತ್ತು ಜಿಲ್ಲಾ ಪೋಲಿಸ್ ಅದೀಕ್ಷಕರಾಗಿ ಸೇವೆಯನ್ನು ಸಲ್ಲಿಸುತ್ತಿದ್ದಾರೆ.

ಜಿಲ್ಲೆಯ ವಿವಿಧ ಪ್ರದೇಶಗಳಲ್ಲಿ 21 ಪೋಲಿಸ್ ಠಾಣೆಗಳು, ಒಂದು ಜಿಲ್ಲಾ ಪೋಲಿಸ್ ವರಿಷ್ಠಾಧಿಕಾರಿಗಳ ಕಛೇರಿ ಹೊಂದಿದ್ದು.[34] ತಾಲ್ಲೂಕು ಮತ್ತು ಕೆಲವು ಹೋಬಳಿ ಕೇಂದ್ರಗಳಲ್ಲಿ ರಕ್ಷಣಾ ಸೇವೆಯನ್ನು ನೀಡುತ್ತಿವೆ. ಪ್ರವಾಸಿಗರಿಗೆ ತೊಂದರೆ ಉಂಟಾದಾಗ ಪೋಲಿಸ್ ಇಲಾಖೆಯ ಸೇವೆಯನ್ನು ಪಡೆಯುವ ಮತ್ತು ರಕ್ಷಣೆಯನ್ನು ಒದಗಿಸುವ ನಿಟ್ಟಿನಲ್ಲಿ ಮಹತ್ವದ

ಪಾತ್ರವನ್ನು ವಹಿಸುತ್ತದೆ. ಆಕಸ್ಮಿಕವಾಗಿ ಸಂಭವಿಸುವ ಅಗ್ನಿ ದುರಂತಗಳನ್ನು ತಡೆಯುವ ನಿಟ್ಟಿನಲ್ಲಿ ಜಿಲ್ಲೆಯಲ್ಲಿ 04 ಅಗ್ನಿಶಾಮಕ ಠಾಣೆಗಳಿವೆ. 07 ವಾಹನಗಳನ್ನು ಹೊಂದಿದು[35] ಜಿಲ್ಲೆಯಲ್ಲಿ ಉದ್ಭವಿಸುವಂತಹ ಅಗ್ನಿ ದುರಂತಗಳು ಮತ್ತು ಇತರ ತುರ್ತು ಅವಘಡಗಳನ್ನು ನಿಭಾಯಿಸುವಲ್ಲಿ ಮುಖ್ಯವಾದ ಪಾತ್ರವನ್ನು ವಹಿಸಿವೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಆಗಮಿಸುವ ಪ್ರವಾಸಿಗರಿಗೆ ವೈದ್ಯಕೀಯ ಸೇವೆಗಳು ಸಹ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವಿವಿಧ ಭಾಗದಲ್ಲಿ ದೊರೆಯುತ್ತವೆ. ಜಿಲ್ಲೆಯಲ್ಲಿ ಉನ್ನತ ವೈದ್ಯಕೀಯ ಶಸ್ತ್ರ ಚಿಕಿತ್ಸೆಗಳನ್ನು ಒಳಗೊಂಡಂತೆ ವಿವಿಧ ಬಗೆಯ ತುರ್ತು ಸೇವೆಗಳನ್ನು ಒದಗಿಸುವ ಆಸ್ಪತ್ರೆಗಳು ಮತ್ತು ನರ್ಸಿಂಗ್ ಹೋಮ್‌ಗಳಿವೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರ ನಗರದ ಸಮೀಪವಿರುವ ಆರ್.ಎಲ್. ಜಾಲಪ್ಪ ಆಸ್ಪತ್ರೆ ಮತ್ತು ವೈದ್ಯಕೀಯ ಸಂಶೋಧನ ಕೇಂದ್ರ ನೆಲಮಂಗಲ ತಾಲ್ಲೂಕಿನ ಬೆಂಗಳೂರು ಹತ್ತಿರವಿರುವ ಸಿದ್ಧಾರ್ಥ ಆಸ್ಪತ್ರೆ ಮತ್ತು ಸಂಶೋಧನ ಕೇಂದ್ರ, ತಾಲ್ಲೂಕು ಸರ್ಕಾರಿ ಆಸ್ಪತ್ರೆ ಪ್ರಮುಖವಾಗಿವೆ.

ಇಲ್ಲಿ ದಿನದ 24 ಗಂಟೆಗಳ ವೈದ್ಯಕೀಯ ಸೇವೆಯು ಲಭ್ಯವಿರುತ್ತದೆ. ಇವುಗಳಲ್ಲದೇ ಒಂದು ದಂತ ವೈದ್ಯಕೀಯ ಆಸ್ಪತ್ರೆಯನ್ನು ಒಳಗೊಂಡಂತೆ ಹಲವಾರು ಸರ್ಕಾರಿ ಪ್ರಾಥಮಿಕ ಆರೋಗ್ಯ ಕೇಂದ್ರಗಳು, ಉಪ ಆರೋಗ್ಯ ಕೇಂದ್ರಗಳು, ಖಾಸಗಿ ಕ್ಲಿನಿಕ್ ಮತ್ತು ನರ್ಸಿಂಗ್ ಹೋಮ್‌ಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿದ್ದು ಉತ್ತಮ ರೀತಿಯಲ್ಲಿ ವೈದ್ಯಕೀಯ ಸೇವೆಗಳನ್ನು ರೋಗಿಗಳಿಗೆ ನೀಡುತ್ತಿವೆ. ಜಿಲ್ಲೆಯಲ್ಲಿನ ಹನ್ನೊಂದು ತಾಲ್ಲೂಕು ಆಸ್ಪತ್ರೆ 57 ಖಾಸಗಿ ಆಸ್ಪತ್ರೆಗಳು ಮತ್ತು 48 ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಒಳಗೊಂಡಂತೆ 960 ಔಷಧಿ ಅಂಗಡಿಗಳು ಜಿಲ್ಲೆಯಲ್ಲಿ ವೈದ್ಯಕೀಯ ಸೇವೆಯನ್ನು ಒದಗಿಸುವಲ್ಲಿ ಮುಖ್ಯವಾಗಿವೆ.[36]

# ಕೊನೆ ಟಿಪ್ಪಣಿ

1. *ಡ್ರಾಪ್ಟ ಟೂರಿಸಮ್ ಪಾಲಿಸಿ ಆಫ್ ಕರ್ನಾಟಕ* 2014–19 ಡಿಪಾರ್ಟ್‌ಮೆಂಟ್ ಆಫ್ ಟೂರಿಸಮ್ ಡಿಪಾರ್ಟ್‌ಮೆಂಟ್‌ಆಫ್ ಕರ್ನಾಟಕ. ಬೆಂಗಳೂರು ಪ್ರವಾಸೋದ್ಯಮ ಇಲಾಖೆ ಪು.ಸ.– 06
2. *ಡ್ರಾಪ್ಟ್ ಪ್ರಮ್ ದಿ ಇಕಾನಾಮಿಕ್ ರಿಪೋರ್ಟ್* 2015. ಪು.ಸಂ.– 1–10
3. *Bangalore Rural District Disater Management plan* 2015-16 P. 25-26
4. ಮೂರ್ತೀಶ್ವರಯ್ಯ 2015 *ದೇವನಹಳ್ಳಿ ತಾಲ್ಲೂಕು ಪರಿಚಯ*, ಶಾರದ ಪ್ರಕಾಶನ, ಬೆಂಗಳೂರು ಪು.ಸಂ.– 06–07
5. *ಟ್ರಾನ್ಸ್‌ಪೋರ್ಟ್ ಡಿಪಾರ್ಟ್‌ಮೆಂಟ್ ರಿಪೋರ್ಟ್ ಗೌರ್ನಮೆಂಟ್ ಆಫ್ ಕರ್ನಾಟಕ* 2019 ಪು.ಸಂ.– 02–03
4. ಅದೇ ಪು.ಸಂ.– 02
5. ಅದೇ ಪು.ಸಂ.– 03
6. *ಬೆಂಗಳೂರು ಗ್ರಾಮಾಂತರ ಜಿಲ್ಲೆ ಅಂಕಿ ಅಂಶಗಳ ನೋಟ* 2017–18. ಪು.ಸಂ.– 78–79
7. ಅದೇ ಪು.ಸಂ.– 77
8. ಅದೇ ಪು.ಸಂ.– 79
9. ಅದೇ ಪು.ಸಂ.– 79
10. ಅದೇ ಪು.ಸಂ.– 79–80
11. *ರೈಲ್ವೇ ಇನ್‌ಫರ್‌ಮೇಷನ್ ಪ್ಲಾನ್* 2012 ಪು.ಸಂ.– 01–10

    ಸಂದರ್ಶನ ಹೆಸರು: ದೇವರಾಜು. ವಯಸ್ಸು – 53
12. ಅದೇ ಪು.ಸಂ.– 02
13. ಅದೇ ಪು.ಸಂ.– 04
14. ಅದೇ ಪು.ಸಂ.– 04
15. ಅದೇ ಪು.ಸಂ.– 05
16. ಮೂರ್ತೀಶ್ವರಯ್ಯ 2015 *ದೇವನಹಳ್ಳಿ ತಾಲ್ಲೂಕು ಪರಿಚಯ*, ಶಾರದ ಪ್ರಕಾಶನ, ಬೆಂಗಳೂರು. ಪು.ಸಂ.– 62
19. *ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಅಂಕಿ ಅಂಶಗಳ ನೋಟ.* 2017–18 ಪು.ಸಂ.– 80

20. ಅದೇ ಪು.ಸಂ.– 80

21. ಅದೇ ಪು.ಸಂ.– 83

22. ಅದೇ ಪು.ಸಂ.– 59–60

23. ಅದೇ ಪು.ಸಂ.– 60

24. ಅದೇ ಪು.ಸಂ.– 50

25. ಅದೇ ಪು.ಸಂ.– 60

26. ಅದೇ ಪು.ಸಂ.– 60–61

27. ಸಂದರ್ಶನ – ಹೆಸರು : ಮುನಿರತ್ನಮ್ಮ. ವಯಸ್ಸು : 52

28. ಸಂದರ್ಶನ – ಹೆಸರು : ಗಂಗಬೈಲಯ್ಯ. ವಯಸ್ಸು : 63

29. ಸಂದರ್ಶನ – ಹೆಸರು : ತಿಮ್ಮರಾಯಪ್ಪ. ವಯಸ್ಸು : 68

30. ಅದೇ ಪು.ಸಂ.– 74

31. ಅದೇ ಪು.ಸಂ.– 56–57

32. ಸಂದರ್ಶನ – ಹೆಸರು : ಕಮಲಾಕರ್ ಭಟ್. ವಯಸ್ಸು: 58

33. *ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಅಂಕಿ ಅಂಶಗಳ ನೋಟ* 2017–18. ಪು.ಸಂ.– 151

34. ಅದೇ ಪು.ಸಂ.– 04

35. ಅದೇ ಪು.ಸಂ.– 05

36. ಅದೇ ಪು.ಸಂ.– 99

## ಅಧ್ಯಾಯ – 5
## ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪ್ರವಾಸೋದ್ಯಮದ ಬೆಳವಣಿಗೆ

### 5.1 ಪೀಠಿಕೆ

1970ರ ದಶಕದ ನಂತರದಲ್ಲಿ ಪರಿಸರ ಪ್ರವಾಸೋದ್ಯಮವು ಪ್ರಚಲಿತಕ್ಕೆ ಬಂದಿತು. ಈ ದಶಕದಲ್ಲಿ ಪ್ರವಾಸೋದ್ಯಮವು ಜಾಗತೀಕ ಮಟ್ಟದಲ್ಲಿ ಶೀಘ್ರಗತಿಯಲ್ಲಿ ಬೆಳವಣಿಗೆಯನ್ನು ಹೊಂದುತ್ತಿರುವ ಪ್ರವಾಸೋದ್ಯಮವಾಗಿದೆ. ಜಾಗತೀಕ ಪ್ರವಾಸೋದ್ಯಮದ ಸಂಘಟನೆಯ ಅಧ್ಯಯನದಂತೆ ವಾರ್ಷಿಕವಾಗಿ 5% ಬೆಳವಣಿಗೆಯನ್ನು ಮತ್ತು ಜಗತ್ತಿನ ಜಿ.ಡಿ.ಪಿ, ಯಲ್ಲಿ 6% ರಷ್ಟು ಪಾಲನ್ನು ಹೊಂದಿದೆ. ಇದರಿಂದ ಪರಿಸರ ಪ್ರವಾಸೋಧ್ಯಮದ ಮಹತ್ವ ಮತ್ತು ಅದರ ಪ್ರಭಾವವು ತಿಳಿಯುತ್ತದೆ. ಜಗತ್ತಿನಲ್ಲಿ ಪ್ರವಾಸ ಕೈಗೊಳ್ಳುವ ಪ್ರವಾಸಿಗರು ತಮ್ಮ ಆದಾಯದ ಒಟ್ಟು 11.4% ಪ್ರಮಾಣದಲ್ಲಿ ಪರಿಸರ ಪ್ರವಾಸೋದ್ಯಮಕ್ಕಾಗಿ ವೆಚ್ಚಮಾಡುತ್ತಿದ್ದಾರೆ[1]. ಈ ನಿಟ್ಟಿನಲ್ಲಿ ಪರಿಸರ ಪ್ರವಾಸೋದ್ಯಮದ ಕೇಂದ್ರಗಳು ಸಹ ಭಾರತದಲ್ಲಿವೆ. ಜಾಗತೀಕ ಮಟ್ಟದಲ್ಲಿ ಗುರ್ತಿಸಲ್ಪಟ್ಟಿರುವ ಮತ್ತು ವಿದೇಶಿ ಪ್ರವಾಸಿಗರನ್ನು ಆಕರ್ಷಣೆ ಮಾಡುತ್ತಿರುವ ಸುಮಾರು 12 ಜೀವವೈವಿಧ್ಯ ಪ್ರವಾಸಿ ತಾಣಗಳು ಭಾರತದಲ್ಲಿವೆ.

ಅಂತರಾಷ್ಟ್ರೀಯ ಮಟ್ಟದಲ್ಲಿ ಪ್ರಾಮುಖ್ಯತೆಯನ್ನು ಪಡೆದಿರುವ ಇಂತಹ ಜೀವವೈವಿಧ್ಯ ತಾಣಗಳು ಅಲ್ಲಿನ ಪರಿಸರ ಸಂರಕ್ಷಣೆಯೊಂದಿಗೆ ರಾಷ್ಟ್ರದ ಪ್ರಗತಿಯಲ್ಲಿ ಬಹು ಮುಖ್ಯವಾದ ಪಾತ್ರವನ್ನು ವಹಿಸುತ್ತಿವೆ. ಇದಕ್ಕೆ ಭಾರತದಲ್ಲಿರುವ ಸಸ್ಯಸಂಪತ್ತು ಮತ್ತು ಪ್ರಾಣಿವರ್ಗವೆಂದರೆ ತಪ್ಪಾಗಲಾರದು. ಉಪಖಂಡದಂತಿರುವ ಭಾರತವು ಪರಿಸರ ಪ್ರವಾಸೋದ್ಯಮಕ್ಕೆ ವಿಪುಲವಾದ ಅವಕಾಶಗಳನ್ನು ಹೊಂದಿದೆ. ಪರಿಸರ ಪ್ರವಾಸೋದ್ಯಮವು ಹಲವು ಪ್ರಮುಖವಾದ ಚಟುವಟಿಕೆಗಳನ್ನು ಒಳಗೊಂಡಿದೆ. ಮಾನವನು ಪ್ರವಾಸ ಕೈಗೊಳ್ಳಲು ಮತ್ತು ಅಂತಹ ಪರಿಸರ ಪ್ರವಾಸಿ ತಾಣದಲ್ಲಿ ನಡೆಸಬಹುದಾದ ಕೆಲವು ಪ್ರವಾಸೋಧ್ಯಮಕ್ಕೆ ಪೂರಕವಾದ ಚಟುವಟಿಕೆಗಳನ್ನು ಈ ಕೆಳಗಿನಂತೆ ನೋಟಬಹುದಾಗಿದೆ.

ಪ್ರವಾಸಿಗರು ಪ್ರಾಕೃತಿಕ ಪ್ರವಾಸಿ ತಾಣದಲ್ಲಿ ಸೌಂದರ್ಯ ಪ್ರಕೃತಿ ಸ್ಥಳಗಳು, ಜಲಕ್ರೀಡೆಗಳು, ಛಾಯಚಿತ್ರ, ಮನರಂಜನ ಉದ್ಯಾನವನಗಳು, ಮಿನುಗಾರಿಕೆ ಪದ್ಧತಿ, ತೋಟದ ಪ್ರಯೋಗಾಲಯಗಳು, ಸಾವಯವ ಕೃಷಿ ಪದ್ಧತಿ, ಸೂರ್ಯೋದಯ ಸ್ಥಳಗಳು, ಹಾಗೂ ಇತರ ಚಟುವಟಿಕೆಗಳನ್ನು ನಡೆಸಬಹುದಾಗಿದೆ. ಪ್ರವಾಸೋದ್ಯಮವನ್ನು 1970 ಪ್ರಾರಂಭದ ದಶಕದಲ್ಲಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿತು. ಕಾರಣ ಜಾಗತೀಕ ಮಟ್ಟದಲ್ಲಿ ಪ್ರಾಕೃತಿಕ

ಸಂಪನ್ಮೂಲಗಳನ್ನು ಹೆಚ್ಚು ಹೆಚ್ಚು ಬಳಕೆ ಮಾಡುವುದರ ಮೂಲಕ ಪರಿಸರ ಅಸಮತೋಲನಕ್ಕೆ ಕಾರಣವಾಯಿತು.

ಈ ನಿಟ್ಟಿನಲ್ಲಿ ಪ್ರಾಕೃತಿಕ ಪರಿಸರವನ್ನು ಸಂರಕ್ಷಣೆ ಮಾಡುವುದರೊಂದಿಗೆ ಪ್ರವಾಸೋದ್ಯಮವು ತನ್ನ ಪ್ರಾಮುಖ್ಯತೆಯನ್ನು ಮತ್ತು ಅಸ್ಥಿತ್ವವನ್ನು ಪಡೆದುಕೊಂಡಿತು. ಪ್ರಥಮ ಬಾರಿಗೆ ಕೆನಡ ಸರ್ಕಾರವು ಇಕೋ ಟೂರಿಸಂನ್ನು ಪ್ರೋತ್ಸಾಹಿಸುವುದರ ಮೂಲಕ ಜಾರಿಗೆ ತಂದಿತು[1]. ತನ್ನ ರಾಷ್ಟ್ರದಲ್ಲಿನ ಪ್ರಾಕೃತಿಕ ಪರಿಸರವನ್ನು ಸಂರಕ್ಷಣೆ ಮಾಡಲು ಪ್ರವಾಸೋದ್ಯಮವನ್ನು ಪೂರಕವಾಗಿ ಬಳಸಲಾಯಿತು. ಇದರಿಂದ ಹೆಚ್ಚಿನ ಸಂಖ್ಯೆಯಲ್ಲಿ ವಿದೇಶಿ ಪ್ರವಾಸಿಗರನ್ನು ಆಕರ್ಷಣೆ ಮಾಡಿ, ಅಧಿಕ ವಿದೇಶಿ ವಿನಿಮಯವನ್ನು ಗಳಿಸಿತು. ಈ ನಂತರದಲ್ಲಿ ಜಗತ್ತಿನ ಇತರ ರಾಷ್ಟ್ರಗಳು ಪರಿಸರವನ್ನು ಮಾಡುವುದಕ್ಕೆ ಪೂರಕವಾದ ಇಕೋ ಟೂರಿಸಂನ್ನು ಅಭಿವೃದ್ಧಿಪಡಿಸಲು ಪ್ರಾರಂಭಿಸಿದವು. ಪರಿಸರ ಪ್ರವಾಸೋದಯಮವನ್ನು ಕುರಿತು ಹಲವು ವಿದ್ವಾಂಸರು ವ್ಯಾಖ್ಯಾನಗಳನ್ನು ನೀಡಿದ್ದಾರೆ. ಅಲ್ಲದೇ ಹಲವು ಸಂಘಸಂಸ್ಥೆಗಳು ಪರಿಸರ ಪ್ರವಾಸೋದ್ಯಮದ ಬಗ್ಗೆ ತಮ್ಮದೇ ರೀತಿಯಲ್ಲಿ ವ್ಯಾಖ್ಯಾನಗಳನ್ನು ನೀಡಿವೆ.

ಪರಿಸರ ಪ್ರವಾಸೋದ್ಯಮವನ್ನು ಕುರಿತು ಅಂತರಾಷ್ಟ್ರೀಯ ಇಕೋಟೂರಿಸಂ ಸೊಸೈಟಿಯು ಈ ರೀತಿಯಾಗಿ ವ್ಯಾಖ್ಯಾನ ಮಾಡಿದೆ. ಇದು "Responsible travel to natural areas, which conserves the environment and sustains the well-being of local people"[2] ಎಂದು ವ್ಯಾಖ್ಯಾನವನ್ನು ಮಾಡಿದೆ. ಪ್ರಾಕೃತಿಕ ಸ್ಥಳಗಳು, ಪ್ರಾಕೃತಿಕ ಪರಿಸರವನ್ನು ಸಂರಕ್ಷಣೆ ಮಾಡುವಂತಹ ನೆಲೆಗಳು ಮತ್ತು ಸ್ಥಳಿಯ ಜೀವನವನ್ನು ರಕ್ಷಿಸುವಂತಹ ತಾಣಗಳಿಗೆ ಜವಾಬ್ದಾರಿಯುತವಾಗಿ ಪ್ರಯಾಣ ಮಾಡುವಿದನ್ನೇ ಪರಿಸರ ಪ್ರವಾಸೋದ್ಯಮವೆಂದು ತಿಳಿಸಿದೆ. ಹಾಗೆಯೇ ಜಾಗತೀಕ ಸಂರಕ್ಷಣಾ ಸಂಸ್ಥೆಯು ಪರಿಸರ ಪ್ರವಾಸೋದ್ಯಮವನ್ನು ಕುರಿತು "Ecotourism is environmentally responsible travel and visitation to relatively undisturbed natural area, in order to enjoy and appreciate nature (and any accompanying cultural features-both past and present) that promotes conservation, has low negative visitor impact, and provides for beneficially active socio-economic involvement of local population"[3] ಎಂದು ಅರ್ಥೈಸಿದೆ. ಸ್ಥಳೀಯ ಸಾಮಾಜಿಕ ಮತ್ತು ಆರ್ಥಿಕ ಪ್ರಗತಿಗೆ ಸಹಾಯಕವಾಗುವ ಮತ್ತು ಪ್ರಾಕೃತಿಕ ಪರಿಸರವನ್ನು ನೋಡುವ, ಆನಂದಿಸುವ ಮತ್ತು ಪರಿಸರವನ್ನು ಸುಸ್ಥಿರಗೊಳಿಸುವಂತಹ

ತಾಣಗಳಿಗೆ ಪ್ರವಾಸ ಕೈಗೊಳ್ಳುವುದನ್ನು ಇಕೋಟೂರಿಸಂ ಎಂದು ಕರೆಸಿಕೊಳ್ಳುತ್ತದೆ ಎಂದು ವಿಸ್ತಾರವಾಗಿ ತನ್ನ ವ್ಯಾಖ್ಯಾನವನ್ನು ನೀಡಿದೆ.

ಪ್ರಾಚೀನ ಕಾಲದಿಂದಲೂ ಮನರಂಜನೆಯನ್ನು ಕಾಣಬಹುದಾಗಿದೆ. ವಿವಿಧ ಬಗೆಯ ಮನರಂಜನಾ ಚಟುವಟಿಕೆಗಳನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಭಾಗದಲ್ಲಿ ತಮ್ಮ ಮನರಂಜನೆ ಸಲಿವಾಗಿ ಬೆಳೆಸಿಕೊಂಡಿದ್ದರು. ಬಿಡುವಿನ ವೇಳೆಯಲ್ಲಿ ಯಾವುದಾದರೂ ಸಂತೋಷವನ್ನು ಮತ್ತು ಮನಸ್ಸಿಗೆ ಆನಂದವನ್ನು ನೀಡುವಂತಹ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದರು.

ಅಂದರೆ ಮಾನವನ ಮಾನಸ್ಸನ್ನು ತನ್ನ ಕ್ರಿಯೆಯಿಂದ ಆಕರ್ಷಣೆ ಮಾಡುವಂತಹ ವಿವಿಧ ಬಗೆಯ ಚಟುವಟಿಕೆಗಳನ್ನು ಮನರಂಜನೆ ಎಂದು ಕರೆಸಿಕೊಳ್ಳುತ್ತದೆ. ವಿವಿಧ ಬಗೆಯ ನೃತ್ಯಗಳು, ಆಟಗಳು, ಕ್ರೀಡೆಗಳು, ಸಂಗೀತ ಕಾರ್ಯಕ್ರಮಗಳು, ವಸ್ತುಗಳ ಖರೀದಿ ಅಂಗಡಿಗಳು, ಚಲನಚಿತ್ರ, ಗಾಯನ, ನಾಟಕ, ಹೀಗೆ ವಿಭಿನ್ನ ಬಗೆಯ ಚಟುವಟಿಕೆಗಳಿಂದ ಮಾನವನ ಮನಸ್ಸನ್ನ ಹಿಡಿದಿಡಲು ಅಥವಾ ಆಕರ್ಷಣೆ ಮಾಡುವಂತಹ ಪ್ರಕ್ರಿಯೆಯನ್ನು ಮನರಂಜನೆ ಎನ್ನಲಾಗುತ್ತದೆ.

ಆಯಾಸಗೊಂಡಿರುವ ಅಥವಾ ಮನಸ್ಸಿಗೆ ನೆಮ್ಮದಿ ಮತ್ತು ಸಂತೋಷವನ್ನು ನೀಡುವಂತಹ ಕಾರ್ಯಕ್ರಮಗಳು ಬಹಳ ಹಿಂದಿನಿಂದಲೂ ಪ್ರಚಲಿತದಲ್ಲಿವೆ. ಹಲವು ವ್ಯಕ್ತಿಗಳಿಗೆ ರಂಜಿಸುವುದು ಮನರಂಜನೆಯಾಗಿದೆ. ವ್ಯಕ್ತಿಗಳು ತಮ್ಮ ವಿಶೇಷವಾದ ಪ್ರತಿಭೆಯ ಮೂಲಕವಾಗಿ ಜನರನ್ನು ರಂಜಿಸುವುದು ಇಂದು ಹೆಚ್ಚಾಗಿ ಕಂಡುಬರುತ್ತಿದೆ. ಮನರಂಜನೆಗಾಗಿ ಹಲವು ಆಟಗಳನ್ನು ಮತ್ತು ಕ್ರೀಡೆಗಳನ್ನು ನಡೆಸುತ್ತಿದ್ದರು. ಮಾನಸಿಕ ಸಂತೋಷವನ್ನು ನೀಡುವಂತಹ ಪ್ರಾಣಿಧಾಮಗಳು, ಅರಣ್ಯಧಾಮಗಳು, ನಾಟಕಗಳು, ಸಂಗೀತ ಮತ್ತು ನೃತ್ಯಗಳು, ಡೋಳ್ಳು ಕುಣಿತ ಇಂದು ಪ್ರವಾಸಿ ಆಕರ್ಷಣೆಗಳಾಗಿವೆ. ಈ ಮೂಲಕವಾಗಿ ಮನರಂಜನೆ ಕೇಂದ್ರಗಳ ಸಂಖ್ಯೆಯು ಅಧಿಕವಾಗಿ ಬೆಳೆಯುತ್ತಿವೆ. ದೇಶಿಯ ಮತ್ತು ಸ್ಥಳೀಯ ಪ್ರದೇಶಗಳ ಪ್ರವಾಸೋದ್ಯಮ ಬೆಳವಣಿಗೆಯೊಂದಿಗೆ ಆರ್ಥಿಕ ಪ್ರಗತಿಗೆ ಕಾರಣವಾಗಿವೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಹವಾಗುಣ ಮತ್ತು ಪ್ರಾಕೃತಿಕ ಪರಿಸರವನ್ನು ಹೊಂದಿದೆ. ಈ ಜಿಲ್ಲೆಯು ಪ್ರವಾಸಿಗರಿಗೆ ಯೋಗ್ಯವಾದ ಉತ್ತಮ ವಾತಾವರಣವನ್ನು ಹೊಂದಿರುವ ಪ್ರದೇಶವಾಗಿದೆ. ಡಿಸೆಂಬರ್‌ನಿಂದ ಪೆಬ್ರವರಿಗೆ ಚಳಿಗಾಲ, ಮಾರ್ಚ್‌ನಿಂದ ಮೇ ವರೆಗೆ ಬೇಸಿಗೆ ಕಾಲ, ಜೂನ್‌ನಿಂದ ಅಕ್ಟೋಬರ್‌ವರೆಗೆ ಮಳೆಗಾಲವನ್ನು ಹೊಂದಿದ್ದು ಎಲ್ಲಾ ಋತುಗಳಲ್ಲಿಯೂ ಪ್ರವಾಸಕ್ಕೆ ಯೋಗ್ಯವಾಗಿದೆ. ಜಿಲ್ಲೆಯಲ್ಲಿ ಅತಿ ಎತ್ತರವಾದ ಶಿವಗಂಗೆ ಬೆಟ್ಟ ಹೊಂದಿದೆ. ಜೂನ್ ತಿಗಳಿನಿಂದ ಸೆಪ್ಟೆಂಬರ್ ತಿಂಗಳಿನವರೆಗೆ ಅಧಿಕವಾದ ಮೋಡಗಳನ್ನು ನೀಡಬಹುದು.

ಚಳಿಗಾಲದಲ್ಲಿ ಜಿಲ್ಲೆಯಲ್ಲೇ ಅತಿ ಕಡಿಮೆ ಉಷ್ಣಾಂಶವು ಶಿವಗಂಗೆ ಬೆಟ್ಟದಲ್ಲಿರುತ್ತದೆ. ಮೇ ತಿಂಗಳಲ್ಲಿ ಅಧಿಕವಾದ ತಾಪಮಾನವಿರುತ್ತದೆ. ಇದನ್ನು ಹೊರುತುಪಡಿಸಿದರೆ ಇತರ ಎಲ್ಲಾ ಅವಧಿಯಲ್ಲಿ ಜಿಲ್ಲೆಯು ಪ್ರವಾಸಕ್ಕೆ ಉತ್ತಮವಾಗಿರುತ್ತದೆ. ಫಬ್ರವರಿ, ಮಾರ್ಚ್, ಸೆಪ್ಟೆಂಬರ್ ಮತ್ತು ಅಕ್ಟೋಬರ್ ತಿಂಗಳುಗಳಲ್ಲಿ ಹೆಚ್ಚು ಗುಡುಗು ಮತ್ತು ಮಿಂಚು ಕಂಡು ಬರುತ್ತದೆ. ಈವರೆಗಿನ ವಾತಾವರಣದಲ್ಲಿ ದಾಖಲಾಗಿರುವ ಸೆಪ್ಟೆಂಬರ್‌ನಲ್ಲಿ ಅಧಿಕ ಗುಡುಗು ಮತ್ತು ಮಿಂಚುಗಳನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಕಂಡಿದೆ.[4] ಚಳಿಗಾಲದಲ್ಲಿ ಅತಿ ಹೆಚ್ಚು ಹಿಮದಿಂದ ಕೂಡಿರುತ್ತದೆ. ಸೂರ್ಯನ ಕಿರಣಗಳು ಬೀಳುವವರೆಗೂ ಜಿಲ್ಲೆಯ ಬೆಟ್ಟಗಳು ಹಿಮದಿಂದ ಆವೃತವಾಗಿರುತ್ತವೆ. ಈ ಕಾಲದಮಾನದಲ್ಲಿ ಅದ್ಭುತವಾದ ಪ್ರಾಕೃತಿಕ ದೃಶ್ಯಗಳನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ನೋಡಬಹುದಾಗಿದೆ. ಈ ಅವಧಿಯಲ್ಲಿ ಇಂತಹ ವಿಶೇಷ ಅನುಭವವನ್ನು ಪಡೆಯಲು ವಿಶೇಷವಾಗಿ ಶಿವಗಂಗೆ ಬೆಟ್ಟ, ನಿಜಗಲ್ ಬೆಟ್ಟ, ಮಾಕಳಿ ದುರ್ಗ, ಹುಲ್ಕುಡಿ ಬೆಟ್ಟ, ಕುಂದನ ಬೆಟ್ಟ ಹೆಚ್ಚು ಪ್ರವಾಸಿಗರು ಭೇಟಿ ನೀಡುತ್ತಾರೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಪ್ರವಾಸಿಗರಿಗೆ ಅನುಕೂಲವಾಗುವ ಮತ್ತು ಪ್ರವಾಸಿಗರನ್ನು ಸೆಳೆಯುವಂತಹ ಪ್ರಾಕೃತಿಕ ತಾಣಗಳನ್ನು ಒಳಗೊಂಡಿದೆ. ಇಲ್ಲಿ ಹಲವಾರು ಐತಿಹಾಸಿಕ ಮಹತ್ವವನ್ನು ಪಡೆದಿರುವ ಬೆಟ್ಟಗಳು, ಗುಡ್ಡಗಳು, ಬೆಟ್ಟಗಳ ಸಾಲುಗಳು ಮತ್ತು ಸಸ್ಯವರ್ಗ ಮತ್ತು ಪ್ರಾಣಿವರ್ಗವನ್ನು ನೋಡಬಹುದಾಗಿದೆ. ಇಂತಹ ಪ್ರಾಕೃತಿಕ ಪರಿಸರವನ್ನು ಹೊಂದಿರುವ ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಇಕೋ ಟೂರಿಸಂ ಹೇಳಬಹುದು. ಇಲ್ಲಿರುವ ಪ್ರಾಕೃತಿಕ ತಾಣಗಳನ್ನು ಮತ್ತಷ್ಟು ಅಭಿವೃದ್ಧಿಪಡಿಸಿದರೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಆರ್ಥಿಕವಾಗಿ ಪ್ರಗತಿಯನ್ನು ಹೊಂದಲು ಪ್ರೇರಕವಾಗುತ್ತದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿನ ಬೆಟ್ಟಗಳು ತುಂಬಾ ಆಕರ್ಷಣೀಯವಾಗಿವೆ. ಜಿಲ್ಲೆಯಲ್ಲಿನ ಬೆಟ್ಟಗಳು ನದಿಗಳ ಉಗಮ ಸ್ಥಾನಗಳಾಗಿ ಪಾವಿತ್ರತೆಯನ್ನು ಹೊಂದಿವೆ. ಇಂತಹ ಪ್ರವಾಸಿ ತಾಣಗಳು ದೇಶಿಯ ಮತ್ತು ವಿದೇಶಿ ಪ್ರವಾಸಿಗರನ್ನು ಆಕರ್ಷಣೆ ಮಾಡುವಲ್ಲಿ ಯಶಸ್ವಿಯಾಗಿವೆ. ಜಗತ್ತಿನ ಹಲವು ರಾಷ್ಟ್ರಗಳಿಂದ ಪ್ರವಾಸಿಗರನ್ನು ಸೆಳೆಯುತ್ತಿರುವ ಶಿವಗಂಗೆಬೆಟ್ಟ, ಮಾಕಳಿದುರ್ಗ, ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಕಾಣಬಹುದು.

ಪರಿಸರವು ಒಟ್ಟಾರೆ ಜೀವರಾಶಿಯೊಂದಿಗೆ ಭೂಮಿಯ ಮೇಲ್ಭಾಗದಲ್ಲಿನ ಮತ್ತು ಕೆಳಭಾಗದಲ್ಲಿನ ಎಲ್ಲಾ ರೀತಿಯ ಅಂಶಗಳನ್ನು ಒಲಗೊಂಡಿದೆ. ಪರಿಸರವನ್ನು ಮರೆತರೆ ಇಡೀ ಪ್ರಪಂಚ ಅಥವಾ ಭೂಮಂಡಲವನ್ನು ಊಹಿಸಿಕೊಳ್ಳುವುದು ಕಷ್ಟವಾಗುತ್ತದೆ. ಪ್ರಾಣಿ ಸಮೂಹಗಳು, ಪಕ್ಷೀ ಪ್ರಭೇದಗಳು, ಮರಗಳು, ಗಿಡಗಳು, ವಿವಿಧ ಬಗೆಯ ಸಸ್ಯವರ್ಗ,

ನದಿಗಳು, ಕೋಳ, ಸರೋವರ, ಕೆರೆ, ಕಾಲುವೆ, ಬಾವಿಗಳು, ತೊರೆಗಳು, ಜಲಾಶಯಗಳು, ಹವಾಗುಣ, ಉಷ್ಣಾಂಶ, ಕೀಟಗಳ, ಕುಂಟೆಗಳು, ಬೆಟ್ಟಗಳು, ಗುಡ್ಡಗಳು, ಶಿಲಾ ಸಮೂಹ ಅಥವಾ ರಾಶಿಗಳು, ಮಣ್ಣಿನ ವಿಧಗಳು, ಮಳೆ, ಗಾಳಿ, ಕಣಿವೆಗಳು, ಬೃಹತ್ ಬಂಡೆಗಳು, ಪ್ರಾಕೃತಿಕ ಗುಹೆಗಳು ಇವೆಲ್ಲವೂ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಪರಿಸರದ ಒಂದು ಭಾಗವಾಗಿವೆ.

ಇಂತಹ ಉತ್ತಮವಾದ ಪರಿಸರವನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಕಾಣಬಹುದಾಗಿದ್ದು, ಪ್ರವಾಸಿಗರನ್ನು ಆಕರ್ಷಣೆ ಮಾಡಿತ್ತಿವೆ. ಈ ಜಿಲ್ಲೆಯಲ್ಲಿ ಸರಿಸುಮಾರು ಶತಮಾನಗಳ ಪ್ರಾಚೀನತೆಯನ್ನು ಹೊಂದ್ದಿದ್ದು ಪ್ರಾವಾಸಿ ಆಕರ್ಷಣೆಯು ಸ್ಥಳವಾಗಿದೆ. ಅಂತರರಾಷ್ಟ್ರೀಯ ಪ್ರವಾಸಿಗರನ್ನು ಆಕರ್ಷಣೆ ಮಾಡುತ್ತಿರುವ ಬೆಂಗಳೂರು ಹೊಂದಿರುವ ಉತ್ತಮವಾದ ಹವಾಗುಣವನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲೂ ಕಾಣಬಹುದಾಗಿದೆ. ಇಲ್ಲಿನ ಉತ್ತಮ ಹವಾಗುಣ ಪ್ರವಾಸಿಗರು ಹೆಚ್ಚಿನ ಸಂಖ್ಯೆಯಲ್ಲಿ ಆಗಮಿಸಲು ಕಾರಣವಾಗಿದೆ. ಈ ಹಿಂದೆ ಹಳೇ ಮೈಸೂರು ಪ್ರಾಂತ್ಯಕ್ಕೆ ಒಳಪಟ್ಟಿದ್ದು ಬೆಂಗಳೂರು ಗ್ರಾಮಾಂತರ ಜಿಲ್ಲೆಯು 1956ರಲ್ಲಿ ಎಂಟು ತಾಲ್ಲೂಕುಗಳೊಂದಿಗೆ ಮೈಸೂರು ರಾಜ್ಯದಲ್ಲಿ ಮುಂದುವರೆಯಿತು. 2008ರಲ್ಲಿ ಆಡಳಿತದ ಅನೂಕುಲಕ್ಕಾಗಿ ರಾಜ್ಯ ಸರ್ಕಾರದವರು ನಾಲ್ಕೂ ತಾಲ್ಲೂಕುಗಳನ್ನು ವಿಂಗಡಿಸಿ ಒಂದು ಜಿಲ್ಲೆಯನ್ನು ಉದಯವಾಯಿತು.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕರ್ನಾಟಕ ರಾಜ್ಯದ ವಿಸ್ತೀರ್ಣದಲ್ಲಿ ಪ್ರಮುಖ ಸ್ಥಾನವನ್ನು ಪಡೆದುಕೊಂಡಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯು ರಾಮನಗರ, ಬೆಂಗಳೂರು ನಗರ ಜಿಲ್ಲೆ ಮತ್ತು ತುಮಕೂರು ಜಿಲ್ಲೆಗಳೊಂದಿಗೆ ಗಡಿಯನ್ನು ಹಂಚಿಕೊಂಡಿದ್ದು ಪ್ರಾಶಸ್ತ್ಯವಾದ ಭೌಗೋಳಿಕ ಪರಿಸರವನ್ನು ಹೊಂದಲು ಸಹಾಕಾರಿಯಾಗಿವೆ. ಇದರಿಂದಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯೂ ಉತ್ತಮ ಪ್ರಾಕೃತಿಕ ಪರಿಸರವನ್ನು ಹೊಂದಲು ಕಾರಣವಾಗಿದೆ. ಇಂತಹ ಭೌಗೋಳಿಕ ಮೇರುಗಳನ್ನು ಒಳಗೊಂಡಿರುವ ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಉತ್ತಮ ಸಸ್ಯವರ್ಗ ಮತ್ತು ಪ್ರಾಣಿ ಸಂಪತ್ತನ್ನು ಒಳಗೊಂಡಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪರಿಸರದ ಮಹತ್ವವನ್ನು ತನ್ನ ಭೂ ಹಂಚಿಕೆಯಿಂದ ತಿಳಿಯಬಹುದಾಗಿದೆ. ಜಿಲ್ಲೆಯ ಒಟ್ಟು ವಿಸ್ತೀರ್ಣದಲ್ಲಿ ಪ್ರಾಣಿವರ್ಗ, ಸಸ್ಯವರ್ಗ, ಬೆಟ್ಟಗಳು, ಮಣ್ಣಿನ ಗುಡ್ಡಗಳು, ಶಿಲಾಪದರಗಳು, ಶಿಲಾರೂಪಗಳು, ಕಣಿಜಗಳು, ಪಕ್ಷಿ ಪ್ರಭೇದಗಳು, ಮಾನವನಿಂದ ಸಾಕಾಣಿಕೆಯಾಗಿರುವ ಪ್ರಾಣಿಗಳು, ನದಿಗಳು, ತೊರೆಗಳು, ಹಳ್ಳಗಳು, ಕಣಿವೆಗಳು, ವಿಭಿನ್ನ ಗಿಡಮೂಲಿಕೆಗಳು, ಹುಲ್ಲುಗಾವಲು, ಕಾಡುಗಳು, ಮೈದಾನ

ಪ್ರದೇಶ, ಕೆರೆಗಳು, ಬಾವಿಗಳು, ಕೊಳವೆ ಬಾವಿಗಳು, ತೋಪುಗಳು, ಸಾಮಾಜಿಕ ಅರಣ್ಯ, ಗೋಮಾಳಗಳು, ಜಲಧಾರೆಗಳು, ಎತ್ತರದ ಮರಗಳು, ಗುಹೆಗಳು ಕಂಡುಬರುತ್ತವೆ. ಇಂತಹ ವೈಶಿಷ್ಟಪೂರ್ಣವಾದ ಪರಿಸರವು ಪ್ರವಾಸಿಗರ ಮನಸ್ಸನ್ನು ಸೆಳೆಯುವ ನಿಟ್ಟಿನಲ್ಲಿ ಮುಖ್ಯವಾದ ಪಾತ್ರವನ್ನು ವಹಿಸಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಮನರಂಜನೆಯ ತಾಣಗಳನ್ನು ಸಹ ಕಾಣಬಹುದಾಗಿದೆ. ಹಲವಾರು ಶತಮಾನಗಳಿಂದ ಮಾನಸಿಕ ಸಂತೋಷಕ್ಕಾಗಿ ಹಲವು ಬಗೆಯ ಚಟುವಟಿಕೆಗಳನ್ನು ನಡೆಸುತ್ತಿದ್ದರು. ಇಂದಿಗೂ ಜಿಲ್ಲೆಯಲ್ಲಿ ಮನರಂಜನೆಯನ್ನು ನೀಡುವಂತಹ ಕ್ರೀಡೆಗಳು, ಜಾನಪದ ನೃತ್ಯಗಳು, ಸಂಗೀತ ನಾಟಕಗಳು ಮತ್ತು ನೃತ್ಯ ಕಾರ್ಯಕ್ರಮಗಳು, ಸಾಂಕೃತಿಕ ಕೇಂದ್ರಗಳು ಮತ್ತು ಚಲನಚಿತ್ರ ಮಂದಿರಗಳನ್ನು ಕಾಣಬಹುದಾಗಿದೆ.

## 5.2 ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ನದಿಗಳ ಪಾತ್ರ

ಬೆಂಗಳೂರು ಗ್ರಾಮಾತರ ಜಿಲ್ಲೆಯ ಸಮಾಜ, ಆರ್ಥಿಕ ಮತ್ತು ಸಂಸ್ಕೃತಿಯು ಬೆಳೆಯುವ ನಿಟ್ಟಿನಲ್ಲಿ ನದಿಗಳ ಪಾತ್ರವು ಮುಖ್ಯ ಹಾಗೂ ಪ್ರಧಾನವಾಗಿದೆ. ಇದರೊಂದಿಗೆ ನದಿಗಳ ಸುತ್ತಲಿನ ಪ್ರದೇಶಗಳ ಜೀವ ಮತ್ತು ಸಸ್ಯ ರಾಶಿಯು ಪ್ರವಾಸಿಗರನ್ನು ಆಕರ್ಷಣೆ ಮಾಡುವುದರೊಂದಿಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪರಿಸರ ಪ್ರವಾಸೋದ್ಯಮ ಅಭಿವೃದ್ಧಿಗೆ ಜಿಲ್ಲೆಯ ನದಿಗಳು ಮಹತ್ವದ ಕೊಡುಗೆಯನ್ನು ನೀಡುತ್ತಿವೆ. ಜಿಲ್ಲೆಯ ಪರಿಸರಕ್ಕೆ ಮುಕುಟಪ್ರಾಯವಾಗಿರುವ ಮಳೆಗಾಲದ ಹಲವು ನದಿಗಳನ್ನು ಸಹ ಹೊಂದಿದೆ. ನದಿ ಪಾತ್ರದಲ್ಲಿನ ಪ್ರದೇಶವು ಹೆಚ್ಚು ಪ್ರವಾಸಿಗರನ್ನು ಆಕರ್ಷಣೆ ಮಾಡುತ್ತಿರುವ ಸ್ಥಳಗಳನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಪ್ರವಾಸಿಗರು ನೋಡಬಹುದಾಗಿದೆ.

ಜಿಲ್ಲೆಯಲ್ಲಿ ಉಗಮವಾದ ನದಿಗಳು ಉತ್ತರ, ದಕ್ಷಿಣ, ಪೂರ್ವ ಮತ್ತು ಪಶ್ಚಿಮ ದಿಕ್ಕುಗಳಲ್ಲಿ ಚಲಿಸುತ್ತವೆ. ಇದರೊಂದಿಗೆ ಉತ್ತರ, ಮತ್ತು ದಕ್ಷಿಣ ಪಿನಾಕಿನಿ, ಕುಮುದ್ವತಿ, ವೃಷಭಾವತಿ ಮತ್ತು ಅರ್ಕಾವತಿ ನದಿಗಳು ಜಿಲ್ಲೆಯಲ್ಲಿವೆ.[5]

ಹಲವು ಕೆರಗಳನ್ನು ಉತ್ತಮ ಸಸ್ಯವರ್ಗವು ಬೆಳವಣಿಗೆಯಾಗಲು ಕಾರಣವಾಗಿದೆ. ಉತ್ತಮ ಪರಿಸರ ಅಭಿವೃದ್ಧಿಯ ಜೊತೆಗೆ ನೆಲಮಂಗಲ, ಮಣ್ಣೆ, ದೇವನಹಳ್ಳಿ ಕೆರೆಗಳಿಗೆ ಜೀವನಾಡಿಯಾಗಿದೆ. ಈ ಎಲ್ಲಾ ನದಿಗಳ ಪಾತ್ರದಲ್ಲಿ 1615 ಕೆರೆಗಳನ್ನು ಹೊಂದಿದ್ದು[6] ಉತ್ತಮವಾದ ಹಸಿರು ತೋಟಗಳು ಮತ್ತು ಹೊಲಗದ್ದೆಗಳನ್ನು ಪ್ರವಸಿಗರು ನೋಡುವಂತಹ ಪ್ರದೇಶಗಳಾಗಿವೆ. ಹಲವು ಪ್ರಾಣಿ ಸಂಕುಲ ಬೆಳೆಯಲು ಮಹತ್ವದ ಕೊಡುಗೆಯನ್ನು ನೀಡುತ್ತಿದೆ.

ಈ ನದಿಯು ಹರಿಯುವ ಪ್ರದೇಶದಲ್ಲಿ ಪ್ರವಾಸಿಗರನ್ನು ಆಕರ್ಷಣೆ ಮಾಡುವಂತಹ ಕೆರೆಗಳನ್ನು ನೋಡಬಹುದು ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಮಳೆಗಾಲ ಸಂದರ್ಭದಲ್ಲಿ ಮಲೆನಾಡು ಪ್ರದೇಶವಾದಂತೆ ಕಾಣುತ್ತವೆ ಮಳೆ ಅತಿಹೆಚ್ಚಾಗಿ ಸುರಿದು ನದಿಗಳು ತೊರೆಗಳು ಕಾಲುವೆಗಳು ಎಲ್ಲಾರೀತಿಯ ನೀರಿನಮೂಲಗಳು ತುಂಬಿ ಹರಿಯುತ್ತದೆ ನೋಡಲು ಪ್ರವಾಸಿಗರಿಗೆ ಮನಮೋಹಕ ದೃಶ್ಯವನ್ನು ಇಲ್ಲಿ ಕಾಣಬಹುದು.

## 5.3 ಆಕರ್ಷಣೀಯ ಪ್ರವಾಸಿ ಬೆಟ್ಟಗಳಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲೆ

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಭೌಗೋಳಿಕ ಲಕ್ಷಣಗಳ ವಿಶೇಷತೆಯೆಂದರೆ ಪ್ರವಾಸಯೋಗ್ಯದ ರೀತಿಯ ಪ್ರಾಕೃತಿಕ ಲಕ್ಷಣಗಳನ್ನು ಒಳಗೊಂಡಿದೆ. ಇಲ್ಲಿರುವ ಶಿಲಾ ಸಮೂಹಗಳು ಬೆಟ್ಟಗಳ ಸಾಲುಗಳು, ಗಿರಿಧಾಮಗಳು ಅತ್ಯಂತ ಹೆಚ್ಚಿನ ರೀತಿಯಲ್ಲಿ ಸ್ಥಳೀಯ ಮತ್ತು ಹೊರಗಿನ ಪ್ರವಾಸಿಗರನ್ನು ಆಕರ್ಷಣೆ ಮಾಡುವುದರ ಮೂಲಕ ಹೆಚ್ಚಿನ ಮಹತ್ವವನ್ನು ಪಡೆದಉಕೊಂಡಿವೆ. ಇಲ್ಲಿರುವ ಬೆಟ್ಟಗಳ ಸಾಲುಗಳು ಮತ್ತು ಐತಿಹಾಸಿಕ ಮಹತ್ವವನ್ನು ಹೊಂದಿರುವ ಬೆಟ್ಟ ಸಮೂಹಗಳಾಗಿವೆ. ಭೌಗೋಳಿಕವಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಕರ್ನಾಟಕ ದಕ್ಷಿಣ ಪ್ರಸ್ಥಭೂಮಿಯ ಕೊನೆಯಲ್ಲಿ ಇರಬಹುದು.

ಇಲ್ಲಿನ ಬೆಟ್ಟಗಳ ಪ್ರಮುಖವಾದ ಮತ್ತು ಪ್ರವಾಸಿ ಆಕರ್ಷಣೆಯ ಅಂಶವೆಂದರೆ ಸಾಹಸ ಪ್ರವಾಸಿಗರಿಗೆ ಮತ್ತು ಸಿನಿಮಾ ನಿರ್ಮಾಪಕರಿಗೆ ಹೇಳಿ ಮಾಡಿಸಿರುವ ತಾನವೆಂದರೆ ತಪ್ಪಾಗಲಾರದು. ಇವುಗಳ ಮಹತ್ವ ಎಷ್ಟೆಂದರೆ ದೇವನಹಳ್ಳಿ ತಾಲ್ಲೂಕು, ನೆಲಮಂಗಲ ತಾಲ್ಲೂಕು ಮಾಕಳಿದುರ್ಗ, ಶಿವಗಂಗೆಗಳಲ್ಲಿ ಚಿತ್ರೀಕರಣ ಮಾಡಲಾಗಿದೆ. ಸಿನಿಮಾಗಳು ಅಲ್ಲದೇ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹಲವು ಪ್ರದೇಶಗಳಲ್ಲಿ ಕನ್ನಡ ಧಾರವಾಹಿಗಳನ್ನು ಸಹ ಚಿತ್ರೀಕರಣ ಮಾಡಲಾಗುತ್ತಿದೆ. ಇಂತಹ ಪ್ರಕೃತಿ ಸೌಂದರ್ಯವನ್ನು ಮತ್ತು ಧಾರ್ಮಿಕ ಪ್ರಾಮುಖ್ಯತೆಯನ್ನು ಪಡೆದಿರುವ ಹಲವು ಬೆಟ್ಟಗುಡ್ಡಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿವೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಒಟ್ಟು ಎರಡೂ ಪ್ರಮುಖವಾದ ಬೆಟ್ಟ ಶ್ರೇಣಿಗಳಿವೆ. ಅವುಗಳಲ್ಲಿ ಶಿವಗಂಗೆ, ಮಾಕಳಿದುರ್ಗ ಬೆಟ್ಟಗಳ ಶ್ರೇಣಿಗಳು ಪ್ರಸಿದ್ಧಿಯನ್ನು ಪಡೆದಿವೆ. ಅವುಗಳಲ್ಲಿ ಕಂಡುಬರುವಂತಹ ಬೆಟ್ಟಗಳು

### ಸಿದ್ಧರಬೆಟ್ಟ

ಈ ಸಿದ್ಧರಬೆಟ್ಟವು ನೆಲಮಂಗಲ ತಾಲ್ಲೂಕಿನಿಂದ 30ಕಿ.ಮೀ ದೂರ ವಾಯುವ್ಯ ದಿಕ್ಕಿನಲ್ಲಿರುವ ಈ ಬೆಟ್ಟವು ಸುಂದರವಾಗಿ ಕಾಣುತ್ತದೆ. ಈ ಬೆಟ್ಟವು ಚಾರಣಿಗರಿಗೆ ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ಏಕೆಂದರೆ ಭಾನುವಾರ ಮತ್ತು ರಜಾದಿನಗಳಲ್ಲಿ ಈ ಬೆಟ್ಟಕ್ಕೆ ತಪ್ಪದೇ

ಪ್ರವಾಸಿಗರು ಬರುತ್ತಾರೆ ಬಂದು ಸಾಹಸಮಯ ಕ್ರೀಡೆಯನ್ನು ಆಡುತ್ತಾರೆ ಮತ್ತು ಮನರಂಜನಾ ಕಾರ್ಯಕ್ರಮಗಳನ್ನು ಕೈಗೋಳ್ಳುತ್ತಾರೆ.

ಸಿದ್ಧರಬೆಟ್ಟ ಪ್ರಸಿದ್ಧಿಯನ್ನು ಹೊಂದಿದೆ. ರಾಷ್ಟ್ರೀಯ ಹೆದ್ದಾರಿಯಿಂದ ಕೇವಲ 1ಕಿ.ಮೀ ದೂರದಲ್ಲಿದೆ ಮತ್ತು ಇಲ್ಲಿ ಹಲವಾರು ಹೋಟೆಲ್ ಮತ್ತು ವಸತಿ ವ್ಯವಸ್ಥೆಯನ್ನು ಪಡೆದುಕೊಂಡಿದೆ ಪ್ರವಾಸಿಗರಿಗೆ ಒಂದು ದಿನದ ಪ್ರವಾಸವನ್ನು ಕೈಗೊಳ್ಳಲು ಈ ತಾಣವು ಪ್ರಮುಖವಾಗಿದೆ. (ಛಾಯಾ ಚಿತ್ರ – 29)

ಸಿದ್ಧರಬೆಟ್ಟ ಇಲ್ಲಿ ಇದರ ಒಂದು ಇತಿಹಾಸವನ್ನು ಹೊಂದಿದೆ, ಆದರೆ ಇತಿಹಾಸವು ಬೆಳಕಿಗೆ ಬಂದಿರುವುದಿಲ್ಲ ಇಲ್ಲಿ ಕ್ರಿ.ಶ ಸುಮಾರು 18–19 ಶತಮಾನದಲ್ಲಿ ಸಿದ್ದಪ್ಪನಾಯಕ ಎಂಬ ಪಾಳೆಗಾರರು ಆಡಳಿತ ಮಾಡಿದ್ದಾರೆ ಎಂಬುದು ಸ್ಥಳಿಕರಿಂದ ತಿಳಿಯುತ್ತಿದೆ. ಸಿದ್ದಪ್ಪನಾಯಕ ಪಾಳೇಗಾರರು ಜನರಿಗೆ ತುಂಬಾನೇ ಅನುಕೂಲವನ್ನು ಮಾಡಿಕೊಟ್ಟಿದ್ದಾನೆಂದು ಸ್ಥಳಿಯಜನರಿಗೆ ವ್ಯವಸಾಯಕ್ಕೆ ಕೆರೆಯನ್ನು ಕಟ್ಟಿಸಿಕೊಟ್ಟು, ಹೊಳೆಗಳನ್ನು ಮಾಡಿಸಿಕೊಟ್ಟಿದಾರೆಂದು ಸ್ಥಳೀಯರ ನಂಬಿಕೆ ಮತ್ತು ಆದ್ದರಿಂದ ಅವನ ಪ್ರತಿಮೆಯನ್ನು ಕೆತ್ತಿಸಿ ಅವನ ಪೂಜೆಯನ್ನು ಮಾಡುತ್ತಾರೆ. ಮತ್ತು ಇಲ್ಲಿ ಹಿಂದೂ ಮತ್ತು ಮುಸ್ಲಿಂರು ಬಂದು ಪೂಜೆಯನ್ನು ಸಲ್ಲಿಸುತ್ತಾರೆ ಮುಸ್ಲಿಂ ದರ್ಗಾವನ್ನು ಸ್ಥಾಪಿಸಿಕೊಂಡು ಪ್ರಾರ್ಥನೆಯನ್ನು ಮಾಡುತ್ತಾರೆ. ಒಟ್ಟಿನಲ್ಲಿ ಸಿದ್ಧರಬೆಟ್ಟಕ್ಕೆ ಧಾರ್ಮಿಕ ಪ್ರವಾಸಿಗರು ಅತಿ ಹೆಚ್ಚಾಗಿ ಬರುತ್ತಾರೆ.

### ಹಳೇನಿಜಗಲ್

ನಿಜಗಲ್ ಎಂಬ ಪ್ರದೇಶ ನೆಲಮಂಗಲ ತಾಲ್ಲೂಕಿಂದ 35.ಕಿ.ಮೀ ದೂರದಲ್ಲಿರುವ ಸೋಂಪುರ ಹೋಬಳಿ ಸೇರಿರುವಂತ ಒಂದು ಬೆಟ್ಟದ ತಪ್ಪಲು. ಈ ಬೆಟ್ಟದ ತಪ್ಪಲಿನಲ್ಲಿ ಬೆಟ್ಟದಗುಡ್ಡಗಳು ಸಾಲುಗಳು ನೋಡುವುದಕ್ಕೆ ಮನೋಹರವಾಗಿದೆ. ಈ ಬೆಟ್ಟವು ರಾಷ್ಟ್ರೀಯ ಹೆದ್ದಾರಿ ನಾಲ್ಕರ ಪಕ್ಕದಲ್ಲಿದು ನಾನಾ ಕಡೆಯಿಂದ ಮತ್ತು ಬೇರೆ ಬೇರೆ ಜಿಲ್ಲೆಗಳಿಂದ ಬರುವಂತಹ ಪ್ರವಾಸಿಗರು ಕೈಗೊಳ್ಳಬಹುದು. ಈ ಬೆಟ್ಟದ ತಪ್ಪಲಿನಲ್ಲಿ ಅರಣ್ಯ ಪ್ರದೇಶವನ್ನು ಹೊಂದಿದು ಇಲ್ಲಿ ಕಾಡು ಪ್ರಾಣಿಗಳು ಇದ್ದಾವೆ. ಜಿಂಕೆ, ಚಿರತೆ ಮೊಲಗಳು, ಕರಡಿ ಇನ್ನು ಅನೇಕ ಪ್ರಾಣಿ ಪ್ರಭೇದಗಳು ಇಲ್ಲಿ ಕಾಣಬಹುದು (ಛಾಯಾ ಚಿತ್ರ – 30)

ಹಳೇನಿಜಗಲ್ ಬೆಟ್ಟವು ಸಿದ್ಧರಬೆಟ್ಟ ಸಾಲಿನಲ್ಲಿ ಪ್ರಾರಂಭಗೊಂಡು ಹಳೇ ನಿಜಗಲ್ ಬೆಟ್ಟದವರೆಗೆ ಕೊನೆಗೊಳುತ್ತದೆ ಒಟ್ಟಿನಲ್ಲಿ ಬೆಟ್ಟದ ಸಾಲುಗಳು ಪ್ರವಾಸಿಗರನ್ನು ಸೆಳೆಯಲು ಪ್ರಮುಖವಾದ ಕಾರಣವಾಗುತ್ತದೆ. ನಗರ ಪ್ರದೇಶದ ಜನರು ಚಾರಣಿಗರಾಗಿ ಬಂದು ಬೆಟ್ಟದ ತಪ್ಪಲನ್ನು ನೋಡಿ ಆನಂದಿಸಿ ಒಂದು ದಿನದ ಪ್ರವಾಸವನ್ನು ಕೈಗೊಳ್ಳುತ್ತಾರೆ ಏಕೆಂದರೆ

ಹಳೇನಿಜಗಲ್‌ಬೆಟ್ಟವು ರಾಷ್ಟ್ರೀಯ ಹೆದ್ದಾರಿ ನಾಲ್ಕುರ ಪಕ್ಕದಲ್ಲಿರುವ ಈ ಬೆಟ್ಟದ ಸಾಲುಗಳನ್ನು ನೋಡಿ ಬೇರೆ ಜಿಲ್ಲೆಯವರು ಮತ್ತು ಅಕ್ಕ–ಪಕ್ಕದ ರಾಜ್ಯದವರು ಬಂದು ತಂಗುತ್ತಾರೆ.

## ಹೆಗ್ಗುಂದ ಬೆಟ್ಟ

ಹೆಗ್ಗುಂದ ಬೆಟ್ಟವು ನೆಲಮಂಗಲ ತಾಲ್ಲೂಕಿನಿಂದ 27ಕಿ.ಮೀ ದೂರದಲ್ಲಿದು ಸೋಂಪುರ ಹೋಬಳಿ ಈ ಪ್ರದೇಶವು ಎತ್ತರದಿಂದ ಕೊಡಿದ್ದು ನೋಡುವುದಕ್ಕೆ ಬಹಳ ಸಂತೋಷ ಕೂಡಿರುತ್ತದೆ. ಹೆಗ್ಗುಂದ ಬೆಟ್ಟವು ಚಾಣಿಗರ ಪ್ರವಾಸವನ್ನು ಕೈಗೊಳ್ಳುತ್ತಾರೆ. ಇಲ್ಲಿ ಪ್ರವಾಸಿಗರು ಒಂದು ಮನರಂಜನಾ ಮತ್ತು ಹಲವಾರು ರೀತಿಯಲ್ಲಿ ಕಾರ್ಯಕ್ರಮವನ್ನು ಕೈಗೊಳ್ಳುತ್ತಾರೆ ಇಲ್ಲಿ ಅನೇಕ ಮನರಂಜನಾ ಚಟುವಟಿಕೆಗಳು ನಡೆಯುತ್ತಿರುತ್ತದೆ. ಆದ್ದರಿಂದ ನಗರ ಪ್ರದೇಶಗಳಿಂದ ಬರುವಂತಹ ಪ್ರವಾಸಿಗರು ಈ ಪ್ರದೇಶವನ್ನು ಆಯ್ಕೆಮಾಡಿಕೊಂಡು ಒಂದು ದಿನದ ಪ್ರವಾಸವನ್ನು ಕೈಗೊಳ್ಳುತ್ತಾರೆ. ಪ್ರವಾಸಿಗರು ಈ ಪ್ರದೇಶವನ್ನು ವೀಕ್ಷಿಸಲು ಬರುವುದಕ್ಕೆ ಒಂದು ಉತ್ತಮವಾದಂತಹ ವಾತಾವರಣವನ್ನು ಹೊಂದಿರುವುದು ಆದ್ದರಿಂದ ಪ್ರವಾಸಿಗರು ಅತಿಹೆಚ್ಚಾಗಿ ರಜಾದಿನಗಳಲ್ಲಿ ಬರುತ್ತಾರೆ ಎಂಬುದು ಸ್ಥಳೀಯ ಹೇಳಿಕೆಯನ್ನು ಕೊಡುತ್ತಾರೆ.[7]

## ವಿನಾಯಕ ದೇವಾಲಯ (ಮಲ್ಲಪುರದ ಬೆಟ್ಟ)

ಈ ದೇವಾಲಯವು ನೆಲಮಂಗಲ ತಾಲ್ಲೂಕಿನಿಂದ 3ಕಿ.ಮೀ ದೂರದಲ್ಲಿದು ಬೆಟ್ಟದ ಮೇಲೆ ವಿನಾಯಕ ದೇವಾಲಯವಿದ್ದು ಅನೇಕ ಪ್ರವಾಸಿಗರು ಈ ದೇವಾಲಯಕ್ಕೆ ಬೇಟಿಯನ್ನು ಕೊಡುತ್ತಾರೆ ವರ್ಷಕ್ಕೆ ಒಂದುಬಾರಿ ಡಿಸೆಂಬರ್ ತಿಂಗಳಿನ ಪೂರ್ಣಿಮೆ ದಿನದಂದು ಜಾತ್ರೆಯು ನಡೆಯುತ್ತದೆ ಇಲ್ಲಿ ಅಕ್ಕ ಪಕ್ಕದ ತಾಲ್ಲೂಕಿನಿಂದ ಮತ್ತು ಹಳ್ಳಿಗಳಿಂದ ಪ್ರವಾಸಿಗರು ಒಂದು ಮನರಂಜನೆ ಪಡೆದು ಒಂದು ದಿನದ ಪ್ರವಾಸದ ಸಮಯವನ್ನು ಕಳೆಯುತ್ತಾರೆ. ಮತ್ತು ಈ ದೇವಾಲಯವನ್ನು ಅನೇಕ ಹಬ್ಬದ ದಿನದಂದು ಹಲವಾರು ಪ್ರವಾಸಿಗರು ಬಂದು ಧಾರ್ಮಿಕ ಪೂಜೆಯನ್ನು ಮಾಡುತ್ತಾರೆ ಈ ದೇವಾಲಯವು ನೆಲಮಂಗಲದಿಂದ ಮತ್ತು ಸೊಂಡೇಕೊಪ್ಪಕ್ಕೆ ಹೋಗುವ ತಾಲ್ಲೂಕು ಹೆದ್ದಾರಿಯಲ್ಲಿ ಸಿಗುವಂತ ಒಂದು ಪ್ರಸಿದ್ಧಿ ಪಡೆದಿರುವ ಮನರಂಜನ ತಾಣವಾಗಿದೆ. (ಛಾಯಾ ಚಿತ್ರ – 31)

## ವಿಜಯ ವಿಠ್ಠಲ ದೇವಾಲಯ

ಈ ದೇವಾಲಯವು ನೆಲಮಂಗಲ ತಾಲ್ಲೂಕಿನ ಪ್ರಮುಖವಾದ ರಾಷ್ಟ್ರೀಯ ಹೆದ್ದಾರಿಯ ನಾಲ್ಕರ ಪಕ್ಕದಲ್ಲಿದ್ದು ಪ್ರವಾಸಿಗೆ ಪ್ರಮುಖ ತಾಣಗಳಿಗೆ ಬೇಕಾಗಿರುವಂತಹ ಪರಿಸರ ಈ ಸ್ಥಳವು

ಒಳಗೊಂಡಿರುತ್ತದೆ. ಇಲ್ಲಿ ಅಕ್ಕ ಪಕ್ಕದ ತಾಲ್ಲೂಕಿನಿಂದ ಕಾಲೇಜ್ ವಿದ್ಯಾರ್ಥಿಗಳು ಅತಿಹೆಚ್ಚಾಗಿ ಬರುವುದರಿಂದ ಈ ಸ್ಥಳವು ಬೆಳವಣಿಗೆಗೊಳ್ಳುತ್ತಾ ಬರುತ್ತಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ನೆಲಮಂಗಲ ತಾಲ್ಲೂಕಿನಲ್ಲಿ ಈ ದೇವಾಲಯವು ಅತಿ ಹೆಚ್ಚು ಪ್ರಸಿದ್ದಿ ಪಡೆದಿದ್ದು ಈ ಸ್ಥಳಕ್ಕೆ ಅತಿ ಹೆಚ್ಚಾಗಿ ಚಲನಚಿತ್ರಗಳನ್ನು ಸೆರೆಹಿಡಿಯಲು ಈ ಸ್ಥಳವು ಪ್ರಮುಖವಾದ ತಾಣವಾಗಿದೆ ಮತ್ತು ವೈಷ್ಣವ ಪಂತದ ಪ್ರವಾದಿಗಳು ಅತಿಹೆಚ್ಚಾಗಿ ಈ ತಾಣಕ್ಕೆ ಬಂದು ನೆಲೆಸಿರುತ್ತಾರೆ. ಪ್ರವಾಸಿಗರು ಅತಿಹೆಚ್ಚಾಗಿ ಬರುವುದರಿಂದ ಈ ಸ್ಥಳವು ಅತಿಹೆಚ್ಚಾಗಿ ಪ್ರಮುಖ್ಯತೆಯನ್ನು ಪಡೆದುಕೊಂಡಿರುತ್ತದೆ. ಇತ್ತೀಚಿನ ದಿನಗಳಲ್ಲಿ ಈ ದೇವಾಲಯವನ್ನು ಆಧುನಿಕ ದೇವಾಲಯಗಳಾಗಿ ಮಾಡಿ ಪ್ರವಾಸಿಗರನ್ನು ಕೈಚಾಚಿ ಕರೆಯುವಂತಹ ಒಂದು ಸಾಂಧರ್ಭಿಕ ದೃಶ್ಯವನ್ನು ಇಲ್ಲಿ ಕಾಣಬಹುದು.

(ಛಾಯಾ ಚಿತ್ರ – 32)

## ಮಹಿಮ ರಂಗನಾಥ ಸ್ವಾಮಿ ಬೆಟ್ಟ

ಈ ಬೆಟ್ಟವು ನೆಲಮಂಗಲ ತಾಲ್ಲೂಕಿನಿಂದ 15ಕಿ.ಮೀ ದೂರವಿದ್ದು ಅಂದರೆ ರಾಷ್ಟ್ರೀಯ ಹೆದ್ದಾರಿಯಿಂದ 6ಕಿ.ಮೀ ದೂರದಲ್ಲಿದ್ದು ಇಲ್ಲಿ ಬೆಟ್ಟದ ರಂಗನಾಥಸ್ವಾಮಿ ದೇವಾಲಯವು ಇರುತ್ತದೆ. ಇಲ್ಲಿ ಧಾರ್ಮಿಕ ಪ್ರವಾಸಿಗರು ಅತಿಹೆಚ್ಚಾಗಿ ಬರುತ್ತಿದ್ದಾರೆ ಮತ್ತು ವರ್ಷಕ್ಕೆ ಒಂದುಬಾರಿ ಜಾತ್ರೆಯು ನಡೆಯುತ್ತಿದೆ ಇಲ್ಲಿ ಸಾವಿರಾರು ಮಂದಿ ಪ್ರವಾಸಿಗರು ಬರುತ್ತಾರೆ ಮತ್ತು ರಜಾದಿನಗಳಂದು ಇಲ್ಲಿ ಮನರಂಜನೆ ಚಟುವಟಿಕೆಗಳನ್ನು ಏರ್ಪಡಿಸಿಕೊಳ್ಳುತ್ತಾರೆ ಮತ್ತು ಇಲ್ಲಿ ಕಾಲೇಜು ವಿದ್ಯಾರ್ಥಿಗಳಾದ ಎನ್.ಎಸ್.ಎಸ್ ವಿದ್ಯಾರ್ಥಿಗಳು 7ದಿನ ಕ್ಯಾಂಪ್ ಅನ್ನು ಹಾಕುತ್ತಾರೆ.[8] ಇದೆಲ್ಲಾ ಚಟಿವಟಿಕೆಗಳು ನೆಡೆಯುವುದರಿಂದ ಈ ಬೆಟ್ಟವು ಪ್ರಮುಖ್ಯತೆಯನ್ನು ಪಡೆದುಕೊಂಡಿದೆ.

## ಸ್ಕಂದಗಿರಿ ಬೆಟ್ಟ

ಈ ಬೆಟ್ಟವು ದೊಡ್ಡಬಳ್ಳಾಪುರದಿಂದ ಆರು ಕಿ.ಮೀ ದೂರದಲ್ಲಿದೆ ಪ್ರಕೃತಿಯ ಮದ್ಯದಲ್ಲಿ ಬೆಳೆಯುತ್ತಿರುವ ಒಂದು ಪ್ರವಾಸಿ ತಾಣವಾಗಿದೆ. ಸ್ಕಂದಗಿರಿ ಬೆಟ್ಟವು ಒಂದುದಿನ ಚಾರಣಿಗರಿಗೆ ಮತ್ತು ಹಲವು ಕಾರ್ಯಕ್ರಮಗಳನ್ನು ಮಾಡಲು ಉಪಯೋಗ ಬರುವಂತಹ ಒಂದು ಸ್ಥಳವಾಗಿದೆ. ಇಲ್ಲಿ ಪ್ರವಾಸಿಗರುಹಲವು ಜಿಲ್ಲೆಗಳಿಂದ ಮತ್ತು ಬೇರೆ ಕಡೆಯಿಂದ ಬರುವಂತಹ ಕುಟುಂಬದವರು ಸಮಯವನ್ನು ಕಳೆಯುತ್ತಾರೆ.

### ಕೆಂಗಲ್ ಬೆಟ್ಟ

ಕೆಂಗಲ್ ಬೆಟ್ಟವು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ ತಾಲ್ಲೂಕಿನಲ್ಲಿದ್ದು 26 ಕಿ.ಮೀ ಅಂತರದಲ್ಲಿ ಹಾಗೂ ರಾಷ್ಟ್ರೀಯ ಹೆದ್ದಾರಿ ನಾಲ್ಕರಿಂದ ದಕ್ಷಿಣಕ್ಕೆ ಐದು ಕಿ.ಮೀ ಮುಂದೆ ಸಾಗಿ ಕೆಂಗಲ್ ಎಂಬ ಗ್ರಾಮದಲ್ಲಿ ಕೆಂಗಲ್ ಎಂಬ ಬೆಟ್ಟ ವಿರುತ್ತದೆ ಈ ಬೆಟ್ಟವು ನಂದಿಯ ಆಕಾರವಿದ್ದು ಪ್ರವಾಸಿಗರನ್ನು ಕೈಬಿಸಿ ಕರೆಯುವಂತಿದೆ. ಕೆಂಗಲ್ ಎಂದು ಹೆಸರು ಬರಲು ಕಾರಣ ಕೆಂಪು ಕಲ್ಲು ಸಿಗುವುದರಿಂದ ಕೆಂಗಲ್ ಎಂಬ ಹಸೆರು ಬಂದಿರುತ್ತದೆ[9] ಈ ಬೆಟ್ಟವನ್ನು ನೋಡಲು ಅತಿಯಾಗಿ ಸುಂದರವಾಗಿದ್ದು ಪ್ರವಾಸಿಗರನ್ನು ಸೆಳೆಯುತ್ತದೆ. ಈ ಬೆಟ್ಟದ ತುದಿಯಲ್ಲಿ ಬಸವಣ್ಣ ದೇವಾಲಯವಿದ್ದು ಜಾತ್ರೆಯ ಮಹತ್ವವನ್ನು ಪಡೆದಿಕೊಂಡಿದ್ದು ಈ ಬೆಟ್ಟಕ್ಕೆ ಪ್ರವಾಸಿಗರು ಅತಿಹೆಚ್ಚು ಭಾನುವಾರ ಮತ್ತು ರಜಾದಿನಗಳಂತಹ ಸಮಯದಲ್ಲಿ ಬಂದು ಮನರಂಜನೆಯ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ. (ಛಾಯಾ ಚಿತ್ರ – 33)

### ಬರದಿ ರಾಮೇಶ್ವರ ಬೆಟ್ಟ

ಬರದಿ ರಾಮೇಶ್ವರ ಬೆಟ್ಟವು ನೆಲಮಂಗಲ ತಾಲ್ಲೂಕಿನಿಂದ 12 ಕಿ.ಮೀ ದೂರದಲ್ಲಿದ್ದು ನೋಡಲು ಮನೋಹರದಿಂದ ಕೂಡಿದ್ದು ಇಲ್ಲಿ ರಾಮೇಶ್ವರ ದೇವಾಲಯವಿದ್ದು ಎರಡರಿಂದ ಮೂರು ವರ್ಷಕ್ಕೆ ಒಂದು ಬಾರಿ ಜಾತ್ರೆಯನ್ನು ಮಾಡಲಾಗುತ್ತದೆ. ಈ ಬೆಟ್ಟದ ಸುತ್ತಾಮುತ್ತಲಿನ ಪ್ರದೇಶ ಉತ್ತಮವಾದ ಪರಿಸರದಿಂದ ಕೂಡಿರುತ್ತದೆ ಆದರಿಂದ ಬೆಂಗಳೂರಿನಿಂದ ಪ್ರವಾಸಿಗರು ಚಾರಣಿಗರಾಗಿ ಈ ಬೆಟ್ಟಕ್ಕೆಬಂದು ಮನರಂಜನೆಯನ್ನು ಮಾಡುತ್ತಾರೆ ಮತ್ತು ಈ ಸ್ಥಳದಲ್ಲಿ ಕ್ರಿಡಾ ಚಟುವಟಿಕೆಗಳು ಸ್ಥಳಿಕರು ಪ್ರಾರಂಭಿಸಿ ಸ್ಥಳೀಕರು ಮನರಂಜನೆಯನ್ನು ಪಡೆದುಕೊಳ್ಳುತ್ತಾರೆ. ಈ ಬೆಟ್ಟವು ನೋಡಲು ಸುಂದರವಾಗಿದ್ದು ಪ್ರವಾಸಿಗರನ್ನು ಕೈಬೀಸಿಕರೆಯುತ್ತದೆ. (ಛಾಯಾ ಚಿತ್ರ–33)

## 5.4 ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿನ ಕ್ರೀಡಾಂಗಣಗಳು

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಶಾಲಾ ಮತ್ತು ಕಾಲೇಜುಗಳ ಕ್ರೀಡಾಕೂಟದಲ್ಲಿ ಸಾವಿರಾರು ವಿದ್ಯಾರ್ಥಿಗಳು ಬಾಗಿಯಾಗುತ್ತಾರೆ ಮತ್ತು ಕ್ರೀಡಾ ಸಮಯದಲ್ಲಿ ಕ್ರೀಡಾಂಗಣಗಳು ತುಂಬುತ್ತವೆ. ಕರ್ನಾಟಕದ ಸರ್ಕಾರದ ಕ್ರೀಡಾ ಮತ್ತು ಯುವಜನ ಸೇವಾ ಇಲಾಖೆಯಡಿ ಜಿಲ್ಲಾ ಮಟ್ಟದ ಎರಡು ಮತ್ತು ತಾಲ್ಲೂಕು ಮಟ್ಟದಲ್ಲಿ ಒಂದೊಂದು ಕ್ರೀಡಾಂಗಣಗಳನ್ನು ನೋಡಬಹುದಾಗಿದೆ. ತಾಲ್ಲೂಕು ಮಟ್ಟದ ಕ್ರೀಡಾಂಗಣಗಳಲ್ಲಿ ಹಲವು ಬಗೆಯ ಕ್ರೀಡಾ ಚಟುವಟಿಕೆಗಳನ್ನು ನಡೆಸಲಾಗುತ್ತಿದೆ. ಆಧುನಿಕ ರೀತಿಯ ಕ್ರೀಡಾ ಸೌಲಭ್ಯಗಳನ್ನು

ಒಳಗೊಂಡಿರುವ ಕ್ರೀಡಾಂಗಣಗಳನ್ನು ನೆಲಮಂಗಲ, ಹೊಸಕೋಟೆ, ದೊಡ್ಡಬಳ್ಳಾಪುರ ಮತ್ತು ದೇವನಹಳ್ಳಿ ತಾಲ್ಲೂಕು ಕೇಂದ್ರಗಳಲ್ಲಿ ಕಾಣಬಹುದಾಗಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಸಾಂಪ್ರಾದಾಯಿಕ ಕ್ರೀಡಾಂಗಣಗಳನ್ನು ಮತ್ತು ನೆಲಮಂಗಲ ತಾಲ್ಲೂಕಿನಲ್ಲಿ ಮಹದೇವಪುರದ ಗ್ರಾಮಾದಲ್ಲಿ ಕ್ರಿಕೇಟ್ ಆಟದ ಮೈದಾನವನ್ನು ಪ್ರಾರಂಭ ಮಾಡಿ ಆ ಕ್ರಿಡಾಂಗಣದಲ್ಲಿ ಅಂತಾರಾಷ್ಟ್ರೀಯ ಮಟ್ಟದ ಕ್ರಿಕೇಟ್ ಆಟಗಾರರು ಪ್ರವಾಸವನ್ನು ಕೈಗೊಂಡಿದ್ದಾರೆ.

ಈ ಕ್ರೀಡಾಂಗಣದಲ್ಲಿ ರಾಜ್ಯ ಮಟ್ಟದ ಹಲವು ಕ್ರೀಡಾ ತಾರೆಗಳು ತಮ್ಮ ಪ್ರತಿಭೆಯನ್ನು ತೋರಿಸಿದ್ದಾರೆ. ದೊಡ್ಡಬಳ್ಳಾಪುರದಲ್ಲಿ ಕ್ರೀಡಾಂಗಣವನ್ನು ನಿರ್ಮಾಣ ಮಾಡಲಾಗುತ್ತಿದ್ದು ಅಂತಿಮ ರೂಪವನ್ನು ಪಡೆದುಕೊಂಡಿದೆ. ನೆಲಮಂಗಲದಲ್ಲಿ ಮತ್ತೊಂದು ಆಧುನಿಕ ಸೌಲಭ್ಯಗಳನ್ನು ಒಳಗೊಂಡಿರುವ ಡಾ.ಬಿ.ಆರ್ ಅಂಬೇಡ್ಕರ್ ಕ್ರೀಡಾಂಗಣವನ್ನು ನಿರ್ಮಾಣ ಮಾಡಲಾಗಿದೆ. ರಾಜ್ಯಮಟ್ಟದ ಮತ್ತು ರಾಷ್ಟ್ರೀಯ ಮಟ್ಟದ ಹಲವು ಕ್ರೀಡಾ ಸ್ಪರ್ಧೆಗಳನ್ನು ಅಯೋಜಿಸುವುದರ ಮೂಲಕ ಬೆಂಗಳೂರು ಗ್ರಾಮಾತರ ಜಿಲ್ಲೆಯ ಕ್ರೀಡಾ ಪ್ರವಾಸೋದ್ಯಮ ಬೆಳವಣಿಗೆಗೆ ಮಹತ್ವದ ಕೊಡುಗೆಯನ್ನು ನೀಡುತ್ತಿವೆ. ನೆಲಮಂಗಲ ತಾಲ್ಲೂಕಿನಲ್ಲಿ 2009ರಲ್ಲಿ ರಾಜ್ಯ ಮಟ್ಟದ ಘುಟ್‌ಬಾಲ್ ಪಂದ್ಯಾವಳಿ ನಡೆದಿತ್ತು ಅತಿಥ್ಯವನ್ನು ಸರ್ಕಾರಿ ಪದವಿ ಪೂರ್ವ ಕಾಲೇಜು ನೆಲಮಂಗಲ ವಹಿಸಿಕೊಂಡಿದ್ದು ರಾಜ್ಯದ 30ಜಿಲ್ಲೆಯು ಪಾಲ್ಗೊಂಡಿದ್ದು ಸಾವಿರಾರು ಕ್ರಿಡಾಪಡುಗಳು ಕ್ರಿಡಾಚಟುವಟಿಕೆಯಲ್ಲಿ ಭಾಗವಹಿಸಿದ್ಧರು[10] ಇದು ಸಹ ಕ್ರಿಡಾಪ್ರವಾಸಿಗರು ಎಂದು ಹೇಳಬಹುದು.

ನೆಲಮಂಗಲ ತಾಲ್ಲೂಕಿನಲ್ಲಿ ದೊಡ್ಡದಾದ ಕ್ರೀಡಾಂಗಣವು ಹಲವಾರು ಇಲಾಖೆಗಳಿಗೆ ಉಪಯೋಗವಾಗಿದೆ. ಶಾಲಾ ಕಾಲೇಜುಗಳ ಸಮಯದಲ್ಲಿ ಎನ್.ಸಿ.ಸಿ ಅಭ್ಯಾಸವನ್ನು ಮಾಡುತ್ತಾರೆ ಮತ್ತು ಪೋಲಿಸ್ ಇಲಾಖೆಯ ಪ್ರತಿ ಶುಕ್ರವಾರದಂದು ಪೋಲಿಸ್ ಪರೇಡ್‌ನ್ನು ಅಭ್ಯಾಸ ಮಾಡುತ್ತಾರೆ ಇದ್ದರಿಂದ ಕ್ರೀಡಾಂಗಣ ಅಭಿವೃದ್ಧಿಯಾಗಲು ಇದು ಒಂದು ಪ್ರಮುಖವಾದ ಕಾರಣವಾಗಿದೆ ಎಂದು ಹೇಳಬಹುದು. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಅತ್ಯಂತ ದೊಡ್ಡದಾದ ಕ್ರಿಡಾಂಗಣ ಎಂದರೆ ಡಾ. ಬಿ,ಆರ್, ಅಂಬೇಡ್ಕರ್‌ಕ್ರೀಡಾಂಗಣ ನೆಲಮಂಗಲ ಎಂದು ಹೆಸರು ಪಡೆದಿದೆ.

## 5.5 ಮನರಂಜನಾ ಚಟುವಟಿಕೆಗಳು

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಮನರಂಜನೆಗಳಾಗಿ ವಿಭಿನ್ನ ತರಹದ ಆಟಗಳನ್ನು ಆಡುತ್ತಾರೆ. ಬಹಳಾ ಕಾಲದಿಂದಲೂ ಸ್ಥಳೀಯ ಆಟಗಳಿಗೆ ಅತಿಹೆಚ್ಚಾಗಿ

ಪ್ರೋತ್ಸಾಹವನ್ನು ಕೊಟ್ಟು ರಾಜರ ಕಾಲದಿಂದಲೂ ಮತ್ತು ಪಾಳೇಯಗಾರರ ಕಾಲದಿಂದಲೂ ಹಲವಾರು ಗ್ರಾಮೀಣ ಆಟಗಳಿಗೆ ಅಭಿವೃದ್ಧಿಯನ್ನು ಪಡಿಸಿಕೊಂಡು ಬಂದಿರುತ್ತಾರೆ ಅದರಲ್ಲಿ ಆಧುನಿಕ ಕಾಲದಲ್ಲೂ ಸಹ ನಗರ ಮತ್ತು ಪಟ್ಟಣ ಪ್ರದೇಶಗಳಲ್ಲಿಯೂ ಹಲವು ಬಗೆಯ ಮನರಂಜನೆಯನ್ನು ನೀಡುವಂತಹ ಆಟಗಳು ಜಿಲ್ಲೆಯಾದ್ಯಂತ ಕಂಡುಬರುತ್ತವೆ. ಮರಕೋತಿ ಆಟ, ಕೋಲಾಟ ಬಳೆಗಾಜಿನ ಆಟ, ಬಚ್ಚದ ಕಲ್ಲು ಆಟ, ಬುಗುರಿ ಆಟ, ಗೋಲಿಯಾಟ, ಚಂಡಾಟ, ಟೋಪಿಯಾಟ, ಹುಣಸೆ ಬೀಜದ ಆಟ, ಚದುರಂಗ, ಕಣ್ಣಾ ಮುಚ್ಚಾಲೆ ಆಟ, ಕುಂಟಾಟಗಳಲ್ಲದೇ ಸ್ಥಳೀಯ ಆಟಗಳನ್ನು ಮಾನಸಿಕ ಸಂತೋಷಕ್ಕಾಗಿ ಮತ್ತು ತಮ್ಮ ವಿರಾಮವನ್ನು ಕಳೆಯಲು ಆಡುತ್ತಾರೆ. ಕೆಲವು ಪ್ರದೇಶಗಳಲ್ಲಿ ಕ್ರಿಕೆಟ್ ಆಟವನ್ನು ಸಹ ಆಡುತ್ತಾರೆ.

ಇವುಗಳಲ್ಲದೇ ವಿಶೇಷವಾಗಿ ಹಬ್ಬಗಳ ಆಚರಣೆಯಂದು ಜನರು ಅಧಿಕ ಸಂಖ್ಯೆಯಲ್ಲಿ ಸೇರಿ ತೆಂಗಿನ ಕಾಯಿಯನ್ನು ಹೊಡೆಯುವ ಪಂದ್ಯಗಳನ್ನು ಕಟ್ಟಿಕೊಂಡು ಆಟವಾಡುತ್ತಾರೆ. ಹಣವನ್ನು ಪಣಕ್ಕಿಟು ಆಟವಾಡುತ್ತಿದ್ದರೂ ಇಲ್ಲಿ ಮನರಂಜನೆಯೇ ಮುಖ್ಯವಾಗಿರುತ್ತದೆ. ಇಂತಹ ಆಟದಿಂದ ಹೆಚ್ಚು ಉಲ್ಲಾಸವನ್ನು ಮತ್ತು ಅನುಭವವನ್ನು ಪಡೆಯುತ್ತಾರೆ. ಇವುಗಳಲ್ಲದೇ ಮನರಂಜನೆಗಾಗಿ ಆಡುವಂತಹ ಹುಣಸೆ ಬೀಜದ ಆಟವು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ನೋಡಬಹುದು. ಅಲ್ಲದೇ ಗುರಿಯಿಟ್ಟು ಗೋಲಿಯನ್ನು ಹೊಡೆಯುವ ಆಟವು ಇಂದಿಗೂ ಪ್ರಚಲಿತದಲ್ಲಿದೆ.

ಹಲವಾರು ಶತಮಾನಗಳಿಂದ ಮನರಂಜನೆಯನ್ನು ಮತ್ತು ಸಂತೋಷವನ್ನು ನೀಡುವಂತಹ ಹಲವು ಸಾಂಸ್ಕೃತಿಕ ಸಂಘಟನೆಗಳು ಈ ನಿಟ್ಟಿನಲ್ಲಿ ಮುಖ್ಯ ಪಾತ್ರವನ್ನು ವಹಿಸುತ್ತವೆ. ನಾಟಕ ಕಂಪನಿಗಳು, ನಾಟಕಾರರು, ನೃತ್ಯ ಸಂಘಗಳು, ಜಾನಪದ ಕಲೆಗಳ, ಗಾಯನ ಕೇಂದ್ರಗಳು ಮನರಂಜನೆಯನ್ನು ಒದಗಿಸುತ್ತಿವೆ. ಜಾತ್ರೆಗಳಲ್ಲಿ ಮತ್ತು ಸಮ್ಮೇಳನಗಳು ಹಾಗೂ ಹಬ್ಬಗಳಂದು ಕೋಲಾಟ, ನೃತ್ಯಗಳು ಮತ್ತು ಭಜನೆಗಳನ್ನು ಆಯೋಜನೆ ಮಾಡಿಕೊಂಡು ಜನರನ್ನು ರಂಜಿಸುತ್ತಾರೆ.

ಮನರಂಜನೆ ನೀಡುವಂತಹ ಚಲನಚಿತ್ರ ಮಂದಿರಗಳು ಸಹ ಜಿಲ್ಲೆಯಲ್ಲಿದೆ. ತಾಲ್ಲೂಕು ಮತ್ತು ಜಿಲ್ಲಾಕೇಂದ್ರಗಳಲ್ಲಿ ಚಲನಚಿತ್ರ ಮಂದಿರಗಳಿವೆ ಇವುಗಳಲ್ಲದೇ ಎಂಟು ತಾತ್ಕಾಲಿಕ ಚಿತ್ರಮಂದಿರಗಳನ್ನು ಒಳಗೊಂಡಿತ್ತು. ಚಲನಚಿತ್ರ ಮಂದಿರಗಳು ಮನರಂಜನೆ ನೀಡುವಲ್ಲಿ ಮುಖ್ಯ ಪಾತ್ರವನ್ನು ವಹಿಸಿದೆ. ಪ್ರತಿದಿನ ಮೂರರಿಂದ ನಾಲ್ಕು ಆಟಗಳನ್ನು ಪ್ರದರ್ಶನ ನೀಡುತ್ತಾರೆ. ಪ್ರಮುಖವಾಗಿ ಕನ್ನಡ ತೆಲುಗು, ತಮಿಳು ಮತ್ತು ಹಿಂದಿ ಭಾಷೆಗಳ ಚಲನಚಿತ್ರಗಳು

ಪ್ರದರ್ಶನಗೊಳ್ಳುತ್ತಿವೆ. ಇವುಗಳಲ್ಲದೇ ವಿವಿಧ ಬಗೆಯ ಕಂಪನಿ ಖಾಸಗಿ ಮತ್ತು ಸರ್ಕಾರದ ದೂರದರ್ಶನವು ಮನರಂಜನೆಯನ್ನು ನೀಡುತ್ತಿವೆ.

ಜಿಲ್ಲೆಯಲ್ಲಿ ಬಟ್ಟೆ ಶಾಪಿಂಗ್ ಕೇಂದ್ರಗಳನ್ನು ಬೆಂಗಳೂರು ಗ್ರಾಮಾತರ ಜಿಲ್ಲೆಯಲ್ಲಿ ದೊಡ್ಡಬಳ್ಳಾಪುರದಲ್ಲಿ ಹೆಚ್ಚು ನೋಡಬಹುದಾಗಿದೆ. ದೊಡ್ಡಬಳ್ಳಾಪುರ ವಾಣಿಜ್ಯ ನಗರಿಯೆಂಬ ಪ್ರಖ್ಯಾತಿಯನ್ನು ಪಡೆದಿದ್ದು ವಿವಿಧ ಬಗೆಯ ವಸ್ತುಗಳನ್ನು ಖರೀದಿಸಲು ಆಗಮಿಸುತ್ತಾರೆ. ದೊಡ್ಡಬಳ್ಳಾಪುರ, ತ್ಯಾಮಗೋಂಡ್ಲು ಕಡೆಯಿಂದ ಬಟ್ಟೆಗಳನ್ನು ಖರೀದಿಸಲು ಆಗಮಿಸುತ್ತಾರೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಆಧುನಿಕ ಮಾದರಿಯ ಸಿದ್ಧ ಉಡುಪುಗಳ ಮಾರಾಟ ಸ್ಥಳವಾಗಿದೆ. ಬೃಹತ್ ಶಾಪಿಂಗ್ ಮತ್ತು ಕೇಂದ್ರಗಳನ್ನು ಸ್ಥಾಪನೆ ಮಾಡುವತ್ತ ಜಿಲ್ಲೆಯು ಮುಂದುವರೆಯುತ್ತಿದೆ.

## 5.6 ಶೈಕ್ಷಣಿಕ ಪ್ರವಾಸೋದ್ಯಮದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪಾತ್ರ

ಆಧುನಿಕ ಜಗತ್ತಿನಲ್ಲಿ ಶಿಕ್ಷಣ ಮತ್ತು ಆರೋಗ್ಯ ಮಹತ್ವ ಪಾತ್ರವನನು ವಹಿಸುತ್ತಿದೆ. ಇದಕ್ಕಾಗಿ ಮಾನವ ತನ್ನ ಮೂಲಸ್ಥಾನವನ್ನು ಬಿಟ್ಟು ಬೇರೋಂದು ಕಡೆಯಸ್ಥಳದಲ್ಲಿ ಶಿಕ್ಷಣವನ್ನು ಪಡೆಯುತ್ತಾನೆ. ಶಿಕ್ಷಣವು ಮಾನವನ ವ್ಯಕ್ತಿತ್ವ ವಿಕಾಸದ ಪೂರಕ ಅಂಶವಾಗಿದೆ. ಶಿಕ್ಷಣ ಬಹಳ ಪ್ರಾಚೀನ ಕಾಲದಿಂದಲೂ ಪ್ರಾಧಾನ್ಯತೆಯನ್ನು ಪಡೆದುಕೊಂಡಿದೆ. ಆದರೆ ಇಂದಿನ ಜಗತ್ತಿನಲ್ಲಿ ಉದ್ಯೋಗ ಮತ್ತು ಆಸ್ತಿಯನ್ನು ಸಂಪಾದಿಸುವ ಇದ್ದೇಶದಿಂದ ಪ್ರತಿಯೊಬ್ಬರು ಶಿಕ್ಷಣವನ್ನು ಪಡೆಯುವ ನಿಟ್ಟಿನಲ್ಲಿ ಯೋಚಿಸುತ್ತಿದ್ದಾರೆ. ಮಾನವ ಜೀವನಕ್ಕೆ ಅವಶ್ಯಕವಾಗಿರುವ ಹಲವು ಮುಖ್ಯವಾದ ಅಂಶಗಳಲ್ಲಿ ಶಿಕ್ಷಣವು ಸಹ ಒಂದಾಗಿದೆ. ಮಾನವ ತನ್ನ ಜೀವನದ ದೀರ್ಘಕಾಲಾವಧಿಯಲ್ಲಿ ಅವನು ತನ್ನ ಆಸೆ– ಆಕಾಂಕ್ಷೆಗಳನ್ನು, ಧ್ಯೇಯಧೋರಣೆಗಳನ್ನು ಈಡೇರಿಸಿಕೊಂಡು ಪ್ರಗತಿ ಪಥದತ್ತ ನಡೆಸಿಯುವಂತೆ ಮಾಡುವುದೇ ಶಿಕ್ಷಣ.

'ಶಿಕ್ಷಣ' ಎಂದರೆ ವಿದ್ಯೆಯನ್ನು ನೀಡುವುದು ಎಂಬುದಾಗಿದೆ. ಶಿಕ್ಷಣ ಎಂಬ ಪದವು 'Education' ಎಂಬ ಆಂಗ್ಲಪದಕ್ಕೆ ಪದವಾಗಿದೆ. ಆಂಗ್ಲಭಾಷೆಯು 'Education' ಎಂಬ ಪದವು ಲ್ಯಾಟಿನ್ ಭಾಷೆಯ 'Educare' ಮತ್ತು 'Educatum' ಎಂಬ ಎರಡು ಪದಗಳಿಂದ ಉತ್ಪತ್ತಿಯಾಗಿದೆ.[1] 'Educare' ಎಂದರೆ ಸೂಚ್ಯವಾಗಿ ತರಬೇತಿಗೊಳೊಸುವ ಅಥವಾ ಹಿಡಿದಿಡುವ ಎಂಬ ಅರ್ಥವನ್ನು ನೀಡುತ್ತದೆ.[11] ವ್ಯಕ್ತಿಯಲ್ಲಿನ ಅಥವಾ ಮಗುವಿನಲ್ಲಿ ಸುಪ್ತವಾಗಿ ಅಡಗಿರುವ ಪ್ರತಿಭೆಯನ್ನು ಹೊರಸೆಳೆ, ಹೊರಕ್ಕೆ ತರುವುದೇ ಎಡುಕೇರ್ ಎಂಬುದಾಗಿದೆ. ಎಜುಕೇಷನ್ ಪದದ ಮತ್ತೊಂದು ಪದವಾದ 'Educatum' ಎಂದರೆ ಬೋಧನಾ ವಿಧಾನದಲ್ಲಿನ ತತ್ವಗಳ ಮತ್ತು ಆಚಾರ ವೆಂಬ ಅರ್ಥವನ್ನು ನೀಡುತ್ತದೆ.

ಭಾರತದ ಪ್ರಖ್ಯಾತ ಶಿಕ್ಷಣ ತಜ್ಞರು ಹಾಗೂ ಭಾರತದ ರಾಷ್ಟ್ರಪತಿಗಳಾಗಿದ್ದ ಡಾ// ರಾಧಕೃಷ್ಣನ್‌ರವರು ಶಿಕ್ಷಣವನ್ನು ಕುರಿತು ಈ ರೀತಿಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಶಿಕ್ಷಣವೆಂದರೆ **'**Education according to Indian traditional is not merely a means of earning a living; nor it is only a nursery of thought or a school for citizenship. It is initiation into the life of spirit and training of human souls in the pursuit of truth and the practice of virtue**'**[12] ಎಂಬುದಾಗಿದೆ ಅರ್ಥೈಸಿದ್ದಾರೆ. ಶಿಕ್ಷಣವೆಂಬುದು ಭಾರತೀಯ ಇತಿಹಾಸದಲ್ಲಿ ಬಹುಮುಖ್ಯವಾದ ಅಂಶವಾಗಿದೆ.

ಜಾಗತೀಕ ಪ್ರವಾಸೋದ್ಯಮ ಸಂಘಟನೆಯು ಪ್ರವಾಸೋದ್ಯಮ ಪರಿಕಲ್ಪನೆ ಅಥವಾ ಪ್ರವಾಸೋದ್ಯಮ ಚಟುವಟಿಕೆಯು ಒಂದು ರಾಷ್ಟ್ರದ ಸಾಮಾಜಿಕ, ಸಾಂಸ್ಕೃತಿಕ, ಶಿಕ್ಷಣಿಕ ಮತ್ತು ಆರ್ಥಿಕ ಕ್ಷೇತ್ರಗಳ ಮೇಲೆ ನೇರ ಪರಿಣಾಮಗಳನ್ನು ಉಂಟುಮಾಡುತ್ತದೆ ಎಂದು ಹೇಳಿದೆ. ಪ್ರವಾಸೋದ್ಯಮವು ದೇಶದಲ್ಲಿನ ಶೈಕ್ಷಣಿಕ ಕೇಂದ್ರಗಳು ಮತ್ತು ಸಂಸ್ಥೆಗಳ ಮೇಲೆ ಧನಾತ್ಮಕ ಪರಿಣಾಮಗಳನ್ನು ಉಂಟು ಮಾಡುವುದರೊಂದಿಗೆ ಅವುಗಳ ಬೆಳವಣಿಗೆಗೆ ಪ್ರೋತ್ಸಾಹವನ್ನು ನೀಡುತ್ತದೆ ಎಂಬ ಅರ್ಥವನ್ನು ನೀಡಿದೆ.

ವಿವಿಧ ರಾಷ್ಟ್ರಗಳ ಯುವ ವಿದ್ಯಾರ್ಥಿಗಳನ್ನು, ವೃತ್ತಿ ತಜ್ಞರನ್ನು, ನೈಪುಣ್ಯಗೊಳ್ಳುವ ಆಸಕ್ತರನ್ನು ಮತ್ತು ಉತ್ತಮ ಶಿಕ್ಷಣ ಪಡೆಯುವ ಹಂಬಲ ಹೊಂದಿರುವ ಯುವ ಸಮುದಾಯವನ್ನು ಆಕರ್ಷಣೆ ಮಾಡಲು ಮಹತ್ವದ ಪ್ರಯತ್ನವನ್ನು ನಡೆಸಿತು. ರಾಷ್ಟ್ರದ ಶೈಕ್ಷಣಿಕ ಪ್ರವಾಸೋದ್ಯಮವನ್ನು ಬೆಳೆಸುವ ನಿಟ್ಟಿನಲ್ಲಿ ಬ್ರೆಜಿಲ್, ಅಮೇರಿಕ, ಬ್ರಿಟನ್, ಜರ್ಮನಿ, ಜಪಾನ್ ಮತ್ತು ಭಾರತ ರಾಷ್ಟ್ರಗಳು ಪ್ರಯತ್ನವನ್ನು ನಡೆಸಿ ಯಶಸ್ವಿಯಾಗಿವೆ. ಈ ಮೂಲಕ ಶೈಕ್ಷಣಿಕ ಪ್ರವಾಸದಿಂದಾಗಿ ವಿವಿಧ ಸಹಾಯಕ ಮತ್ತು ನೇರ ಉದ್ಯಮಗಳ ಬೆಳವಣಿಗೆಯೊಂದಿಗೆ ಆರ್ಥಿಕ ಅಸಮತೋಲನ ನಿವಾರಣೆಗೆ ಶೈಕ್ಷಣಿಕ ಪ್ರವಾಸೋದ್ಯಮವು ಪೂರಕವಾಗಿದೆ.

ಈ ರೀತಿಯ ಶೈಕ್ಷಣಿಕ ಪ್ರವಾಸೋಧ್ಯಮವು ತನ್ನ ಮಹತ್ವವನ್ನು ಮತ್ತು ಪ್ರಭಾವನ್ನು ಪಡೆದುಕೊಳ್ಳುವಲ್ಲಿ ಆಧುನಿಕ ಸಾರಿಗೆ ಮತ್ತು ಸಂಪರ್ಕ ಸಾಧನಗಳ ಕೊಡುಗೆ ಮಹತ್ವ ಪೂರ್ಣವಾಗಿದೆ. ಇಂದಿನ ಮಾಹಿತಿ ತಂತ್ರಜ್ಞಾನ ಯುಗದಲ್ಲಿ ದೇಶದ ಯಾವುದೇ ಮೂಲೆಯಿಂದ ಜಗತ್ತಿನ ಯಾವುದೇ ಸ್ಥಳದಲ್ಲಿರುವ ವ್ಯಕ್ತಿಯನ್ನು ಕ್ಷಣಾರ್ಧದಲ್ಲಿ ಸಂಪರ್ಕವನ್ನು ಮಾಡುವ ನಿಟ್ಟಿನಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನವು ಅವಕಾಶವನ್ನು ಕಲ್ಪಿಸಿದೆ.

ಈ ನಿಟ್ಟಿನಲ್ಲಿ ಕರ್ನಾಟಕ ಸರ್ಕಾರವು ಒಳ್ಳೆಯ ನಿರ್ಧಾರಗಳನ್ನು ಮತ್ತು ಯೋಜನೆಗಳನ್ನು ಇತ್ತೀಚಿನ ದಿನಗಳಲ್ಲಿ ಕೈಗೊಂಡಿದೆ. ಕರ್ನಾಟಕ ರಾಜ್ಯದ ವಿವಿಧ ಕ್ಷೇತ್ರಗಳಲ್ಲಿ ವಿದೇಶಿ ಬಂಡವಾಳ

ಹೂಡಿಕೆಗೆ ಅವಕಾಶವನ್ನು ನೀಡುವ ಸಲುವಾಗಿ ಮತ್ತು ಸ್ಥಳಿಯ ಶೈಕ್ಷಣಿಕ ಕೇಂದ್ರಗಳನ್ನು ಅಭಿವೃದ್ಧಿಪಡಿಸಲು ಪ್ರಥಮ ಬಾರಿಗೆ ಇಂತಹ ಹೆಜ್ಜೆಯನ್ನು ಇಟ್ಟ ಮೊದಲ ರಾಜ್ಯವೆಂಬ ಖ್ಯಾತಿಯನ್ನು ಸಹ ಕರ್ನಾಟಕವು ಪಾತ್ರವಾಯಿತು.[13] ಬೆಂಗಳೂರಿನ ಜಾಗತೀಕ ಬಂಡವಾಳ ಹೂಡಿಕೆ ಸಮಾವೇಶಗಳಲ್ಲಿ ಶೈಕ್ಷಣಿಕ ಕ್ಷೇತ್ರದಲ್ಲಿ ಖಾಸಗಿ ಬಂಡವಾಳ ಹೂಡಿಕೆ ಮಾಡಲು ಹಲವು ರಿಯಾಯಿತಿಗಳನ್ನು ನೀಡಲಾಗಿತ್ತು. ಇದರಿಂದ ಸ್ಥಳೀಯ ಹಲವು ಶೈಕ್ಷಣಿಕ ಸಂಸ್ಥೆಗಳು ಜಾಗತೀಕ ಮಟ್ಟದಲ್ಲಿ ಮತ್ತು ರಾಷ್ಟ್ರೀಯ ಮಟ್ಟದಲ್ಲಿ ತಮ್ಮನ್ನ ಗುರ್ತಿಸಿಕೊಳ್ಳಲು ಪ್ರಯತ್ನವನ್ನು ಮಾಡಿದವು.

ಜಾಗತೀಕ ಮಟ್ಟದಲ್ಲಿ ಭಾರತವು ತಾಂತ್ರಿಕ ಮತ್ತು ವೈದ್ಯಕೀಯ ಶಿಕ್ಷಣ ಕ್ಷೇತ್ರದಲ್ಲಿ ಮಹತ್ತರವಾದ ಸಾಧನೆಯನ್ನು ಮಾಡಿದೆ. ಈ ಸಾಧನೆಯಿಂದಾಗಿ ಪ್ರಪಂಚದ ವಿವಿಧ ದೇಶಗಳಿಂದ ವಿದ್ಯಾರ್ಥಿ ಸಮುದಾಯಗಳನ್ನು ಮತ್ತು ತಾಂತ್ರಿಕ ತಜ್ಞರನ್ನು ತನ್ನಡೆಗೆ ಆಕರ್ಷಣೇ ಮಾಡುತ್ತಿದೆ. ಶೈಕ್ಷಣಿಕ ಪ್ರವಾಸೋದ್ಯವು ಸ್ಥಳೀಯ ಮಟ್ಟದಲ್ಲಿ ಹಲವು ಪ್ರಧಾನವಾದ ಮತ್ತು ಸಹಾಯಕ ಉದ್ಯಮಗಳ ಬೆಳವಣಿಗೆಗೆ ಪೂರಕವಾಗಿ ಕಾರ್ಯನಿರ್ವಹಿಸುತ್ತದೆ. ಈ ನಿಟ್ಟಿನಲ್ಲಿ ಕರ್ನಾಟಕವು ಅಂತರಾಷ್ಟ್ರೀಯ ಮತ್ತು ರಾಷ್ಟ್ರೀಯ ಮಟ್ಟದಲ್ಲಿ ಪ್ರಖ್ಯಾತಿಯನ್ನು ಪಡೆದಿರುವ ಹಲವು ಶೈಕ್ಷಣಿಕ ಮತ್ತು ವೈದ್ಯಕೀಯ ಶಿಕ್ಷಣ ಸಂಸ್ಥೆಗಳನ್ನು ಹೊಂದಿದ್ದು ವಿಶ್ವದ ಹಲವು ರಾಷ್ಟ್ರಗಳಿಂದ ವ್ಯಾಸಂಗ ಮಾಡುವಂತಹ ವಿದ್ಯಾರ್ಥಿ ಸಮುದಾಯವನ್ನು ತನ್ನಡೆಗೆ ಸೆಳೆಯುವುದರಲ್ಲಿ ಯಶಸ್ವಿಯಾಗಿದೆ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ವೈದ್ಯಕೀಯ ಕಾಲೇಜು ಮತ್ತು ತಂತ್ರಜ್ಞಾನ ಕಾಲೇಜುಗಳು ಪ್ರಾರಂಭಗೊಂಡಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ನಾಲ್ಕು ತಾಂತ್ರಿಕ ಮತ್ತು ಎರಡು ವೈದ್ಯಕೀಯ ಶಿಕ್ಷಣ ಸಂಸ್ಥೆಗಳು ಇವೆ.[14] ಇವು ಕರ್ನಾಟಕ ಮತ್ತು ಭಾರತದ ಆರ್ಥಿಕ ಬೆಳವಣಿಗೆಯೊಂದಿಗೆ ಪ್ರವಾಸೋದ್ಯಮ ಅಭಿವೃದ್ಧಿಯಲ್ಲಿ ಗಮನಾರ್ಹವಾದ ಪಾತ್ರವನ್ನು ವಹಿಸಿವೆ. ಶಿಕ್ಷಣವು ವಿವಿಧ ದೇಶಗಳ ಮತ್ತು ತನ್ನ ದೇಶದ ವಿಭಿನ್ನ ಪ್ರದೇಶಗಳ ಪ್ರವಾಸಿಗರನ್ನು ಆಕರ್ಷಣೆ ಮಾಡುವ ನಿಟ್ಟಿನಲ್ಲಿ ಕಾರ್ಯನಿರ್ವಹಿಸುತ್ತಿವೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಶೈಕ್ಷಣಿಕ ಪ್ರವಾಸೋದ್ಯಮಕ್ಕೆ ಉತ್ತಮ ಅವಕಾಶಗಳನ್ನು ಹೊಂದಿದೆ.

2011ರ ಜನಗಣತಿಯಂತೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಒಟ್ಟು ಜನಸಂಖ್ಯೆಯು 990923 ಆಗಿದೆ. ಕರ್ನಾಟಕದ ಸಾಕ್ಷರತೆಯ ಪ್ರಮಾಣವು 68.13 ರಷ್ಟಿದ್ದು ಪುರುಷರ ಸಾಕ್ಷರರ ಸಂಖ್ಯೆಯು 75.60 ರಷ್ಟಾದರೆ ಮಹಿಳಾ ಸಾಕ್ಷರರ ಪ್ರಮಾಣವು 82.95 ರಷ್ಟಿದ್ದು ರಾಜ್ಯದಲ್ಲಿನ ಸಾಕ್ಷರತೆಯಲ್ಲಿ ಮಹಿಳೆಯರು ಪ್ರಾಬಲ್ಯವನ್ನು ಪಡೆದಿದ್ದಾರೆ.[15] ಬೆಂಗಳೂರು ಗ್ರಾಮಾಂತರ

ಜಿಲ್ಲೆಯಲ್ಲಿ ಸಾಕ್ಷರತೆಯ ಪ್ರಮಾಣವು ಹೆಚ್ಚಾಗುವ ನಿಟ್ಟಿನಲ್ಲಿ ಶೈಕ್ಷಣಿಕ ಸಂಸ್ಥೆಗಳ ಪಾತ್ರ ಮಹತ್ವ ಪೂರ್ಣದ್ದಾಗಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿರುವ ವಿಭಿನ್ನ ವಿಷಯಗಳಲ್ಲಿ ಶಿಕ್ಷಣವನ್ನು ನೀಡುತ್ತಿರುವ ಸರ್ಕಾರಿ, ಖಾಸಗಿ ಅನುದಾನಿತ ಮತ್ತು ಖಾಸಗಿ ಶಿಕ್ಷಣ ಸಂಸ್ಥೆಗಳ ಶ್ರಮವು ಮಾಹತ್ವವಾಗಿದೆ. ಪುರುಷರಿಗಿಂತ ಮಹಿಳೆಯರು ಸಾಕ್ಷರತೆ ಪ್ರಮಾಣದಲ್ಲಿ ಮುಂದೆ ಇರುವುದನ್ನು ಕಾಣಬಹುದಾಗಿದೆ. ಈ ಮೂಲಕ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವಸತಿ, ಆರೋಗ್ಯ, ಶಿಕ್ಷಣ, ಮೂಲಭೂತ ಸೌಕರ್ಯಗಳು, ಉದ್ಯೋಗ, ಜೀವನ ಮಟ್ಟದ ಹೆಚ್ಚಳ, ಆದಾಯದ ಗಳಿಕೆ, ಮನರಂಜನೆ, ಆಹಾರ ಮತ್ತು ಪಾನೀಯಗಳು, ಸಾರಿಗೆ–ಸಂಪರ್ಕ, ಕೃಷಿ, ಇತರ ಸಹಾಯಕ ಸೇವೆಗಳು ಮತ್ತು ಕೈಗಾರಿಕರಗಳ ಬೆಳವಣಿಗೆಯಲ್ಲಿ ಉನ್ನತ ಪಾತ್ರವನ್ನು ಒಳಗೊಂಡಿದೆ.

ಬೆಂಗಳೂರು ಗ್ರಾಮಾತರ ಜಿಲ್ಲೆಯಲ್ಲಿ ಪ್ರಾಚೀನ ಕಾಲದಿಂದಲೂ ಹಲವು ಅಗ್ರಹಾರಗಳು ಮತ್ತು ದೇವಾಲಯಗಳು ಹಿಂದೂ ಧಾರ್ಮಿಕ ಶಿಕ್ಷಣವನ್ನು ನೀಡುತ್ತಾ ಬಂದಿದೆ. ಇಂತಹ ಅಗ್ರಹಾರಗಳಿಗೆ ಮಹತ್ವದ ಕೊಡುಗೆಯನ್ನು ನೀಡಿದ್ದಾರೆ. ಇದರೊಂದಿಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹಲವು ಸ್ಥಳಗಳು ಪ್ರಾಚೀನ ಶಿಕ್ಷಣವನ್ನು ನೀಡುತ್ತಿದ್ದ ಅಗ್ರಹಾರಗಳಾಗಿದ್ದು ಜಿಲ್ಲೆಯಲ್ಲಿ ಪ್ರಮುಖ ಸಮುದಾಯಗಳಿಗೆ ಶಿಕ್ಷಣವನ್ನು ನೀಡುತ್ತಿದ್ದವೆಂಬುದು ಸ್ಥಳೀಕರು ತಿಳಿಸಲಾಗಿದೆ.[16] (ಉದಾ: ಕನ್ನಮಂಗಲ ಅಗ್ರಹಾರ)

ಆಧುನಿಕ ಕಾಲದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಶಿಕ್ಷಣಕ್ಕೆ ಹೆಚ್ಚು ಪ್ರಾಧಾನ್ಯತೆಯನ್ನು ನೀಡುರುವುದು ಕಂಡುಬರುತ್ತದೆ. ಆಂಧ್ರ ಮತ್ತು ತಮಿಳುನಾಡಿನ ಗಡಿ ಭಾಗವಾಗಿದ್ದು ಬಯಲು ಸೀಮೆ ಪ್ರದೇಶವಾಗಿದೆ. ಶಾಶ್ವತವಾಗಿ ಹರಿಯುವ ನದಿಗಳ ಕೊರತೆಯಿಂದ ಇಲ್ಲಿನ ಜನ ಸಮುದಾಯಗಳು ಕೃಷಿಯನ್ನು ನಡೆಸುವುದು ಕಷ್ಟದಯಕವಾಗಿದೆ. ಮಳೆ ಮತ್ತು ಕೆರೆಗಳ ನೀರನ್ನು ಬಳಸಿ ವ್ಯವಸಾಯ ಮಾಡುತ್ತಿದ್ದರು. ಹೀಗೆ ಕೃಷಿಯನ್ನು ನಂಬಿ ಜೀವನ ನಡೆಸುತ್ತಿದ್ದ ಜನಸಮುದಾಯಗಳು ಕಾಲಾನಂತರದಲ್ಲಿ ಜೀವನಕ್ಕಾಗಿ ಶಿಕ್ಷಣದ ಕಡೆಗೆ ತಮ್ಮ ಇಲವು ತೋರಿದರು.

2018–19ನೇ ಸಾಲಿನಲ್ಲಿ ಪ್ರಥಮಿಕ ಮತ್ತು ಪ್ರೌಢಶಲೆಗಳು ಸೇರಿ ಒಟ್ಟು 4698 ಶಾಲೆಗಳಿದ್ದವು.[17] ತಾಲ್ಲೂಕುವಾರು ಅವುಗಳ ಸಂಖ್ಯೆಯನ್ನು ಈ ಕೆಳಗಿನಂತೆ ಕಾಣಬಹುದಾಗಿದೆ. ನಾಲ್ಕು ತಾಲ್ಲೂಕುಗಳಲ್ಲಿ 2018ನೇ ಸಾಲಿನಲ್ಲಿದ್ದ 140 ಪದವಿ ಪೂರ್ವ ಕಾಲೇಜುಗಳ ಸಂಖ್ಯೆಯು 2019ನೇ ಸಾಲಿಗೆ 151 ಪದವಿ ಪೂರ್ವ ಕಾಲೇಜುಗಳಿಗೆ ಏರಿಕೆಯಾಯಿತು.[18] ಪದವಿ ಪೂರ್ವ ಕಾಲೇಜುಗಳಿಂದ ತೇರ್ಗಡೆಯಾಗುವ ವಿದ್ಯಾರ್ಥಿಗಳು ವೈದ್ಯಕೀಯ ಮತ್ತು ತಾಂತ್ರಿಕ

ಶಿಕ್ಷಣಕ್ಕೆ ಹೆಚ್ಚು ಒತ್ತನ್ನು ನೀಡುತ್ತಿದ್ದಾರೆ. ಇದರಿಂದಾಗಿ ಜಿಲ್ಲೆಯಲ್ಲಿ ಸಿಗುತ್ತಿರುವ ಕಡಿಮೆ ಮತ್ತು ಉತ್ತಮ ಗುಣಮಟ್ಟದ ಪದವಿ ಪೂರ್ವ ಶಿಕ್ಷಣಕ್ಕೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕಾಲೇಜುಗಳನ್ನು ಆಯ್ಕೆ ಮಾಡಿಕೊಳ್ಳುತ್ತಿದ್ದಾರೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಮತ್ತು ಕರ್ನಾಟಕ ರಾಜ್ಯಕ್ಕೆ ಉತ್ತಮ ಪ್ರಾಥಮಿಕ ಶಾಲಾ ಶಿಕ್ಷಕರನ್ನು ನೀಡುವ ನಿಟ್ಟಿನಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಟಿ.ಸಿ.ಹೆಚ್. ಅಥವಾ ಡಿ.ಎಡ್. ಕಾಲೇಜುಗಳು ಪ್ರಧಾನವಾದ ಪಾತ್ರವನ್ನು ವಹಿಸುತ್ತವೆ. 2007ರಲ್ಲಿ ಬಿ.ಎ., ಮತ್ತು ಬಿ.ಎಸ್ಸಿ., ಪದವಿಗಳು ಕಾಲೇಜುಗಳು ಪ್ರಾರಂಭಗೊಂಡಿದ್ದವು. 2019ರಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪದವಿ ಕಾಲೇಜುಗಳ ಸಂಖ್ಯೆ 25 ಅಂಶ ಪ್ರತಿವರ್ಷ ಏಳು ಸಾವಿರ ವಿದ್ಯಾರ್ಥಿಗಳು ಪದವಿ ಪೂರೈಸುತ್ತಿದ್ದಾರೆ.[19] ದೊಡ್ಡ ಪ್ರಮಾಣದಲ್ಲಿ ವಿದ್ಯಾರ್ಥಿಗಳಿಗೆ ವ್ಯಾಸಂಗ ಮಾಡಲು ವಿವಿಧ ಉನ್ನತ ವ್ಯಾಸಂಗಕ್ಕೆ ಅನುಕೂಲವಾಗುವ ಹಾಗೂ ಜಿಲ್ಲೆಯ ಶಿಕ್ಷಣ ಕ್ಷೇತ್ರವು ಪ್ರಗತಿಪಥದ ಹಾದಿಯಲ್ಲಿ ಸಹಾಯಕಾರಿಯಾಗಿವೆ.

ದೊಡ್ಡಬಳ್ಳಾಪುರದಲ್ಲಿ ಬಿ.ಎಡ್. ಕಾಲೇಜು ಖಾಸಗಿಯವರಿಂದ ಪ್ರಾರಂಭವಾಯಿತು. 2005ನೇ ಸಾಲಿನವರೆಗೂ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಮೇಲಿನ ಮೂರು ಬಿ.ಎಡ್. ಕಾಲೇಜುಗಳು ಕಾರ್ಯನಿರ್ವಹಿಸುತ್ತಿದ್ದವು. ಮತ್ತು ಇನ್ನೆರಡು ಖಾಸಗಿ ಕಾಲೇಜುಗಳು ಪ್ರಾರಂಭಗೊಂಡು ಒಟ್ಟು ನಾಲ್ಕು ಕಾಲೇಜುಗಳಾದವು.[20] 2005ರಲ್ಲಿದ್ದ ನಾಲ್ಕು ಕಾಲೇಜುಗಳು ಸಂಖ್ಯೆಯು 2014ರಲ್ಲಿ 21 ಕಾಲೇಜುಗಳಾಗಿವೆ. ಈ ಜಿಲ್ಲೆಯ ಶೈಕ್ಷಣಿಕ ಬೆಳವಣಿಗೆಗೆ ಬಿ.ಎಡ್. ಕಾಲೇಜುಗಳು ಉತ್ತಮವಾದ ಕೊಡುಗೆಯನ್ನು ನೀಡಿವೆ ಮತ್ತು ನೀಡುತ್ತಿವೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ತಾಲ್ಲೂಕುಗಳಿಗೆ ಬಿ.ಎಡ್. ಕಾಲೇಜುಗಳಲ್ಲಿ ವ್ಯಾಸಂಗ ಮಾಡಲು ನೆರೆಯ ಜಿಲ್ಲೆ ಮತ್ತು ತಮಿಳುನಾಡು ರಾಜ್ಯಗಳಿಂದ ವಿದ್ಯಾರ್ಥಿಗಳು ಶೈಕ್ಷಣಿಕ ಪ್ರವಾಸವನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಕೈಗೊಳ್ಳುತ್ತಿದ್ದಾರೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಮತ್ತಷ್ಟು ಪಾಲಿಟೆಕ್ನಿಕ್ ಕಾಲೇಜುಗಳು ಪ್ರಾರಂಭಗೊಂಡವು. ಈ ಅವಧಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪಾಲಿಟೆಕ್ನಿಕ್ ಸಂಖ್ಯೆ 7ಕ್ಕೇರಿತು. 2014ನೇ ಸಾಲಿನಲ್ಲಿ ಇವುಗಳ ಸಂಖ್ಯೆ 18ಕ್ಕೆ ಎರಿಕೆಯಾಗಿದೆ.[21] ಇವುಗಳಲ್ಲಿ ಸರ್ಕಾರಿ ಮತ್ತು ಖಾಸಗಿ ಹಾಗೂ ಅನುದಾನಿತ ಪಾಲಿಟೆಕ್ನಿಕ್ ಕಾಲೇಜುಗಳು ಸೇರಿವೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲದೇ ರಾಜ್ಯದ ವಿವಿಧ ಜಿಲ್ಲೆಗಳಿಂದ ವಿದ್ಯಾರ್ಥಿಗಳನ್ನು ತಾಂತ್ರಿಕ ಶಿಕ್ಷಣ ಪಡೆಯಲು ಆಕರ್ಷಣೆ ಮಾಡುತ್ತಿರುವ ಕಾಲೇಜುಗಳಾಗಿವೆ. ಕಾಲೇಜುವಾರು

ವ್ಯಾಸಂಗ ಮಾಡುತ್ತಿದ್ದ ಸಂಖ್ಯೆಯಲ್ಲಿ ಸುಮಾರು 80ಭಾಗದಷ್ಟು ವಿದ್ಯಾರ್ಥಿಗಳು ಹೊರಗಿನ ಪ್ರದೇಶಗಳಿಂದ ಬಂದು ಇಲ್ಲಿ ವ್ಯಾಸಂಗ ಮಾಡುತ್ತಿರುವುದು ಕಂಡುಬರುತ್ತದೆ. ಈ ರೀತಿಯಲ್ಲಿ ಜಿಲ್ಲೆಯ ಶೈಕ್ಷಣಿಕ ಪ್ರವಾಸೋದ್ಯಮ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿರುವ ಕಾಲೇಜುಗಳನ್ನು ಈ ಕೆಳಗಿನಂತೆ ಕಾಣಬಹುದಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಪ್ರತಿವರ್ಷ 150 ಎಂ.ಬಿ.ಬಿ.ಎಸ್. ವಿದ್ಯಾರ್ಥಿಗಳು ಮತ್ತು 24 ವಿವಿಧ ಸ್ನಾತಕೋತ್ತರ ವೈದ್ಯಕೀಯ ಶಿಕ್ಷಣ ಪಡೆಯಲು 81 ವಿದ್ಯಾರ್ಥಿಗಳು ಪ್ರವೇಶ ಪಡೆಯುತ್ತಿದ್ದಾರೆ.[22] ಸುಮಾರು 74 ಎಕರೆ ಪ್ರದೇಶದಲ್ಲಿರುವ ಈ ಕಾಲೇಜು ಪದವಿ ಶಿಕ್ಷಣದೊಂದಿಗೆ ಒಂಬತ್ತು ಬಗೆಯ ವಿಷಯಗಳಲ್ಲಿ ಡಿಪ್ಲೋಮಾ ಮೆಡಿಕಲ್ ಕೋರ್ಸುಗಳನ್ನು ಸಹ ನಡೆಸುತ್ತಿದೆ. ಇವುಗಳಲ್ಲದೇ ಸರ್ಟಿಫಿಕೇಟ್ ಕೋರ್ಸುಗಳನ್ನು ಪ್ರಾರಂಭಿಸಲಾಗಿದೆ.

ಅಖಿಲ ಭಾರತ ವೈದ್ಯಕೀಯ ಪ್ರವೇಶ ಯು.ಜಿ. ಮತ್ತು ಪಿ.ಜಿ. ಪ್ರವೇಶ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರುವ ವಿದ್ಯಾರ್ಥಿಗಳು ಇಲ್ಲಿ ದಾಖಲಾತಿಯನ್ನು ಪಡೆಯುತ್ತಾರೆ. ಜಗತ್ತಿನ ವಿವಿಧ ದೇಶಗಳ ವಿದ್ಯಾರ್ಥಿಗಳು ಇಲ್ಲಿಗೆ ವೈದ್ಯಕೀಯ ಶಿಕ್ಷಣವನ್ನು ಪಡೆಯಲು ಆಗಮಿಸುತ್ತಿದ್ದಾರೆ. ಈ ಮೂಲಕವಾಗಿ  ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವೈದ್ಯಕೀಯ ಶಿಕ್ಷಣ ಪ್ರವಾಸೋದ್ಯಮವು ಅಭಿವೃದ್ಧಿಯಾಗಲು ಸಹಾಯಕಾರಿಯಾಗಿದೆ. (ಛಾಯಾ ಚಿತ್ರ – 34)

ಪದವಿಯನ್ನು ಪಡೆಯುವ ವಿದ್ಯಾರ್ಥಿಗಳು ಮೆಡಿಕಲ್ ಶಿಕ್ಷಣಕ್ಕೆ ಪದವಿ ಪೂರ್ವ ವಿದ್ಯಾರ್ಥಿಗಳನ್ನು ಪರಿಗಣಿಸಿದ್ದಾರೆ. ಇದಲ್ಲದೇ ಇನ್ನಿತರ ಆಹಾರ, ವಸತಿ, ಸಾರಿಗೆ–ಸಂಪರ್ಕ, ಮನರಂಜನೆ, ಬಟ್ಟೆಗಳ ಖರೀದಿ ಮತ್ತು ಇತರ ವಸ್ತುಗಳಿಗಾಗಿ ವಿದ್ಯಾರ್ಥಿಗಳನ್ನು ವೆಚ್ಚವನ್ನು ಮಾಡುತ್ತಾರೆ. ಇದರಿಂದ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಜಿಲ್ಲೆಯ ಹಲವು ಉದ್ಯಮಗಳು ಬೆಳವಣಿಗೆಯಾಗುತ್ತಿವೆ. ಸುಮಾರು 28 ವರ್ಷಗಳಿಂದ ಕಾರ್ಯನಿರ್ವಹಿಸುತ್ತಿರುವ ಸದರಿ ಕಾಲೇಜು ಜಿಲ್ಲೆಯ ಜನರಿಗೆ ವಿವಿಧ ಕ್ಷೇತ್ರಗಳಲ್ಲಿ ಉದ್ಯೋಗ ದೊರೆಯಲು ಸಹ ಕಾರಣವಾಗಿದೆ. ಜಿಲ್ಲೆಯ ಅತ್ಯಂತ ಹಳೆಯದಾದ ಮತ್ತು ಇಂದಿಗೂ ಪ್ರಧಾನ ನರ್ಸಿಂಗ್ ಕಾಲೇಜುಗಳಲ್ಲಿ ಒಂದಾಗಿರುವ ಹರ್ಷ ಗ್ರೂಪ್ ಆಫ್ ಇನ್ಸಿಟ್ಯೂಷನ್ ಈ ಕಾಲೇಜಿನಲ್ಲಿ ಸಾವಿರಾರು ವಿದ್ಯಾರ್ಥಿಗಳಿಗಿಂತ ಹೆಚ್ಚಾಗಿ ವಿದ್ಯಾರ್ಥಿಗಳು ವಿದ್ಯಾಭ್ಯಾಸವನ್ನು ಪಡೆಯುತ್ತಿದ್ದಾರೆ.

ಈ ಎಲ್ಲಾ ಕಾಲೇಜುಗಳು ಮೂಲಭೂತವಾಗಿ ಮೈಸೂರು ವಿಶ್ವವಿದ್ಯಾಲಯದ ಅಡಿಯಲ್ಲಿ ಪ್ರಾರಂಭವಾಗಿದ್ದು, ನಂತರ ಬೆಂಗಳೂರು ವಿಶ್ವವಿದ್ಯಾಲಯದ ಅಧೀನಕ್ಕೆ ತರಲಾಯಿತು. ಇದಾದ

ನಂತರ ತಾಂತ್ರಿಕ ಮತ್ತು ವೈದ್ಯಕೀಯ ವಿಶ್ವವಿದ್ಯಾಲಗಳು ಸ್ಥಾಪನೆಯಾದ ನಂತರ ಅದರ ಅಡಿಯಲ್ಲಿ ಸಂಯೋಜನೆ ಗೊಂಡಿರುವುದನ್ನು ಕಾಣಬಹುದು. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ನಿರುದ್ಯೋಗಿ ಯುವಕರಿಗೆ ವಿವಿಧ ವೃತ್ತಿಗಳಲ್ಲಿ ಕೌಶಲ್ಯವನ್ನು ನಿಡಿ ಉದ್ಯೋಗ ಪಡೆಯಲು ಅನುಕೂಲವಾಗಿವಂತೆ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳ ಮತ್ತು ವಿವಿಧ ಸರ್ಕಾದ ಸಂಸ್ಥೆಗಳ ಸಹಯೊಗದಲ್ಲಿ ಉದ್ಯೋಗ ಉನ್ನತಿ ಕಾರ್ಯಕ್ರಮಗಳನ್ನು. ಇದು, ತಾಂತ್ರಿಕ ಶಿಕ್ಷಣ ಕ್ಷೇತ್ರದಲ್ಲಿ ಮತ್ತೊಂದು ಶೈಕ್ಷಣಿಕ ಪ್ರಗತಿಯಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಪ್ರಾಥಮಿಕ ಶಿಕ್ಷಣದಲ್ಲಿ ಮುಂದುವರೆದಿದ್ದು ಇದರ ಅನುಗುಣವಾಗಿ ಕೇಂದ್ರ ಸರ್ಕಾರದ ಅಡಿಯಲ್ಲಿ ಶಾಲೆಗಳನ್ನು ಪ್ರಾರಂಭಗೊಂಡಿದೆ ಅವುಗಳಲ್ಲಿ ಪ್ರಮುಖವಾಗಿ ಮೊರಾರ್ಜಿ ದೇಸಾಯಿ, ಕುವೆಂಪು ಮಾದರಿ ಶಾಲೆಗಳು, ಕಿತ್ತೂರು ರಾಣಿ ಚೆನ್ನಮ್ಮ ಶಾಲೆಗಳು ಮತ್ತು ಕಸ್ತೂರಿಬಾ ಗಾಂಧಿ ಶಾಲೆಗಳು ಮೂಲಭೂತ ಶಿಕ್ಷಣವನ್ನು ನೀಡುತ್ತಿದ್ದು ಉನ್ನತ ಶಿಕ್ಷಣ ಕೇಂದ್ರಗಳು ಅಭಿವೃದ್ಧಿಯಾಗಲು ಕಾರಣವಾಗಿವೆ. ಉತ್ತಮ ಜ್ಞಾನವನ್ನು ನೀಡುವುದರೊಂದುಗೆ ತಾಂತ್ರಿಕ ಶಿಕ್ಷಣ ಮತ್ತು ಇತರ ಬಗೆಯ ಉನ್ನತ ಶಿಕ್ಷಣ ಕೇಂದ್ರಗಳಿಗೆ ವಿದ್ಯಾರ್ಥಿಗಳನ್ನು ಪೂರೈಸುತ್ತಿವೆ. ಶಿಕ್ಷಣಿಕ ಕೇಂದ್ರಗಳ ಬೆಳವಣಿಗೆಯೊಂದಿಗೆ ಜಿಲ್ಲೆಯ ವಿವಿಧ ಆರ್ಥಿಕ ಉದ್ಯಮಗಳು ಅಭಿವೃದ್ಧಿಯಾಗಲು ಮಹತ್ವಪೂರ್ಣವಾದ ಕೊಡುಗೆಯನ್ನು ನೀಡುತ್ತಿವೆ. ಜಾನಪದ ಪರಂಪರೆಯ ವಿವಿಧ ಕಲೆಗಳನ್ನು ಮತ್ತು ಜಾನಪದ ನೃತ್ಯ ಪ್ರಕಾರಗಳು, ನಾಟಕ, ಅಭಿನಯ ಮತ್ತು ಇತರ ಸೃಜನಾತ್ಮಕವಾದ ಶಿಕ್ಷಣವನ್ನು ಮತ್ತು ತರಭೇತಿಯನ್ನು ನೀಡುವಂತಹ ಸ್ಥಳಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿವೆ.

## 5.7 ಆರೋಗ್ಯಕರ ಪ್ರವಾಸೋದ್ಯಮ

ಆರೋಗ್ಯವನ್ನು ಕಾಪಡಿಕೊಳ್ಳುವುದು ಪ್ರತಿಯೊಬ್ಬ ವ್ಯಕ್ತಿಯ ಜೊತೆಗೆ ಸಮಾಜದ ಜವಾಬ್ದಾರಿಯು ಆಗಿದೆ. ಸಮಾಜದ ಆರೋಗ್ಯ ಮತ್ತು ಶಿಕ್ಷಣ, ಇವುಗಳು ಅಭಿವೃದ್ಧಿಯ ಕೇಂದ್ರವಾಗಿದೆ. ರಾಷ್ಟ್ರದ ಆರ್ಥಿಕ ಮತ್ತು ಸಾಮಾಜಿಕ ಪ್ರಗತಿಯಲ್ಲಿ ಉತ್ತಮ ಆರೋಗ್ಯವನ್ನು ಹೊಂದಿರುವ ವ್ಯಕ್ತಿಯ ಪಾತ್ರ ಮುಖ್ಯವಾಗಿರುತ್ತದೆ. ಆರೋಗ್ಯಯುತವಾದ ಸಮಾಜವು ದೇಶದ ಸರ್ವಾಂಗೀಣ ಅಭಿವೃದ್ಧಿಗೆ ಅವಶ್ಯಕವಾದ ಪ್ರಮುಖ ಅಂಶವಾಗಿದೆ.

ಕರ್ನಾಟಕದಲ್ಲಿ ರಾಜ್ಯದಲ್ಲಿ ಆರೋಗ್ಯ ವೆಚ್ಚಗಳಲ್ಲಿ 85%ರಷ್ಟು ರಾಜ್ಯ ಸರ್ಕಾರ ಮತ್ತು 15%ರಷ್ಟು ಕೇಂದ್ರ ಸರ್ಕಾರವು ಭರಿಸುತ್ತಿದೆ. ಭಾರತದ ಒಟ್ಟು ಜನಸಂಖ್ಯೆಯಲ್ಲಿ 10% ಜನರು ಆರೋಗ್ಯಕ್ಕೆ ಸಂಬಂಧಿಸಿದ ವಿಮಾ ಪಾಲಿಸಿಗಳನ್ನು ಹೊಂದಿದ್ದಾರೆ.[23] 25% ಜನಸಂಖ್ಯೆಯು

ಬಡತನ ರೇಖೆಗಿಂತ ಕೆಳಗಿದ್ದು, ಆರೋಗ್ಯ ಸೇವೆಗಳನ್ನು ಪಡೆಯುವುದರಲ್ಲಿ ಹಿಂದುಳಿದ್ದಾರೆ. ವೈದ್ಯಕೀಯ ಅಥವಾ ಆರೋಗ್ಯ ಸೇವೆಗಳಿಗಾಗಿ 40% ಜನರು ತಮ್ಮ ಆಸ್ತಿ ಮತ್ತು ಸಂಪತ್ತನ್ನು ಮಾರಾಟ ಮಾಡಿ ಸೇವೆಗಳನ್ನು ಪಡೆಯುತ್ತಿದ್ದಾರೆ. ಅತಿ ಬಡತನದಲ್ಲಿರುವ 20% ಜನರಿಗೆ ಆರೋಗ್ಯ ಸೇವೆಗಳಿಗಾಗಿ 1 ರೂಪಾಯಿ ವೆಚ್ಚ ಮಾಡಲಾಗುತ್ತಿದೆ. ಆದರೆ ಶ್ರೀಮಂತರ ಆರೋಗ್ಯ ಸೇವೆಗಳಿಗಾಗಿ 3 ರೂಪಾಯಿಗಳನ್ನು ವೆಚ್ಚ ಮಾಡಲಾಗುತ್ತಿದೆ. ಜನರಿಗೆ ಆರೋಗ್ಯ ಸೇವೆಗಳನ್ನು ನೀಡುವುದರಲ್ಲಿ ಸರ್ಕಾರಿ ಮತ್ತು ಖಾಸಗಿ ಹಾಗೂ ಸರ್ಕಾರಿ–ಖಾಸಗಿ ಸಹಭಾಗಿತ್ವದ ಸಂಸ್ಥೆಗಳು ಮುಖ್ಯವಾದ ಪಾತ್ರವನ್ನು ವಹಿಸುತ್ತಿವೆ. 75% ವೈದ್ಯಕೀಯ ಸೇವೆಗಳನ್ನು ಖಾಸಗಿ ವಲಯದ ವೈದ್ಯಕೀಯ ಸಂಸ್ಥೆಗಳು ನೀಡುತ್ತಿವೆ.

ಕರ್ನಾಟಕ ತನ್ನ ವೈದ್ಯಕೀಯ ಸೇವೆಗಳಿಗೆ ವಿಶ್ವ ಪ್ರಸಿದ್ಧಿಯನ್ನು ಪಡೆಯುತ್ತಿದೆ. ಕರ್ನಾಟಕ ಹಲವು ನಗರ ಮತ್ತು ಪಟ್ಟಣಗಳ ವಿದೇಶಗಳಿಂದ ವೈದ್ಯಕೀಯ ಸೇವೆಗಳಿಗಾಗಿ ಪ್ರವಾಸಿಗರನ್ನು ಆಕರ್ಷಣೆ ಮಾಡುತ್ತಿವೆ. ಕರ್ನಾಟಕವು ಸಾಂಪ್ರದಾಯಿಕ ವೈದ್ಯಕೀಯ ಸೇವೆಗಳ ಜೊತೆಗೆ ಆಧುನಿಕ ಅಲೋಪತಿ ಸೇವೆಗಳನ್ನು ಒದಗಿಸುವಂತಹ ಸರ್ಕಾರಿ ಮತ್ತು ಖಾಸಗಿ ವಲಯದ ಆಸ್ಪತ್ರೆಗಳನ್ನು ಹೊಂದಿದೆ. ಕರ್ನಾಟಕ ವೈದ್ಯಕೀಯ ಸೇವೆಗಳಿಗೆ ಸಂಬಂಧಿಸಿದಂತೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ನೆಲಮಂಗಲ ತಾಲ್ಲೂಕಿನಲ್ಲಿ ಸಿದ್ದಾರ್ಥ ಮೆಡಿಕಲ್ ಕಾಲೇಜ್ ಮತ್ತು ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ಆರ್. ಜಾಲಪ್ಪ ಮೆಡಿಕಲ್ ಕಾಲೇಜ್ ವೈದ್ಯಕೀಯ ಶಿಕ್ಷಣವು ಹೆಸರನ್ನು ಪಡೆದುಕೊಂಡಿದ್ದು ವಿದೇಶಿಗರು ಮತ್ತು ಸ್ಥಳೀಯ ಜಿಲ್ಲೆಯವರು ವೈದ್ಯಕೀಯ ಶಿಕ್ಷಣವನ್ನು ಪಡೆಯಲು ಸಹಕಾರಿಯಾಗಿದೆ.

ಮಾನವನು ತನ್ನ ಜೀವನದಲ್ಲಿ ವಿವಿಧ ಬಗೆಯ ರೋಗಗಳಿಗೆ ತುತ್ತಾಗುತ್ತಾನೆ. ಪರಿಸರ ಮತ್ತು ಬೌಗೋಳಿಕ ವಾತಾವರಣಕ್ಕೆ ಹಲವು ರೋಗಗಳು ಬರುತ್ತವೆ. ನೀರು ಮತ್ತು ಕಲುಷಿತ ಆಹಾರ ಸೇವನೆಯಿಂದ ಬರುವಂತಹ ರೋಗಗಳ ಸಂಖ್ಯೆಯು ಅಧಿಕವಾಗಿರುತ್ತವೆ. ಮುಖ್ಯವಾಗಿ ಹಿಂದೆ ಇದ್ದಂತಹ ಕಾಲರ, ಪ್ಲೇಗು, ಸಿಡುಬು, ಕುಷ್ಟರೋಗ, ದೈಹಿಕ ಮತ್ತು ಮಾನಸಿಕ ಶಕ್ತಿಯನ್ನು ಕುಂದಿಸುವಂತಹ ಹಲವು ರೋಗಗಳಿಗೆ ಪರಿಹಾರ ಅಥವಾ ಶಮನ ಮಾಡಿಕೊಳ್ಳುವ ಸಲುವಾಗಿ ಆರೋಗ್ಯವನ್ನು ವೃದ್ಧಿಸುವ ಕೇಂದ್ರಗಳಿಗೆ ಪ್ರಯಾಣ ಮಾಡ ಬೇಕಾಗುತ್ತದೆ. ಈ ನಿಟ್ಟಿನಲ್ಲಿ ಆರೋಗ್ಯ ಪ್ರವಾಸೋದ್ಯಮವೂ ಮಹತ್ವವನ್ನು ಪಡೆದುಕೊಂಡಿದೆ. ಅತ್ಯಾಧುನಿಕ ಮತ್ತು ಕಡಿಮೆ ಖರ್ಚಿನ ವೈದ್ಯಕೀಯ ಕೇಂದ್ರಗಳಲ್ಲಿ ತಮ್ಮ ಆರೋಗ್ಯ ಸುಧಾರಣೆಗೆ ಪ್ರವಾಸವನ್ನು ಮಾಡುತ್ತಿದ್ದಾರೆ. ತಮ್ಮ ಆರೋಗ್ಯ ಸುಧಾರಣೆಯ ಜೊತೆಗೆ, ವಿರಾಮ ಕಳೆಯವ ಹಂಬಲವನ್ನು ಸಹ ಹೊಂದಿದ್ದಾರೆ.

ಕರ್ನಾಟಕ ಒಟ್ಟು ನಾಲ್ಕು ಆರೋಗ್ಯ ಪ್ರವಾಸೋದ್ಯಮ ವಲಯಗಳಿವೆ. ಅವುಗಳಲ್ಲಿ ಮೈಸೂರು, ಬೆಂಗಳೂರು, ಮಂಗಳೂರು ಮತ್ತು ಹುಬ್ಬಳ್ಳಿ–ಧಾರವಾಡ ವಲಯಗಳಲ್ಲಿ ವೈದ್ಯಕೀಯ ಪ್ರವಾಸೋದ್ಯಮ ಬೆಳವಣಿಗೆಗೆ ಪ್ರೋತ್ಸಾಹ ನಿಡಲಾಗುತ್ತಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯು ವೈದ್ಯಕೀಯ ಪ್ರವಾಸೋದ್ಯಮ ಕೇಂದ್ರವಾಗಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಅಸ್ತಿತ್ವದಲ್ಲಿರುವ ಆಯುರ್ವೇದ ಚಿಕಿತ್ಸಾ ಕೇಂದ್ರಗಳು ಮತ್ತು ಮಾನಸಿಕ ರೋಗಿಗಳಿಗೆ ಪರಿಹಾರ ನೀಡಬಲ್ಲವು ಎಂಬ ಜನರ ನಂಬಿಕೆಗೆ ಪಾತ್ರವಾಗಿರುವ ದೇವಾಲಯಗಳು, ಮಂದಿರಗಳು, ದರ್ಗಾಗಳು, ಧಾರ್ಮಿಕ ಚಿಕಿತ್ಸಾ ಕೇಂದ್ರಗಳು, ಯುನಾನಿ, ಯೋಗ, ಹೋಮಿಯೋಪತಿ ಮತ್ತು ಅಲೋಪತಿ ವೈದ್ಯಕೀಯ ಕೇಂದ್ರಗಳು  ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪ್ರವಾಸೋದ್ಯಮ ಬೆಳವಣಿಗೆಯಲ್ಲಿ ಮಹತ್ವವಾದ ಪಾತ್ರವನ್ನು ವಹಿಸುತ್ತಿವೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಹಲವು ಭಾಗಗಳಲ್ಲಿ ವಿವಿಧ ರೋಗಗಳಿಗೆ ನಾಟಿ ಔಷಧಿ ಕೊಡುವ ಕೇಂದ್ರಗಳಿದ್ದು ಪ್ರತಿನಿತ್ಯ ನೂರಾರು ರೋಗಗಳನ್ನು ಆಕರ್ಷಣೆ ಮಾಡುತ್ತಿವೆ. ವಿವಿಧ ಔಷಧಿ ಗುಣವನ್ನು ಪಡೆದಿರುವ ಗಿಡ ಮೂಲಿಕೆಗಳಿಂದ ತಯಾರಿಸಿದ ಔಷಧಿಯನ್ನು ನೀಡುವ ಜನರು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿದ್ದಾರೆ. ಮುಖ್ಯವಾಗಿ ಕಾಮಾಲೆ ಎಂದು ಕರೆಯುವ ಸಕ್ಕರೆ ಕಾಯಿಲೆ, ಮೈ ಬೊಜ್ಜು ಕರಗಿಸುವ ಗಿಡಮೂಲಿಕೆ ಔಷಧಿ, ಹಾವು ಕಡಿತ, ಇದನ್ನು ಸ್ಥಳೀಯ ಭಾಷೆಯಲ್ಲಿ ಪಲುಗು ಕಾಟ ಎಂದು ಕರೆಯುವ ರೋಗಗಳಿಗೆ ಆಯುರ್ವೇದ ಔಷಧಿಯನ್ನು ನೀಡಲಾಗುತ್ತಿದೆ. ಅಸ್ತಮಾ, ನೆಗಡಿ, ಕೆಮ್ಮು, ಜ್ವರ, ಗಾಯ, ಹುಣ್ಣು, ಆಮಶಂಕೆ, ತಲೆ ನೋವು, ಮೂಳೆ ಮುರಿತ, ಕುರಿಗಳ ಮತ್ತು ಇತರ ಸಾಕು ಪ್ರಾಣಿಗಳ ಮೂಳೆಗಳ ತೊಂದರೆ ರೋಗಗಳಿಗೆ ಸ್ಥಳೀಯವಾಗಿ ಹಲವು ಹಳ್ಳಿಗಳಲ್ಲಿ ಪಾರಂಪರಿಕವಾಗಿ ಔಷಧಿಯನ್ನು ನೀಡುವ ಪರಿಪಾಟವನ್ನು ಬೆಳಸಿಕೊಂಡಿದ್ದಾರೆ.

ಹಳ್ಳಿಯ ಹಿರಿಯರು ತಮ್ಮ ಅನುಭವ ಮತ್ತು ತಮ್ಮ ಹಿರಿಯರಿಂದ ತಿಳಿದುಕೊಂಡ ಆಯುರ್ವೇದ ವೈದ್ಯ ಪದ್ಧತಿಯನ್ನು ಮುಂದುವರೆಸಿಕೊಂಡು ಹೋಗುತ್ತಿದ್ದಾರೆ. ಯಾವುದೇ ಕಾಯಿಲೆ ಉಂಟಾಗಲಿ ಅದಕ್ಕೆ ಸ್ಥಳೀಯವಾಗಿ ಪ್ರಥಮ ಚಿಕಿತ್ಸೆಯನ್ನು ನೀಡುತ್ತಾರೆ, ಸ್ಥಳೀಯವಾಗಿ ಲಭ್ಯವಿರುವ ಹಲವು ಔಷಧಿಯ ಗುಣಗಳನ್ನು ಹೊಂದಿರುವ ಸಸ್ಯಗಳನ್ನು ಮತ್ತು ಅದರ ಬೇರುಗಳನ್ನು ತಂದು ಪುಡಿ ಅಥವಾ ಕಷಾಯ ಮಾಡಿ ನೀಡಲಾಗುತ್ತದೆ. ಮಾನವನನ್ನು ಹೊರತುಪಡಿಸಿ ಜಾನುವಾರುಗಳಿಗೆ ತಗಲುವ ರೋಗರುಜ್ಜಿನಗಳನ್ನೂ ಸಹ ದೇಸಿಯ ಮಾರ್ಗದಲ್ಲಿ ಗುಣಪಡಿಸುವ ಪಾರಂಪರಿಕ ವ್ಯವಸ್ಥೆ  ಬೆಂಗಳೂರು ಗ್ರಾಮಾಂತರ ಜಿಲ್ಲೆಯಾದ್ಯಂತ ಕಾಣಬಹುದಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ನೆಲಮಂಗಲ ತಾಲ್ಲೂಕಿನಲ್ಲಿ ಯಂಟಗಾನಹಳ್ಳಿ ಮೂಳೆ ಚಿಕಿತ್ಸಾ ಕೇಂದ್ರವಿದ್ದು ಏಷ್ಟರ ಮಟ್ಟಿಗೆ ಬೆಳವಣಿಗೆಯಾಗಲು ಒಂದು ಕಾರಣವನ್ನು ಒಳಗೊಂಡಿರುತ್ತದೆ. 1991ರಲ್ಲಿ ಕರ್ನಾಟಕದ ಹೆಸರಾಂತ ಚಲನಚಿತ್ರ ನಟ ಡಾ. ರಾಜ್‌ಕುಮಾರ್ ರವರು ಈ ಚಿಕಿತ್ಸಾಕೇಂದ್ರಕ್ಕೆ ಬಂದು ಚಿಕಿತ್ಸೆಯನ್ನು ಪಡೆದುಕೊಂಡು ನಂತರ ಈ ಕೇಂದ್ರ ಸಾಕಷ್ಟು ಬೆಳವಣಿಗೆಗೊಂಡು ಇಲ್ಲಿ ಬೇರೆ ಬೇರೆ ರಾಜ್ಯಗಳಿಂದ ಮತ್ತು ಬೇರೆ ಬೇರೆ ಜಿಲ್ಲೆಗಳಿಂದಲ್ಲೂ ಸಹ ಬರುತ್ತಿದ್ದಾರೆ.[24]

ಮೈಸೂರು ಸರ್ಕಾರದ ಅವಧಿಯಲ್ಲಿ ಆಯುರ್ವೇದ ವೈದ್ಯಕೀಯ ಪದ್ದತಿಗೆ ಹೆಚ್ಚಿನ ಮಹತ್ವವನ್ನು ನೀಡಲಾಗಿತ್ತು ನಂತರದಲ್ಲಿ ಇದೇ ರೀತಿಯ ಪ್ರೋತ್ಸಾಹ ಆರ್ಯುವೇದ ವೈದ್ಯಕೀಯ ಸೇವೆಗಳಿಗೆ ದೊರಕಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹಲವು ಭಾಗಗಳಲ್ಲಿ ಇಂದಿಗೂ ಸರ್ಕಾರಿ ಆಯುರ್ವೇದ ಚಿಕಿತ್ಸಾಲಯಗಳನ್ನು ಕಾಣಬಹುದಾಗಿದೆ.

ಆಯುಷ್ ವೈದ್ಯಕೀಯ ವಿಧಾನದಲ್ಲಿ ಮಹತ್ವದ ಚಿಕಿತ್ಸಾ ವಿಧಾನವೇ ಯೋಗ ಮಾನಸಿಕ ಖಿನ್ನತೆ, ಮೂಳೆಗಳ ನೋವು, ಬೆನ್ನು ಮೂಳೆ ನೋವು, ಸೊಂಟದ ನೋವು, ಅಂಗಾಂಗಗಳ ನೋವು ಮತ್ತು ಸ್ಥಳ ಬದಲಾವಣೆ ಇತರ ಬಗೆಯ ರೋಗಗಳಿಗೆ ಯೋಗವು ಸುಲಭವಾದ ಮತ್ತು ಕಡಿಮೆ ಖರ್ಚಿನ ಚಿಕಿತ್ಸಾ ಪದ್ದತಿಯಾಗಿದೆ. ಭಾರತದ ಪ್ರಾಚೀನ ಕಾಲದಿಂದಲೂ ಯೋಗವು ಹೆಚ್ಚು ಪ್ರಾತಿನಿಧ್ಯ ಮತ್ತು ಪ್ರಾಶಸ್ತ್ಯವನ್ನು ಪಡೆದಿದೆ. ಹಾಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಪ್ರತಿಯೊಂದು ತಾಲ್ಲೂಕು ಮತ್ತು ಜಿಲ್ಲಾ ಕೇಂದ್ರದಲ್ಲಿ ಯೋಗ ಕೇಂದ್ರಗಳನ್ನು ಕಾಣಬಹುದಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಮಾನವನಿಗೆ ತಿಳುವಳಿಕೆ ಬಂದಾಗಲಿಂದಲೂ ಅವನೊಂದಿಗೆ ಇದ್ದು ತನಗೆ ಉಂಟಾಗುವ ಮಾನಸಿಕ ಸಮಸ್ಯೆಗಳನ್ನು ದೂರ ಮಾಡುವ ಮಾನಸಿಕ ನೆಮ್ಮದಿಯನ್ನು ನೀಡುವ ಕೇಂದ್ರಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿವೆ. ಇಲ್ಲಿನ ಮಾನಸಿಕ ಕೇಂದ್ರಗಳು ರೂಢಿಗತವಾಗಿದ್ದು, ಅತಿ ಹೆಚ್ಚು ಪ್ರವಾಸಿಗರನ್ನು ಆಕರ್ಷಣೇ ಮಾಡುತ್ತಿವೆ. ಉದಾ: ಜಿಂದಾಲ್ ಪ್ರಕೃತಿ ಚಿಕಿತ್ಸಾ ಕೇಂದ್ರ. ಆಧುನಿಕ ವಿಜ್ಞಾನ ಮತ್ತು ತಂತ್ರಜ್ಞಾವು ಇಂತಹ ರೂಢಿಗತವಾದ ಮಾನವ ನಂಬಿಕೆಗಳನ್ನು ನಂಬುವುದಿಲ್ಲವಾದರೂ ಸಹ ಪ್ರಾಧಾನ್ಯತೆಯನ್ನು ಮತ್ತು ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ.

ಬ್ರಿಟೀಷ್ ಆಡಳಿತ ಪ್ರಭಾವದಿಂದ ಅಲೋಪತಿ ವೈದ್ಯ ಪದ್ದತಿಯು ಭಾರತಕ್ಕೆ ಪರಿಚಯವಾಯಿತು. ಮೈಸೂರು ರಾಜ್ಯದಲ್ಲಿ, ಅಲೋಪತಿ ವೈದ್ಯ ಪದ್ದತಿಯು ಸೈನ್ಯದಲ್ಲಿ

ಬಳಸಲಾಗುತ್ತಿತ್ತು. ಕಾರಣ, ಹಲವು ಬೀಕರ ರೋಗಗಳಿಗೆ ತುತ್ತಾಗಿ ಸೈನ್ಯವು ತನ್ನ ಸಾಮರ್ಥ್ಯವನ್ನು ಕಳೆದುಕೊಳ್ಳುತ್ತಿತ್ತು. ಈ ನಿಟ್ಟಿನಲ್ಲಿ ಬ್ರಿಟಿಷರು ಅಲೋಪತಿ ವೈದ್ಯ ಪದ್ದತಿಯನ್ನು 19ನೇ ಶತಮಾದಲ್ಲಿ ಮೈಸೂರು ರಾಜ್ಯದಲ್ಲಿ ಜಾರಿಗೆ ತಂದರು. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಅಲೋಪತಿ ಚಿಕಿತ್ಸಾ ಪದ್ದತಿಯು ಬ್ರಿಟಿಷರ, ಕ್ರೈಸ್ತ ಮಿಷನರಿಗಳ ಪ್ರಭಾವದಿಂದ ಮತ್ತು ಮೈಸೂರು ಒಡೆಯರ ಆಡಳಿತದ ಅವಧಿಯಲ್ಲಿ ಪ್ರಾರಂಭಗೊಂಡಿತು.

2010ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ಸರ್ಕಾರದ ಜಾಗತೀಕ ಬಂಡವಾಳ ಹೂಡಿಕೆದಾರರ ಸಮಾವೇಶದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ವೈದ್ಯಕೀಯ ಮತ್ತು ಆರೋಗ್ಯ ಪ್ರವಾಸೋದ್ಯಮ ಕ್ಷೇತ್ರದಲ್ಲಿ ಸರ್ಕಾರಿ ಮತ್ತು ಖಾಸಗಿ ಪಾಲುದಾರಿಕೆಯನ್ನು ಒಳಗೊಂಡ ಒಪ್ಪಂದಗಳಿಗೆ ಅಥವಾ ಯೋಜನೆಗಳಿಗೆ ಒಪ್ಪಿಗೆ ನೀಡಲಾಗಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಸರ್ಕಾರಿ ಮತ್ತು ಖಾಸಗಿ ಸಹಬಾಗಿತ್ವದ ಈ ಯೋಜನೆಗಳು ಜಾರಿಗೊಳ್ಳುತ್ತಿವೆ. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸಹಬಾಗಿತ್ವದಲ್ಲಿ ರಾಜ್ಯದಲ್ಲಿ 220 ಯೋಜನೆಗಳಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹನ್ನೊಂದು ಯೋಜನೆಗಳು ಈ ಒಪ್ಪಂದಗಳಲ್ಲಿ ಒಳಗೊಂಡಿವೆ. ಇವುಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಆರೋಗ್ಯ ಪ್ರವಾಸೋದ್ಯಮ ಅಭಿವೃದ್ಧಿ ಹಿನ್ನೆಲೆಯಲ್ಲಿ ಮಹತ್ವದ ಯೋಜನೆಗಳೆಂದು ಹೇಳಬಹುದಾಗಿದೆ.

2010ನೇ ಸಾಲಿನ ಕರ್ನಾಟಕ ರಾಜ್ಯ ಸರ್ಕಾರದ ಜಾಗತೀಕ ಬಂಡವಾಳ ಹೂಡಿಕೆ ಸಮಾವೇಶದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಆರೋಗ್ಯ ಪ್ರವಾಸೋದ್ಯಮ ಬೆಳವಣಿಗೆಯಲ್ಲಿ ಮಹತ್ವದ ಒಪ್ಪಂದವನ್ನು ಮಾಡಿಕೊಳ್ಳಲಾಯಿತು. ಭಾರತದ ಪ್ರಖ್ಯಾತ ಉದ್ಯಮಗಳ ಒಡೆತನವನ್ನು ಹೊಂದಿರುವ ಗೊದ್ರೇಜ್ ಕಂಪನಿ ಬೆಂಗಳುರು ಗ್ರಾಮಾಂತರ ಜಿಲ್ಲೆಯಲ್ಲಿ 'ಆರೋಗ್ಯ ನಗರ'ವನ್ನು ನಿರ್ಮಾಣ ಮಾಡಲು ಒಪ್ಪಂದವನ್ನು ಮಾಡಿಕೊಂಡಿದೆ. ಈ 'ಹೆಲ್ತ್ ಸಿಟಿ'ಯನ್ನು ನಿರ್ಮಾಣ ಮಾಡುವ ಒಪ್ಪಂದವನ್ನು ಖಾಸಗಿ ಕಂಪನಿಯೊಂದಿಗೆ ರಾಜ್ಯ ಆರೋಗ್ಯ ಮತ್ತು ಕುಂಟುಂಬ ಕಲ್ಯಾಣ ಇಲಾಖೆಯು ಮಾಡಿಕೊಂಡಿದೆ.

ಬೆಂಗಳೂರು ಗ್ರಾಮಾತರ ಜಿಲ್ಲೆಯಲ್ಲಿನ ಆಯುರ್ವೇದ, ಜಾನಪದ ವೈದ್ಯ ಪ್ರಕಾರದ ನಾಟಿ ವೈದ್ಯ, ಮಾನಸಿಕ ಅರೋಗ್ಯ ಪ್ರವಾಸೋದ್ಯಮ ಬೆಳವಣಿಗೆಯಲ್ಲಿ ಪ್ರಧಾನ ಪಾತ್ರವನ್ನು ವಹಿಸುತ್ತಿವೆ. ಕಡಿಮೆ ಖರ್ಚಿನಲ್ಲಿ ಚಿಕಿತ್ಸೆಯನ್ನು ಒದಗಿಸುವ ಮೂಲಕ ನಾಟಿ ಮತ್ತು ಆಯುರ್ವೇದ ವೈದ್ಯ ಪದ್ದತಿಯು ಪ್ರಾಚೀನ ಕಾಲದಿಂದಲೂ ಪ್ರಾಮುಖ್ಯತೆಯನ್ನು ಪಡೆದಿದೆ. ಜಿಲ್ಲೆಯ ಬಹುಪಾಲು ಜನರು, ರಾಜ್ಯ ಮತ್ತು ಇತರ ರಾಜ್ಯಗಳ ಜನರಿಗೆ ತಮ್ಮ ಸೇವೆಗಳನ್ನು

ಒದಗಿಸುತ್ತಿವೆ. ಅಲೋಪತಿ ವೈದ್ಯ ಕೇಂದ್ರಗಳು ಮತ್ತು ಮಾನಸಿಕ ಆರೋಗ್ಯ ಕೇಂದ್ರಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ವ್ಯವಸ್ಥಿತವಾಗಿ ಅಭಿವೃದ್ಧಿಯಾಗಿದ್ದು ಪ್ರವಾಸೋದ್ಯಮ ಬೆಳವಣಿಗೆಯೊಂದಿಗೆ ಜಿಲ್ಲೆಯಲ್ಲಿ ಆರ್ಥಿಕ ಪ್ರಗತಿಗೆ ಕಾರಣವಾಗಿದೆ.

ಸ್ಥಳೀಯರಿಗೆ ನೇರ ಮತ್ತು ಪರೋಕ್ಷವಾಗಿ ಉದ್ಯೋಗ ಮತ್ತು ಆದಾಯ ನೀಡುವುದರೊಂದಿಗೆ ಇನ್ನಿತರ ಹಲವು ಕ್ಷೇತ್ರಗಳ ಪ್ರಗತಿಗೆ ಪೂರಕವಾಗಿವೆ. ಜಿಲ್ಲೆಯ ಮೂಲಭೂತ ಸೌಕರ್ಯಗಳ ಅಭಿವೃದ್ಧಿಗೂ ಮಹತ್ವದ ಕೊಡುಗೆಯನ್ನು ನೀಡುತ್ತಿದೆ. ಪಟ್ಟಣಗಳು ಮತ್ತು ಆಹಾರ ಪೂರೈಸುವ ಹೋಟೆಲ್ ಉದ್ಯಮಗಳು ಬೆಳೆಯಲು ಪೂರಕವಾದ ವಾತಾವರಣವನ್ನು ನಿರ್ಮಾಣ ಮಾಡಿವೆ. ಹೀಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಶೈಕ್ಷಣಿಕ ಮತ್ತು ಆರೋಗ್ಯ ಪ್ರವಾಸೋದ್ಯಮ ಕ್ಷೇತ್ರಕ್ಕೆ ಉತ್ತಮವಾದ ಅವಕಾಶಗಳನ್ನು ಹೊಂದಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿನ ಹಲವು ಕಾಲೇಜುಗಳು ಉತ್ತಮವಾದ ಮತ್ತು ಗುಣಾತ್ಮಕ ಶಿಕ್ಷಣವನ್ನು ನೀಡುವ ಮೂಲಕ ವಿವಿಧ ಪ್ರದೇಶಗಳಿಂದ ವಿದ್ಯಾರ್ಥಿಗಳನ್ನು ಆಕರ್ಷಣೆ ಮಾಡುವಲ್ಲಿ ಯಶಸ್ವಿಯಾಗಿದೆ. ತಮ್ಮ ವಿರಾಮದ ಮತ್ತು ಬಿಡುವಿನ ವೇಳೆ ಅಥವಾ ಸಮಯದಲ್ಲಿ ತಮ್ಮ ಕುಟುಂಬ ಸದಸ್ಯರೊಂದಿಗೆ ಜಿಲ್ಲೆಯ ಹಲವು ಧಾರ್ಮಿಕ ಮತ್ತು ಐತಿಹಾಸಿಕ ತಾಣಗಳಿಗೂ ಸಹ ಭೇಟಿ ನೀಡುತ್ತಿದ್ದಾರೆ. ಈ ಅವಧಿಯಲ್ಲಿ ನಡೆಸುವ ಆರ್ಥಿಕ ಚಟುವಟಿಕೆಗಳು ಸ್ಥಳೀಯ ಆರ್ಥಿಕ ಪ್ರಗತಿಗೆ ಸಹಾಯಕವಾಗುತ್ತಿವೆ.

ಶಿಕ್ಷಣ ಪಡೆಯಲು ಪ್ರವಾಸವನ್ನು ಕೈಗೊಳ್ಳುವ ವಿದ್ಯಾರ್ಥಿ ಸಮುದಾಯಗಳು ತಮ್ಮ ವಿದ್ಯಾಭ್ಯಾಸದ ಅವಧಿಯಲ್ಲಿ ಹಲವು ರೀತಿಯ ಆರ್ಥಿಕ ಚಟುವಟಿಕೆಗಳನ್ನು ನಡೆಸುತ್ತಾರೆ. ಆಹಾರ ಸೇವನೆ, ವಿರಾಮ ಕಳೆಯುವುದು, ಬಟ್ಟೆಗಳನ್ನು ಖರೀದಿಸುವುದು, ಪಾನೀಯಗಳ ಸೇವನೆ, ವಾಹನಗಳ ಬಳಕೆ, ಮನರಂಜನೆ ನೀಡುವ ಕೇಂದ್ರಗಳಿಗೆ ಪ್ರಯಾಣ ಮಾಡುವುದು ಹೀಗೆ ಹಲವು ನೇರವಾಗಿ ಮತ್ತು ಇನ್ನಿತರ ಪರೋಕ್ಷ ಉದ್ಯಮಗಳ ಬೆಳವಣಿಗೆಗೆ ಮತ್ತು ಅಭಿವೃದ್ಧಿಗೆ ಪ್ರೇರಣೆಯನ್ನು ನೀಡುತ್ತಿರುವುದು ಕಂಡುಬರುತ್ತದೆ.

* * * * * * * * * * * * * * * *

## **ಕೊನೆಯ ಟಿಪ್ಪಣಿ**


1. http://www.grdc.org/ven/eco-tour/etour-define date:27/08/2020. page 01
2. www.incredible india.org
3. Orams 1995 M.B.,*Towards a more desirable from of ecotourism*:*Tourism management* 6(1) Oxford pargremon-Elsevievr science-1995 Page 03-08
4. ಮೂರ್ತೀಶ್ವರಯ್ಯ 2015 *ದೇವನಹಳ್ಳಿ ತಾಲ್ಲೂಕು ಪರಿಚಯ*, ಶಾರದ ಪ್ರಕಾಶನ, ಬೆಂಗಳೂರು.

   ಪು.ಸಂ.–07
5. ಚಂದ್ರಶೇಖರ್ 2018 *ಕರ್ನಾಟಕ ಕೈಪಿಡಿ*, ಕರ್ನಾಟಕ ಸರ್ಕಾರ, ಬೆಂಗಳೂರು.

   ಪು.ಸಂ.– 32–33
6. *ಬೆಂಗಳೂರು ಗ್ರಾಮಾಂತರ ಜಿಲ್ಲೆ ಅಂಕಿ ಅಂಶಗಳ ನೋಟ* 2017–18. ಪು.ಸಂ.–57–58
7. ಸಂದರ್ಶನ – ಹೆಸರು: ಗಂಗರಾಜು, ವಯಸ್ಸು: 48
8. ಸಂದರ್ಶನ – ಹೆಸರು: ನರಸಿಂಹಮೂರ್ತಿ, ವಯಸ್ಸು: 65
9. ಸಂದರ್ಶನ – ಹೆಸರು: ತಿಮ್ಮರಾಯಪ್ಪ, ವಯಸ್ಸು: 58
10. ಸಂದರ್ಶನ – ಹೆಸರು: ಕುಮಾರಸ್ವಾಮಿ (ಪ್ರಾಂಶುಪಾಲರು) ವಯಸ್ಸು: 56
11. *Ustrated Oxford Dictionary*, Darling Kindersly Limited and Oxford University press, London, 1998, P. 218.
12. Satish Kumar and Sajjad Ahmad meaning *Aims and Process of Education IGNOU*, New Delhi P. 02.
13. Global Invester meet 2010 – *Govt. of Karnataka*, Dept. of Industries and Commerce. P. 01 – 05
14. *ಬೆಂಗಳೂರು ಗ್ರಾಮಾಂತರ ಜಿಲ್ಲೆ ಅಂಕಿ ಅಂಶಗಳ ನೋಟ* 2017–18. ಪು.ಸಂ.– 85
15. ಅದೇ ಪು.ಸಂ.– 82

16. ಸಂದರ್ಶನ – ಹೆಸರು: ಮಂಜುನಾಥ ಗೌಡ. ವಯಸ್ಸು: 55

17. *ಬೆಂಗಳೂರು ಗ್ರಾಮಾಂತರ ಜಿಲ್ಲೆ ಅಂಕಿ ಅಂಶಗಳ ನೋಟ* 2017–18. ಪು.ಸಂ.– 85

18. ಅದೇ ಪು.ಸಂ.– 93

19. ಅದೇ ಪು.ಸಂ.– 94

20. ಅದೇ ಪು.ಸಂ.– 97

21. ಅದೇ ಪು.ಸಂ.– 97–98

22. ಅದೇ ಪು.ಸಂ.– 95–96

23. ಅದೇ ಪು.ಸಂ.– 97

24. ಸಂದರ್ಶನ – ಹೆಸರು: ಲೋಕೇಶಪ್ಪ. ವಯಸ್ಸು: 68

# ಅಧ್ಯಾಯ – 6

## ಉಪಸಂಹಾರ

ಪ್ರವಾಸ ಮತ್ತು ಪ್ರವಾಸೋದ್ಯಮವು ಪ್ರಗತಿಗೆ ಉತ್ತಮವಾದ ವಾಹಕಗಳಾಗಿವೆ. ಒಂದು ರೀತಿಯಲ್ಲಿ ಇವು ಎರಡು ಕಡೆ ಹರಿತವಾದ ಆಯುಧವಿದ್ದಂತೆ. ಇವುಗಳ ಬಳಕೆಯಲ್ಲಿ ಜಾಗರೂಕತೆ ಮತ್ತು ಜಾಗೃತಿ ಅವಶ್ಯಕವಿರುತ್ತದೆ. ಪ್ರವಾಸೋದ್ಯಮವು ಎಷ್ಟು ಅಪ್ಯಾಯಮಾನವಾಗಿರುತ್ತದೆಯೊ ಅಷ್ಟೇ ಅಪಾಯಕಾರಿಯಾಗಿಯು ಇರುತ್ತದೆ. ಎಚ್ಚರಿಕೆಯಿಂದ ಬಳಸಿದರೆ ಅದರ ಪ್ರಯೋಜನಗಳನ್ನು ಮತ್ತು ಉತ್ತಮ ಫಲಿತಾಂಶಗಳನ್ನು ಪಡೆಯಬಹುದಾಗಿದೆ. ಪ್ರವಾಸವು ಮಾನವನ ಶ್ರೇಯಸ್ಸಿಗೆ ಸಹಕಾರಿಯಾಗಿರುತ್ತದೆ. ಪ್ರವಾಸೋದ್ಯಮದ ಉತ್ತಮ ಫಲಿತಗಳು ಮಾನವನ ಏಳಿಗೆಯಲ್ಲಿ ಸಹಕಾರಿಯಾಗಿವೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯು ವಿಭಿನ್ನ ಬಗೆಯ ಪ್ರವಾಸೋದ್ಯಮಗಳಿಂದ ಉತ್ತಮವಾದ ಪ್ರಯೋಜನಗಳನ್ನು ಪಡೆಯುತ್ತಿದೆ. ಅದರೊಂದಿಗೆ ಪ್ರವಾಸೋದ್ಯಮವು ನಕರಾತ್ಮಕ ಫಲಿತಾಂಶಗಳನ್ನು ಸಹ ನೀಡಿರುವುದು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಮಾನವನ ಒಟ್ಟಾರೆ ಜೀವನ ಪ್ರಕ್ರಿಯೆ ಮೇಲೆ ತನ್ನ ಪ್ರಭಾವ ಬೀರಿರುವುದನ್ನು ಕಾಣಬಹುದಾಗಿದೆ.

ಅಧಿಕ ಸಂಖ್ಯೆಯಲ್ಲಿ ಪ್ರವಾಸಿಗರ ಆಗಮನದಿಂದ ಸಮಾಜ, ಸಂಸ್ಕೃತಿ, ಆಚಾರಗಳು, ಪದ್ದತಿಗಳು, ಸಂಪ್ರದಾಯಗಳು, ವೇಷಭೂಷಣ, ಆಹಾರ ಸೇವನೆ, ನಡವಳಿಕೆ ಮತ್ತು ಇನ್ನಿತರ ಅಂಶಗಳ ಮೇಲೆ ತನ್ನ ಪ್ರಭಾವವನ್ನು ಬೀರಿದೆ. ಮುಖ್ಯವಾಗಿ ಮತ್ತು ಪ್ರಧಾನವಾಗಿ ಕಾಣಬರುವಂತಹ ನಕರಾತ್ಮಕ ಪರಿಣಾಮದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಅರಣ್ಯ ಮತ್ತು ಪರಿಸರದಲ್ಲಿ ವ್ಯತ್ಯಾಸಗಳನ್ನು ಕಾಣಬಹುದಾಗಿದೆ. ಹವ್ಯಾಸಿ ಭೇಟಿಯಿಂದಾಗಿ ವಿರಳವಾದ ಪ್ರಾಣಿ ಸಂಪತ್ತನ್ನು ಕಳೆದುಕೊಳ್ಳುತ್ತಿದೆ. ಸಮಾಜ ಮತ್ತು ಸಂಸ್ಕೃತಿಯ ವಿಚಾರಕ್ಕೆ ಬಂದರೆ, ಬೇರೆ–ಬೇರೆ ಪ್ರದೇಶಗಳಿಂದ ಜಿಲ್ಲೆಗೆ ಆಗಮಿಸುವಂತಹ ಪ್ರವಾಸಿಗರ ವೇಷಭೂಷಣ ಮತ್ತು ಅವರ ಆಹಾರ ಪದ್ದತಿಗಳು ಸ್ಥಳೀಯವಾಗಿ ಹೆಚ್ಚು ಬದಲಾವಣೆಗೆ ಒಳಪಟ್ಟಿರುವುದು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಇಲ್ಲಿನ ಸಂಪ್ರದಾಯಿಕವಾದ ಆಹಾರ ಪದ್ಧತಿಗಳು ತನ್ನ ಮಹತ್ವವನ್ನು ಕಳೆದುಕೊಳ್ಳುತ್ತಿರುವುದು ಒಂದೆಡೆಯಾದರೆ, ಪಾಶ್ಚಿಮಾತ್ಯ ಅಥವಾ ಫಾಸ್ಟ್ ಫುಡ್ ಪರಿಕಲ್ಪನೆಗಳು ಬಹು ದೊಡ್ಡ ಪ್ರಮಾಣದಲ್ಲಿ ಆರೋಗ್ಯದ ಮೇಲೆ ಕೆಟ್ಟ ಪರಿಣಾಮಗಳನ್ನು ಉಂಟುಮಾಡುತ್ತಿರುವುದು ಹೆಚ್ಚಾಗಿ ಕಂಡುಬರುತ್ತದೆ.

ಪ್ರವಾಸಿಗರ ಮದ್ಯಪಾನ ಸೇವನೆಯ ಚಟವು ಅಥವಾ ಅವರಿಗೆ ನಾವು ನೀಡುವ ಆತಿಥ್ಯವು ಸ್ಥಳೀಯರು ನೆಮ್ಮದಿ ನಡೆಸುತ್ತಿದ್ದ ಜೀವನಕ್ಕೆ ಅಪಾಯವನ್ನು ತಂದೊಡ್ಡಿರುವುದು ಗೌಪ್ಯವಾಗಿಯೇನೊ ಉಳಿದುಕೊಂಡಿಲ್ಲ. ವೇಷಭೂಷಣ ವಿಚಾರಕ್ಕೆ ಸಂಬಂಧಿಸಿದಂತೆ ಪ್ರಾದೇಶಿಕ ವಸ್ತ್ರ ತಮ್ಮ ಮಹತ್ವವನ್ನು ಕಳೆದುಕೊಂಡು ಅರೆಬರೆ ಸಂಸ್ಕೃತಿಯ ಬಟ್ಟೆಗಳನ್ನು ಧರಿಸುವಂತಹ ಚಾಳಿಯಾಗಿ ಬೆಳವಣಿಗೆಯಾಗಿರುವುದರ ಹಿಂದೆ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಪ್ರವಾಸೋದ್ಯಮ ಕಾರಣವಾಗಿರುವುದು ಕಂಡುಬರುತ್ತದೆ. ಪ್ರವಾಸಿಗರಿಗೆ ಹಲವು ಸೇವೆಗಳನ್ನು ನೀಡಿರುವುದರ ಜೊತೆಗೆ ಆದಾಯವನ್ನು ಗಳಿಸುವಂತಹ ಅಭಿಲಾಷೆಯು ಇಲ್ಲಿನ ಜನರಲ್ಲಿ ಸಹಜವಾಗಿ ಉಂಟಾಗುತ್ತದೆ. ಇದು ಇಲ್ಲಿಗೆ ಕೊನೆಯಾಗದೆ, ದುರಾಸೆ ಮತ್ತು ಮೋಸ ಹಾಗೂ ಇತರ ಬಗೆಯ ಅನಾಚಾರಗಳನ್ನು ಉಂಟು ಮಾಡಿದೆ.

ಈ ನಿಟ್ಟಿನಲ್ಲಿ ಮುಖ್ಯವಾಗಿ ಯುವ ಜನತೆಯ ಮೇಲೆ ಹೆಚ್ಚು ಪ್ರಭಾವ ಬೀರುತ್ತಿರುವುದು ಮತ್ತು ಅದರ ಪ್ರಭಾವಕ್ಕೆ ಒಳಗಾಗುತ್ತಿರುವುದನ್ನು ಕಾಣಬಹುದಾಗಿದೆ. ಕೃಷಿ ಪ್ರಧಾನವಾಗಿದ್ದ ಬೆಂಗಳೂರು ಜಿಲ್ಲೆಯು ಆರ್ಥಿಕ ಪ್ರಗತಿಯು ನಡೆಯುತ್ತದೆ. ಬೆಂಗಳೂರು ನಗರದ ಜನರು ಗ್ರಾಮಾಂತರ ಜಿಲ್ಲೆಯ ಸುತ್ತಮುತ್ತಲಿನ ಪ್ರದೇಶದ ಕೃಷಿ ಜಮೀನುಗಳನ್ನು ಖರೀದಿಸಿ, ಇತರ ಜನರಿಗೆ ವಾಣಿಜ್ಯ ಮತ್ತು ವಸತಿ ಯೋಜನೆಗಳಯನ್ನು ನಡೆಸಲು ನೀಡಿರುವುದೇ ಇದಕ್ಕೆ ಸಾಕ್ಷಿ ಎನ್ನಬಹುದು. ಜಿಲ್ಲೆಯಲ್ಲಿ ಮೂರು ಪ್ರಮುಖವಾದ ರಾಷ್ಟ್ರೀಯ ಹೆದ್ದಾರಿಗಳಿದ್ದು, ಇವು ಹಾದು ಹೋಗುವಂತಹ ಸುತ್ತಲಿನ ಪ್ರದೇಶದಲ್ಲಿ ಭೂಮಿಯ ಬೆಲೆಯು ಗಗನಕ್ಕೇರುವುದನ್ನು ನೋಡಿದರೆ ಭೂಮಿಯ ದುರುಪಯೋಗ ಅರ್ಥವಾಗುತ್ತದೆ.

ಪ್ರವಾಸೋದ್ಯಮವು ಹೇಗೆ ಉತ್ತಮ ಸಂಸ್ಕೃತಿಯನ್ನು ಪರಿಚಯ ಮಾಡಿಕೊಟ್ಟು, ಸಾಮಾಜಿಕ ಸಾಮರಸ್ಯವನ್ನು ಬೆಳೆಸುತ್ತಿದೆಯೋ ಹಾಗೇಯೇ ಪರಂಪರಾಗತವಾದ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಮಾನವೀಯ ಮೌಲ್ಯಗಳ ಪತನಕ್ಕೆ ಕಾರಣವಾಗಿದೆ. ಎಲ್ಲವನ್ನು ವ್ಯಾವಹಾರಿಕ ದೃಷ್ಟಿಕೋನದಿಂದ ನೋಡುವಂತಹ ಭಾವನೆಗೆ ಇದಕ್ಕೆ ಸಾಕ್ಷಿ. ಉತ್ತಮವಾದ ಮಾನವೀಯ ಸಂಬಂಧಗಳು ಮತ್ತು ಮೌಲ್ಯಗಳು ತನ್ನ ಬೇರುಗಳನ್ನು ಕಳಚಿಕೊಳ್ಳುತ್ತಿರುವುದು ಕಂಡುಬರುತ್ತದೆ. ಕೊಳ್ಳು ಬಾಕು ಮತ್ತು ತಿನ್ನು ಬಾಕು ಸಂಸ್ಕೃತಿಯು ಹೆಚ್ಚಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನಗರಗಳೊಂದಿಗೆ ಹಳ್ಳಿ ಸಮುದಾಯಗಳಲ್ಲಿ ಬೆಳೆದಿರುವುದಕ್ಕೆ ಪ್ರವಾಸೋದ್ಯಮವು ಸಹ ಒಂದು ಕಾರಣವೆನ್ನಬಹುದು ಸ್ಥಳೀಯ ಉತ್ತಮ ಪರಿಸರ, ಪಾರಂಪರಿಕ ಕಟ್ಟಡಗಳ ನಾಶಕ್ಕೂ ತನ್ನ ಕೊಡುಗೆಯನ್ನು ನೀಡುತ್ತಿದೆ. ಪ್ರವಾಸಿಗರು ಇಂತಹ

ಕಾರಣಗಳಿಗೆ ಭೇಟಿ ನೀಡಿದ ಸಮಯದಲ್ಲಿ ಕಟ್ಟಡಗಳ ಮೇಲೆ ತಮ್ಮ ಸವಿ ನೆನಪನ್ನು ದಾಖಲಿಸುವಂತಹ/ಕೆತ್ತನೆ ಮಾಡುವಂತಹ ಮಹಾದಾಸೆಯಲ್ಲಿ ಅಲ್ಲಿನ ಪರಿಸರವನ್ನು ಮತ್ತು ಕಟ್ಟಡಗಳನ್ನು ನಾಶದ ಹಾದಿಯಲ್ಲಿ ದೂಡುತ್ತಿರುವುದು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಐತಿಹಾಸಿಕ ಮತ್ತು ಪಾರಂಪರಿಕ ತಾಣಗಳಲ್ಲಿ ಕಲ್ಲಿನಿಂದ ಉತ್ತಮವಾಗಿರುವ ಕಟ್ಟಡಗಳ ಮೇಲೆ ತಮ್ಮ ಹೆಸರುಗಳನ್ನು ಮತ್ತು ಸ್ಥಳಗಳನ್ನು ಕೆತ್ತನೆ ಮಾಡುವುದರಿಂದ ಕಟ್ಟಡಗಳ ಅಂದವು ಕೆಡುವುದಲ್ಲದೇ ನಾಶಕ್ಕೂ ಕಾರಣವಾಗಿದೆ. ಶಿವಗಂಗೆ, ನಿಜಗಲ್ಲು ಬೆಟ್ಟ, ಹೆಗ್ಗುಂದದ ಬೆಟ್ಟಗಳು, ದೇವಾಲಯಗಳು ಈ ರೀತಿಯ ವರ್ತನೆಗೆ ಒಳಪಟ್ಟಿರುವುದು ಅಧ್ಯಯನ ಕಾಲದಲ್ಲಿ ತಿಳಿದುಬಂದಿದೆ. ಜೀವನ ಶೈಲಿ ಮತ್ತು ನೈತಿಕ ಮೌಲ್ಯಗಳ ಅಧಃಪತನದಿಂದಾಗಿ ಲಜ್ಜೆ ರಹಿತವಾದ ಜೀವನ, ವೇಶ್ಯವಾಟಿಕೆ, ಮಧ್ಯಸೇವನೆ, ವಿವಿಧ ಬಗೆಯ ಮಾದಕ ವಸ್ತುಗಳ ಸೇವನೆಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಹರಡಿಕೊಂಡು, ತನ್ನ ಹಿಂದಿನ ಭವ್ಯ ಪರಂಪರೆಯನ್ನು ಮತ್ತು ಉನ್ನತವಾದ ಸಮಾಜದ ಬೇರುಗಳನ್ನು ಅಲುಗಾಡಿಸುತ್ತಿವೆ. ಇಂತಹ ಚಟಗಳಿಗೆ ವಿಧ್ಯಾರ್ಥಿಗಳು, ಪ್ರಾಯದ ಮತ್ತು ಮಧ್ಯ ವಯಸ್ಕ ಜನರು ಹೆಚ್ಚಾಗಿ ಪ್ರಭಾವಿತರಾಗಿರುವುದು ಕಂಡುಬರುತ್ತದೆ.

ಪ್ರವಾಸದಿಂದಾಗಿ ಜಿಲ್ಲೆಯ ಪ್ರಕೃತಿಯ ಪರಿಸರದ ಮೇಲೂ ಅಡ್ಡ ಪರಿಣಾಮಗಳನ್ನು ಉಂಟುಮಾಡಿದೆ. ದಟ್ಟವಾದ ಕಾಡುಗಳು, ಆರ್ಥಿಕ ಮತ್ತು ಸಾಮಾಜಿಕ ಬದಲಾವಣೆಗಳಿಂದಾಗಿ ಮಾನವನ ದುರಾಸೆಗೆ ಬಲಿಯಾಗಿ, ಮಳೆ ಮತ್ತು ಭೂತಾಪಮಾನ ಏರಿಕೆ ಮತ್ತು ಅಂತರ್ಜಲ ಮಟ್ಟ ಪಾತಳಕ್ಕೆ ಹೋಗಲು ಪ್ರವಾಸೋದ್ಯಮ ಒಂದಲ್ಲ ಒಂದು ರೀತಿಯಲ್ಲಿ ಕಾರಣವೆನ್ನಬಹುದು. ಪ್ರವಾಸಿಗರು ತಮ್ಮ ಭೇಟಿಯ ಕಾಲದಲ್ಲಿ ಬೇಟೆ, ವಿಷಯುಕ್ತವಾದ ಪ್ಲಾಸ್ಟಿಕ್ ಚೀಲಗಳನ್ನು ಮತ್ತು ಸೀಸಗಳನ್ನು ಎಲ್ಲೆಂದರಲ್ಲಿ ಬಿಸಾಡುವುದು, ಗಾಜಿನ ಸೀಸಗಳನ್ನು ಒಡೆಯುವುದು, ಪೊಟ್ಟಣಗಳನ್ನು ಬೀಸಾಡುವುದು, ಗಿಡಗಳನ್ನು ಮುರಿಯುವುದು, ಈ ರೀತಿಯಲ್ಲಿ ಸಸ್ಯಗಳನ್ನು ಸುತ್ತಲಿನ ಪರಿಸರವನ್ನು ಕಲುಷಿತಗೊಳಿಸುತಇರುವುದನ್ನು ಕಾಣಬಹುದಾಗಿದೆ. ಇಂತಹ ಸನ್ನಿವೇಶವು ದೇವಾಲಯಗಳು, ಬೆಟ್ಟಗಳು ಮತ್ತು ಇತರ ಪ್ರಾಕೃತಿಕ ತಾಣಗಳಲ್ಲಿ ಮುಖ್ಯವಾಗಿ ಕಂಡುಬರುತ್ತದೆ. ಇಂತಹ ಸನ್ನಿವೇಶದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪ್ರವಾಸೋದ್ಯಮದ ಬೆಳವಣಿಗೆಯ ಸಮತೋಲನ ರೀತಿಯಲ್ಲಿ ಬೆಳೆಯುವುದರ ಜೊತೆ ಜೊತೆಗೆ ತನ್ನ ಹಿಂದಿನ ಪರಂಪರೆ, ಸಂಸ್ಕೃತಿ, ಸಂಪ್ರದಾಯಗಳನ್ನು, ಕಟ್ಟಡಗಳನ್ನು ಉಳಿಸಿ, ಪ್ರವಾಸೋದ್ಯಮವನ್ನು ಬೆಳೆಸುವ ಅನಿವಾರ್ಯತೆ ಇದೆ.

ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಅಭಿವೃದ್ಧಿ ನಿಗಮವು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಶಿವಗಂಗೆ ಬೆಟ್ಟ, ಸಿದ್ದರ ಬೆಟ್ಟ, ಘಾಟಿಸುಬ್ರಮ್ಮಣ್ಯ, ದೇವನಹಳ್ಳಿ, ಹೆಗ್ಗುಂದ, ಮಧುರೆ ತಾಣಗಳಿಗೆ ಮಾತ್ರ ತನ್ನ ಪ್ಯಾಕೇಜ್ ಟೂರ್ ಗಳನ್ನು ಆಯೋಜಿಸುತ್ತಿದೆ. ಜಿಲ್ಲೆಯಲ್ಲಿ 'ವಾಲ್ ಇನ್ ಟೂರಿಸಂ' (ಸ್ವಪ್ರೇರಿತ ಪ್ರವಾಸೋದ್ಯಮ) ಎಂಬ ಪರಿಕಲ್ಪನೆಯು ಅಸ್ಥಿತ್ವದಲ್ಲಿರುವುದು ಕಂಡು ಬರುತ್ತದೆ. ಇದರೊಂದಿಗೆ ಇತರ ಹಲವು ಪ್ರವಾಸಿ ತಾಣಗಳಿದ್ದರೂ ಇಂತಹ ತಾಣಗಳಿಗೆ ಹೆಚ್ಚಿನ ಪ್ರವಾಸಿಗರನ್ನು ಸೆಳೆಯುವಲ್ಲಿ ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಅಭಿವೃದ್ದಿ ನಿಗಮವು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿನ ಪಾರಂಪರಿಕ ತಾಣಗಳಿಗೆ ತನ್ನ ಪ್ಯಾಕೇಜ್ ಟೂರ್‌ಗಳನ್ನು ಹಮ್ಮಿಕೊಳ್ಳಬೇಕೆಂಬ ಅಂಶವನ್ನು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ. ಕಾರಣ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಅಧಿಕ ಸಂಖ್ಯೆಯಲ್ಲಿ ಸ್ವಯಂ ಪ್ರೇರಣೇಯ ಪ್ರವಾಸಿಗರನ್ನು ಕಾಣಬಹುದಾಗಿದೆ.

ಇದರೊಂದಿಗೆ ಹೆಚ್ಚಿನ ಪ್ರವಾಸಿನೆಲೆಗಳಿಗೆ ಪ್ರವಾಸಿಜಾಲಗಳನ್ನು ವಿಸ್ತರಿಸಿ, ಜಿಲ್ಲಾ ಮಟ್ಟದಲ್ಲಿರುವ ಜಿಲ್ಲಾಧೀಕಾರಿಗಳ ಅಧ್ಯಕ್ಷತೆಯ ಜಿಲ್ಲಾ ಪ್ರವಾಸೋದ್ಯಮ ಅಭಿವೃದ್ಧಿ ಮಂಡಳಿಯು ಜಿಲ್ಲೆಯಲ್ಲಿರುವ ಹೆಚ್ಚಿನ ಸಂಖ್ಯೆಯ ಪ್ರವಾಸಿ ನೆಲೆಗಳನ್ನು ಗುರ್ತಿಸಿ, ಅಭಿವೃದ್ಧಿ ಪಡಿಸಬೇಕಾಗಿದೆ. ಜಿಲ್ಲೆಯಲ್ಲಿರುವ ಜಿಲ್ಲಾ ಮಟ್ಟದ ಪ್ರವಾಸೋದ್ಯಮ ಇಲಾಖೆಯ ಘಟಕದ ಅಧಿಕಾರಿಗಳ ಸಂಖ್ಯೆಯನ್ನು ಹೆಚ್ಚಿಸಿ, ಈಗಿರುವ ಪ್ರವಾಸಿ ತಾಣಗಳ ಜೊತೆಗೆ ಇತರ ಪ್ರವಾಸಿ ತಾಣಗಳಲ್ಲಿ ಮತ್ತು ಮುಖ್ಯವಾದ ಕೂಡು ರಸ್ತೆಗಳಲ್ಲಿ ಪ್ರವಾಸಿ ಮಾಹಿತಿ ಫಲಕಗಳನ್ನು ಮತ್ತು ಪ್ರಮುಖ ನಗರಗಳಲ್ಲಿ ಕಿರು ಪುಸ್ತಕಗಳನ್ನು ಮತ್ತು ಹೊತ್ತಿಗೆಗಳನ್ನು ಹಂಚುವುದು, ವಿಚಾರ ಸಂಕಿರಣಗಳು, ಪ್ರದರ್ಶನಗಳು ಮತ್ತು ಉತ್ಸವಗಳನ್ನು ನಡೆಸುವುದರ ಮೂಲಕ ಜಿಲ್ಲೆಗೆ ಹೆಚ್ಚಿನ ಸಂಖ್ಯೆಯ ಪ್ರವಾಸಿಗರನ್ನು ಸೆಳೆಯಬಹುದಾಗಿದೆ. ಇದರ ಮುಖೇನ ಜಿಲ್ಲೆಯ ಎಲ್ಲಾ ಬಗೆಯ ತಾಣಗಳನ್ನು ಸಂರಕ್ಷಣೆಯ ಜೊತೆಗೆ ಸುಸ್ಥಿರ ಪ್ರವಾಸೋದ್ಯಮವನ್ನು ಬೆಳೆಸಬಹುದಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಜಾಗತಿಕ ಮಟ್ಟದಲ್ಲಿ ಪ್ರಖ್ಯಾತಿಯನ್ನು ಪಡೆದುಕೊಂಡು ಸಾಗುತ್ತಿವೆ. ಉತ್ತಮ ಅವಕಾಶಗಳನ್ನು ಕಲ್ಪಿಸಿಕೊಟ್ಟಿದೆ. ಜಿಲ್ಲೆಯ ಸಾಮರ್ಥ್ಯವನ್ನು ಭಾರತಕ್ಕೆ ಪರಿಚಯಿಸಿದ ಕೀರ್ತಿಗೆ ನೆಲಮಂಗಲ ತಾಲ್ಲೂಕಿನ ಶಿವಗಂಗೆ ಕ್ಷೇತ್ರದ ಪಾತ್ರವಾಗಿದೆ. ಇದು ಭಾರತವಲ್ಲದೇ ಭಾರತದ ಗಡಿಯನ್ನು ದಾಟಿ ಹಲವು ದೇಶಗಳಿಗೆ ಬೆಂಗಳೂರು ಗ್ರಾಮಾಂತರದ ಮಾವು ರಫ್ತು ಮಾಡಲ್ಪಡುತ್ತಿದ್ದು ವಿದೇಶಿ ವಿನಿಮಯದೊಂದಿಗೆ ಜಿಲ್ಲೆಯ ಮತ್ತು ರಾಜ್ಯದ ಪ್ರವಾಸೋದ್ಯಮವು ಈ ಕ್ಷೇತ್ರವು ವಿಸ್ತರಣೆಗೊಳ್ಳಲು ಮಹತ್ವದ ಕೊಡುಗೆಯನ್ನು ನೀಡಿರುವುದು ಉಲ್ಲೇಖಾರ್ಹವಾಗಿದೆ.

ನೂತನ ಶಿಲಾಯುಗದ ಸಂಸ್ಕೃತಿಯಿಂದ ಇಂದಿನವರೆಗೂ ಭವ್ಯ ಇತಿಹಾಸವನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಹೊಂದಿದೆ. ಇಂತಹ ಸಂಪನ್ನವಾದ ಚಾರಿತ್ರಿಕ ಮಹತ್ವವನ್ನು ಪಡೆದಿರುವ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪ್ರವಾಸೋದ್ಯಮಕ್ಕೆ ವಿಫುಲವಾದ ಅವಕಾಶಗಳನ್ನು ಹೊಂದಿದೆ ಎಂಬುದು ಊಹೆಯಾಗುವುದಿಲ್ಲ. ರಾಷ್ಟ್ರಮಟ್ಟದಲ್ಲಿ ಅತ್ಯಂತ ವಿಶಾಲವಾದ ಪ್ರದೇಶದಲ್ಲಿ ನೂತನ ಶಿಲಾಯುಗ ಸಂಸ್ಕೃತಿಗೆ ಸೇರಿದ ನೆಲಮಂಗಲ ಎಂಬ ನೆಲೆಯನ್ನು ಹೊಂದಿರುವುದು, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹೆಮ್ಮೆಯಾಗಿದೆ. ಪ್ರಾಚೀನ ಕಾಲದಿಂದಲೂ ಒಂದಲ್ಲ ಒಂದು ಬಗೆಯ ಪ್ರವಾಸವು ಜಿಲ್ಲೆಯಲ್ಲಿ ಕಂಡುಬರುತ್ತದೆ. ಇಲ್ಲಿನ ಶಿಲಾಯುಗ ಸಂಸ್ಕೃತಿಗೆ ಸೇರಿದ ನೆಲೆಗಳೇ ಈ ಅಂಶವನ್ನು ಪುಷ್ಟೀಕರಿಸುತ್ತವೆ. ನೊಳಂಬ ಮತ್ತು ಬಾಣರಿಂದ ಪ್ರಾರಂಭವಾದ ಐತಿಹಾಸಿಕ ಸಾಮ್ರಾಜ್ಯಗಳು ಸಹ ವಿಭಿನ್ನ ಬಗೆಯ ಪ್ರವಾಸಕ್ಕೆ ಅವಕಾಶವನ್ನು ಕಲ್ಪಿಸಿದವು. ನಂತರದಲ್ಲಿ ಆಡಳಿತ ನಡೆಸಿದ ಹಲವು ರಾಜಮನೆಗಳ ಕಾಲದಲ್ಲಿ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಪ್ರವಾಸವು ಹೆಚ್ಚು ಬೆಳವಣಿಗೆಯಾಗಿರುವುದು ಕಂಡು ಬರುತ್ತದೆ. ಇದರೊಂದಿಗೆ ಜಿಲ್ಲೆಯ ಹಲವು ನೆಲೆಗಳು ರಾಮಾಯಣ ಮತ್ತು ಮಾಹಾಭಾರತದ ಕಾಲಕ್ಕೆ ಸೇರಿದ್ದವೆಂದು ಐತಿಹ್ಯಗಳು ಸ್ಥಳೀಯವಾಗಿ ಹುಟ್ಟಿಕೊಂಡಿವೆ.

ಕಲೆ, ವಾಸ್ತುಶಿಲ್ಪ, ಸಾಹಿತ್ಯ, ಕ್ರೀಡೆ, ಸಂಗೀತ, ಸಮಾಜ, ಧರ್ಮಗಳು, ಸಂಸ್ಕೃತಿ, ಆಹಾರ ಪದ್ದತಿಗಳು, ವೇಷಭೂಷಣಗಳು, ಆಚಾರ-ವಿಚಾರಗಳು ಹೀಗೆ ವಿಶ್ಟವಾದ ಅಂಶಗಳನ್ನು ಜಿಲ್ಲೆಯು ಹೊಂದಿದೆ. ಅಲ್ಲದೇ ಸ್ವಾತಂತ್ರ ಸಂಗ್ರಾಮದಲ್ಲಿ ಪ್ರಾಣವನ್ನು ಅರ್ಪಿಸಿಕೊಂಡ ಮಹಾನ್ ನಾಯಕರನ್ನು ಸಹ ಜಿಲ್ಲೆಯು ನೀಡಿದೆ. ಅಲ್ಲದೇ ಶಿಕ್ಷಣ, ಆರೋಗ್ಯ, ನ್ಯಾಯಾಂಗ ಮತ್ತು ಆಡಳಿತ ಹಾಗೂ ಇತರ ಕ್ಷೇತ್ರಗಳಲ್ಲಿ ಜಿಲ್ಲೆಯು ಪ್ರಾಮುಖ್ಯತೆಯನ್ನು ಪಡೆದಿದೆ.

ಇಂತಹ ವೈಶಷ್ಟಪೂರ್ಣವಾದ ಹಿನ್ನಲೆಯನ್ನು ಮತ್ತು ಸಮಾಜವನ್ನು ಹಾಗೂ ಸಂಸ್ಕೃತಿಯನ್ನು ಹೊಂದಿರುವ ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಹಲವು ಐತಿಹಾಸಿಕ ಮತ್ತು ಧಾರ್ಮಿಕ ಹಾಗೂ ಸಾಂಸ್ಕೃತಿಕ ಸ್ಮಾರಕಗಳನ್ನು ಒಳಗೊಂಡಿದೆ. ಇಲ್ಲಿ ಆಡಳಿತ ನಡೆಸಿದ ರಾಜಮನೆತನಗಳ ಕಾಲಕ್ಕೆ ಸೇರಿದೆ ಸ್ಮಾರಕಗಳನ್ನು ಮತ್ತು ನೆಲೆಗಳನ್ನು ಭಾರತ ಸರ್ಕಾರ ಮತ್ತು ರಾಜ್ಯ ಸರ್ಕಾರವು ಗುರ್ತಿಸಿ ಮುಂದಿನ ಪೀಳಿಗೆಗೆ ಸಂರಕ್ಷಣೆ ಮಾಡುತ್ತಿರುವುದನ್ನು ನೋಡಿದರೆ ಬೆಂಗಳೂರು ಜಿಲ್ಲೆಯ ಪಾರಂಪರಿಕ ಮಹತ್ವವು ಅರಿವಾಗುತ್ತದೆ. ಜಿಲ್ಲೆಯಲ್ಲಿ ಎಂಟು ರಾಷ್ಟ್ರೀಯ ಮತ್ತು ಹದಿನಾರು ರಾಜ್ಯ ಸಂರಕ್ಷಿತ ಸ್ಮಾರಕಗಳಿದ್ದು ಜಿಲ್ಲೆಯ ಪ್ರವಾಸೋದ್ಯಮ ಕ್ಷೇತ್ರಕ್ಕೆ ಉತ್ತಮವಾದ ಕೊಡುಗೆಯನ್ನು ನೀಡಿದೆ.

ಇವುಗಳ ಕಲೆ, ವಾಸ್ತುಶಿಲ್ಪ, ಧಾರ್ಮಿಕ ಮಹತ್ವ, ತಂತ್ರಜ್ಞಾನ ಮತ್ತು ನಿರ್ಮಾಣದ ಕುಶಲತೆ ಮತ್ತು ಪರಂಪರೆಯನ್ನು ಬಿಂಬಿಸುತ್ತಿವೆ. ಪ್ರತಿಯೊಂದು ತಾಣವು ಪ್ರವಾಸಕ್ಕೆ ಯೋಗ್ಯವಾದ ತಾಣವಾಗಿದೆ. ಇಂತಹ ಮಹತ್ವವನ್ನು ಹೊಂದಿರುವ ಈ ಸ್ಮಾರಕಗಳು ಪ್ರತಿನಿತ್ಯ ನೂರಾರು ಸಂಖ್ಯೆಯ ಪ್ರವಾಸಿಗರನ್ನು ತನ್ನಡೆಗೆ ಆಕರ್ಷಣೆ ಮಾಡುತ್ತಿರುವುದು ಕಂಡು ಬರುತ್ತದೆ. ಈ ಮೂಲಕವಾಗಿ ಜಿಲ್ಲೆಯ ಈ ಸ್ಮಾರಕಗಳ ಬಗ್ಗೆ ಅರಿವು ಮೂಡಿಸಲು ಸಹ ಸಾಧ್ಯವಾಗಿದೆ. ಅಲ್ಲದೆ ಜಿಲ್ಲೆಯ ಭವ್ಯ ಪರಂಪರೆಯ ಪ್ರತೀಕವಾದ ಸ್ಮಾರಕಗಳು ಸಂರಕ್ಷಣೆಯೊಂದಿಗೆ ಪ್ರವಾಸೋದ್ಯಮ ಕ್ಷೇತ್ರವು ಬೆಳವಣಿಗೆಯಾಗಲು ಗುರುತರವಾದ ಕೊಡುಗೆಯನ್ನು ನೀಡುತ್ತಿವೆ ಎಂದು ಹೇಳಬಹುದು. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸ್ಮಾರಕಗಳಿಗೆ ಭೇಟಿ ನೀಡುವ ಪ್ರವಾಸಿಗರಿಂದ ನಮ್ಮ ಪರಂಪರೆಯನ್ನು ತಿಳಿಸುವುದರೊಂದಿಗೆ ಜಿಲ್ಲೆಯ ಇತರ ಕ್ಷೇತ್ರಗಳು ಅಭಿವೃದ್ಧಿಯಾಗಲು ಪ್ರೇರಕ ಶಕ್ತಿಯಾಗಿದೆ. ಈ ರೀತಿಯ ಸ್ಮಾರಕಗಳು ಮತ್ತು ನೆಲೆಗಳಲ್ಲಿ ಪ್ರವಾಸಿಗರಿಗೆ ಅನುಕೂಲವಾಗುವ ಹಲವು ಮೂಲಭೂತ ಸೌಕರ್ಯಗಳನ್ನು ಕಲ್ಪಿಸುವ ಅಗತ್ಯತೆ ಇದೆ.

## 6.1 ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ದೇವಾಲಯಗಳ ಕಲೆ ಮತ್ತು ಸಂಸ್ಕೃತಿಯ ವಿಶ್ಲೇಷಣೆ

ಅಲ್ಲದೆ ಶಿವಗಂಗೆಯ ಗವಿಗಂಗಾಧರೇಶ್ವರ ದೇವಾಲಯಕ್ಕೆ ಅಧಿಕ ಸಂಖ್ಯೆಯಲ್ಲಿ ಪ್ರವಾಸಿಗರು ಭೇಟಿ ನೀಡುತ್ತಿದ್ದು, ದೇವಾಲಯದಲ್ಲಿ ವರ್ಣರಂಜಿತ ಬೆಳಕಿನ ವ್ಯವಸ್ಥೆಯನ್ನು ಮಾಡಿದರೆ ಇನ್ನಷ್ಟು ಪ್ರವಾಸಿಗರನ್ನು ಆಕರ್ಷಣೆ ಮಾಡಬಹುದಾಗಿದೆ. ಇದರಿಂದಾಗಿ ಬಹುಮುಖಿ ಉದ್ಯಮಗಳು ಅಭಿವೃದ್ಧಿಯಾಗಲು ಸಹಾಯಕವಾಗುತ್ತದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಶಿವಗಂಗೆ, ಮಣ್ಣೆ, ಘಾಟಿಸುಬ್ರಹ್ಮಣ್ಯ, ಮಧುರೆ, ದೇವನಹಳ್ಳಿ, ಹೊಸಕೋಟೆ, ನೆಲಮಂಗಲ ಈ ನೆಲೆಗಳನ್ನು ರಾಜ್ಯ ಮತ್ತು ರಾಷ್ಟ್ರೀಯ ಸ್ಮಾರಕಗಳನ್ನು ಒಳಗೊಂಡಿದೆ ತಾಲ್ಲೂಕುವಾರು ಪ್ರವಾಸಿ ಜಾಲಗಳನ್ನು ನಿರ್ಮಾಣ ಮಾಡಲು ಅವಕಾಶವಿದೆ. ಇದರೊಂದಿಗೆ ಜಿಲ್ಲೆಯ ಇತರ ಕ್ಷೇತ್ರಗಳು ಬೆಳವಣಿಗೆಯಾಗುತ್ತವೆ. ಪ್ರವಾಸಿಗರು ಹೆಚ್ಚಿನ ಸಂಖ್ಯೆಯಲ್ಲಿ ಆಕರ್ಷಣೆ ಮಾಡಲು ಸಹಾಯಕವಾಗುತ್ತದೆ. ಇಂತಹ ಕೆಲವು ಅಭಿವೃದ್ಧಿ ಕಾರ್ಯಗಳನ್ನು ಹೆಚ್ಚು ಬೆಳವಣಿಗೆಯಾಗಲು ಸಾಧ್ಯವಾಗುತ್ತದೆ.

ಬೆಂಗಳೂರು ಜಿಲ್ಲೆಯ ರಾಜ್ಯದಲ್ಲೇ ವಿಶಿಷ್ಟ ಸಂಸ್ಕೃತಿಯನ್ನು ತನ್ನಲ್ಲಿ ಹೊಂದಿದೆ. ಇದಕ್ಕೆ ಇಲ್ಲಿ ಆಡಳಿತ ನಡೆಸಿದ ಹಲವು ರಾಜಮನೆತನಗಳು ಬಹುಮುಖ್ಯವಾದ ಕಾರಣಗಳಲ್ಲಿ ಒಂದಾಗಿದೆ.

ಇದಲ್ಲದೆ ಜಿಲ್ಲೆಯು ಪೂರ್ವ ಮತ್ತು ಉತ್ತರದಲ್ಲಿ ಅನುಕ್ರಮವಾಗಿ ತಮಿಳುನಾಡು ಮತ್ತು ಆಂಧ್ರಪ್ರದೇಶದ ರಾಜ್ಯಗಳೊಂದಿಗೆ ಗಡಿಯನ್ನು ಹಂಚಿಕೊಂಡಿರುವುದು ಮತ್ತೊಂದು ಪ್ರಧಾನವಾದ ಕಾರಣವಾಗಿದೆ. ಹೀಗೆ ಉತ್ತಮ ಭೌಗೋಳಿಕ ನೆಲೆಯನ್ನು ಹೊಂದಿರುವುದರ ಜೊತೆಗೆ ತೆಲಗು ಮತ್ತು ತಮಿಳು ಸಂಸ್ಕೃತಿಗಳೊಂದಿಗೆ ತನ್ನದೆ ಆದ ಮತ್ತು ವಿಶಿಷ್ಟವಾದ ಕನ್ನಡ ಸಂಸ್ಕೃತಿಗಳ ಸಮ್ಮಿಲನವನ್ನು ಮೈಗೂಡಿಸಿಕೊಂಡಿರುವುದು ಕಾಣಬಹುದಾಗಿದೆ.

ಬೃಹತ್ ಬಾಣರಿಂದ ಸ್ವಾತಂತ್ರ್ಯಗಳಿಸುವವರೆಗೂ ಹಲವು ಕಲೆ ಮತ್ತು ವಾಸ್ತುಶಿಲ್ಪ ಸ್ಮಾರಕಗಳನ್ನು ಮತ್ತು ನೆಲೆಗಳನ್ನು ಸ್ಥಾಪಿಸಿರುವುದು ಕಾಣಬಹುದಾಗಿದೆ. ಇವೆಲ್ಲವೂ ಮುಖ್ಯವಾಗಿ ಮತ್ತು ಪ್ರಧಾನವಾಗಿ ದ್ರಾವಿಡ ಶೈಲಿಯ ರಚನೆಗಳಾಗಿರುವುದು ಜಿಲ್ಲೆಯಲ್ಲಿ ಸಾಂಸ್ಕೃತಿಕ ಪ್ರವಾಸೋದ್ಯಮ ಕ್ಷೇತ್ರಕ್ಕೆ ಉತ್ಪನ್ನಗಳಾಗಿವೆ. ಪಾರಂಪರಿಕ ಕಲೆಗಳಲ್ಲಿ ಕರಗ, ಕೋಲಾಟ, ಡೊಳ್ಳು ಕುಣಿತ, ಫಂಡರೀ ಭಜನೆ, ತೋಳು ಬೊಮ್ಮಲಾಟ, ಗಂಗಮ್ಮ ನೃತ್ಯ, ಕಂಸಾಲೆ ಪದ ಇತರ ಬಗೆಯ ಕಲಾ ಪ್ರಕಾರಗಳನ್ನು ಹೊಂದಿದ್ದು ಉತ್ಕೃಷ್ಟವಾದ ಸಂಸ್ಕೃತಿಯನ್ನು ಹೊಂದಿರುವುದರ ಪ್ರತೀಕವಾಗಿದೆ.

ಈ ಬಗೆಯ ಕಲೆಯನ್ನು ಪ್ರೋತ್ಸಾಹಿಸುವ ಕಲಾ ಕೇಂದ್ರಗಳನ್ನು ಸಹ ಬೆಂಗಳೂರು ಗ್ರಾಮಾಂತರ ಜಿಲ್ಲೆ ಹೊಂದಿದೆ. ಕಲಾಕ್ಷೇತ್ರಗಳು ಮತ್ತು ಕಲಾಕೇಂದ್ರಗಳು ಜಿಲ್ಲೆಯಲ್ಲಿದ್ದೂ ಸಾಂಸ್ಕೃತಿಕ ಪ್ರವಾಸೋದ್ಯಮ ಬೆಳವಣಿಗೆಯಾಗಲು ಕಾರಣವಾಗಿವೆ. ಇಂತಹ ಕಲೆಯನ್ನು ರೂಡಿಸಿಕೊಂಡಿರುವ ನೂರಾರು ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಪ್ರಸಿದ್ಧಿಯನ್ನು ಪಡೆದಿರುವ ಕಲಾವಿದರನ್ನು ಸಹ ಜಿಲ್ಲೆ ಹೊಂದಿದೆ. ಇಂತಹ ಕಲಾವಿದರನ್ನು ಗುರ್ತಿಸಿ ಮತ್ತು ಅವರಿಗೆ ತಮ್ಮ ಕಲೆಯನ್ನು ವೃದ್ಧಿಸಿಕೊಳ್ಳುವ ನಿಟ್ಟಿನಲ್ಲಿ ಸರ್ಕಾರ ಮತ್ತು ಸಂಘ ಸಂಸ್ಥೆಗಳು ಸ್ಪಂದಿಸುವ ಅಗತ್ಯತೆ ಇದೆ. ಈ ಮುಖಾಂತರವಾಗಿ ಜಿಲ್ಲೆಯು ತನ್ನ ಸಂಸ್ಕೃತಿಯನ್ನು ಉಳಿಸಿಕೊಳ್ಳುವುದರೊಂದಿಗೆ ಪ್ರವಾಸೋದ್ಯಮವನ್ನು ಅಭಿವೃದ್ಧಿಪಡಿಸಬಹುದಾಗಿದೆ. ಒಂದು ಯೋಜನೆಯಿಂದ ಎರಡು ಪ್ರತಿಫಲಗಳನ್ನು ಪಡೆಯಬಹುದಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಸಾವಿರಕ್ಕೂ ಅಧಿಕ ಸಂಖ್ಯೆಯ ಶಿಲ್ಪಕಲಾ ಮತ್ತು ಕಲೆ ಮತ್ತು ವಾಸ್ತುಶಿಲ್ಪ ಕೇಂದ್ರಗಳಿದ್ದು ಪ್ರವಾಸಿ ಆಕರ್ಷಣೆಗೆ ಕಾರಣವಾಗಿದೆ. ಇಲ್ಲಿನ ವೈಶಷ್ಟವೆಂದರೆ ದ್ರಾವಿಡ ಶೈಲಿಯ, ವಿಜಯನಗರ, ಮರಾಠ, ಆದಿಲ್‌ಷಾಹಿ, ಮೊಘಲ್, ಇಂಡೋ–ಸಾರ್ಸನಿಕ್, ಇಂಡೋ–ಯೂರೋಪಿಯನ್ ಶೈಲಿಯ ಕಲೆ ಮತ್ತು ವಾಸ್ತುಶಿಲ್ಪ ಕೇಂದ್ರಗಳು ಅಧಿಕವಾಗಿವೆ. ಪ್ರಾಚೀನ ಕಾಲದಿಂದಲೂ ಜಗತ್ತಿನದಾದ್ಯಂತ ಹೆಚ್ಚು ಪ್ರವಾಸಿಗರನ್ನು

ಆಕರ್ಷಣೆ ಮಾಡುತ್ತಿರುವ ಕೇಂದ್ರಗಳೇ ಈ ಸಾಂಸ್ಕೃತಿಕ ಪ್ರವಾಸಿ ನೆಲೆಗಳೆಂಬುದು ವಿಶೇಷ. ನೆಲಮಂಗಲ, ಹೊಸಕೋಟೆ, ಶಿವಗಂಗೆ, ದೇವನಹಳ್ಳಿ, ಘಾಟಿಸುಬ್ರಹ್ಮಣ್ಯ ಇನ್ನಿತರ ನೂರಾರು ನೆಲೆಗಳಲ್ಲಿ ವಾಸ್ತುಶಿಲ್ಪ ತಾಣಗಳು ಪ್ರವಾಸಿಗರನ್ನು ಸೆಳೆಯುತ್ತಿದ್ದು ಜಿಲ್ಲೆಯ ಸಂಸ್ಕೃತಿಯನ್ನು ಉಳಿಸಿ ಬೆಳೆಸುವುದರೊಂದಿಗೆ ಆರ್ಥಿಕ ಪ್ರಗತಿಯನ್ನು ಸಾಧಿಸುತ್ತಿದೆ. ಇಂತಹ ಕಲೆ ಮತ್ತು ವಾಸ್ತುಶಿಲ್ಪ ಕೇಂದ್ರಗಳನ್ನು ಅಭಿವೃದ್ಧಿಪಡಿಸಿ ಹೆಚ್ಚಿನ ಸಂಖ್ಯೆಯಲ್ಲಿ ಪ್ರವಾಸಿಗರನ್ನು ಆಕರ್ಷಣೆ ಮಾಡಬಹುದಾಗಿದೆ. ಇದರೊಂದಿಗೆ ಇಂತಹ ಕಟ್ಟಡಗಳನ್ನು ಮತ್ತು ದೇವಾಲಯಗಳನ್ನು ಸಂರಕ್ಷಣೆ ಮಾಡುವುದರೊಂದಿಗೆ ಪ್ರವಾಸೋದ್ಯಮವನ್ನು ಬೆಳೆಸಬಹುದೆಂದು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ..

ಜಿಲ್ಲೆಯಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಹಿಂದೂ ಧಾರ್ಮಿಕ ಸ್ಮಾರಕಗಳಿವೆ. ಅದ್ಭುತವಾದ ವಾಸ್ತುಶಿಲ್ಪವನ್ನು ಮತ್ತು ಐತಿಹಾಸಿಕ ಮಹತ್ವವನ್ನು ಹೊಂದಿವೆ. ಇದರೊಂದಿಗೆ ಜೈನ, ಬೌದ್ಧ ಧರ್ಮಕ್ಕೆ ಸೇರಿದ ಸ್ಮಾರಕಗಳನ್ನು ಕಂಡುಕೊಳ್ಳಲಾಗಿದೆ. ಇಂತಹ ಸ್ಮಾರಕಗಳು ಪ್ರವಾಸೋಧ್ಯಮ ತಾಣಗಳನ್ನಾಗಿ ಯೋಜನೆಗಳನ್ನು ರೂಪಿಸಿ ಅಭಿವೃದ್ಧಿಪಡಿಸುವ ಜರೂರತೆ ಇದೆ. ಹಲವು ರಾಜಮನೆತನಗಳ ಆಡಳಿತ ಕಾಲದಲ್ಲಿ ನಿರ್ಮಾಣ ಮಾಡಿರುವ ಸ್ಮಾರಕಗಳು ಪ್ರವಾಸಿ ಆಕರ್ಷಣೆಗಳಾಗಿವೆ. ಪ್ರಾಚೀನ ಕಾಲದ ದೇವಾಲಯ ಸ್ಮಾರಕಗಳಲ್ಲದೆ ನೂತನವಾಗಿ ನಿರ್ಮಾಣ ಮಾಡಿರುವ ದೇವಾಲಯಗಳು ಅಧಿಕ ಸಂಖ್ಯೆಯಲ್ಲಿ ಪ್ರವಾಸಿಗರನ್ನು ಸೆಳೆಯುವಂತಹ ಪ್ರವಾಸಿ ತಾಣಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಕಂಡುಬರುತ್ತವೆ. ಈ ನಿಟ್ಟಿನಲ್ಲಿ ಬೆಂಗಳೂರು ಜಿಲ್ಲೆಯಲ್ಲಿ ಧಾರ್ಮಿಕವಲ್ಲದ ಸ್ಮಾರಕಗಳನ್ನು ಸಂರಕ್ಷಣೆ ಮಾಡಲು ಸಹ ಸಾಧ್ಯವಾಗುತ್ತದೆ.

ಇವುಗಳಲ್ಲದೆ ಹೆಚ್ಚಿನ ಸಂಖ್ಯೆಯಲ್ಲಿ ಶಾಸನಗಳು, ವೀರಗಲ್ಲುಗಳನ್ನು ಸಹ ಬೆಂಗಳೂರು ಗ್ರಾಮಾಂತರ ಜಿಲ್ಲೆಯದಾದ್ಯಂತ ಕಂಡುಬರುತ್ತವೆ. ಇಂತಹ ಸ್ಥಳಗಳನ್ನು ವ್ಯವಸ್ಥಿತವಾಗಿ ನಿರ್ವಹಣೆ ಮಾಡುವ ಅಶ್ಯಕತ ಇದೆ. ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾರತದ ವಿವಿಧ ಭಾಗಗಳಿಂದ ಪ್ರವಾಸಿಗರನ್ನು ಆಕರ್ಷಣೆ ಮಾಡುವ ಸೂಫಿ ಸಂತರ ದರ್ಗಾಗಳು ಧಾರ್ಮಿಕ ಸಾಮರಸ್ಯವನ್ನು ಮತ್ತು ಸಾಂಸ್ಕೃತಿಕ ಸಮಾನತೆಯನ್ನು ಪ್ರತಿಪಾದಿಸುವ ತಾಣಗಳಾಗಿದ್ದು, ಜಿಲ್ಲೆಯ ಪ್ರವಾಸೋದ್ಯಮಕ್ಕೆ ಉತ್ತಮ ಕೊಡುಗೆಯನ್ನು ನೀಡುತ್ತಿವೆ. ರಾಷ್ಟ್ರೀಯ ಮಟ್ಟದಲ್ಲಿ ಪ್ರವಾಸಿಗರನ್ನು ಆಕರ್ಷಣೆ ಮಾಡುವಂತಹ ಹಲವು ದರ್ಗಾಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಕಂಡುಬರುತ್ತವೆ. ಸೂಫಿ ಸಂತರ ದರ್ಗಾಗಳಲ್ಲಿ ಆಚರಣೆ ಮಾಡುವಂತಹ ವಾರ್ಷಿಕ ಉರುಸ್ ಮತು ಅಂದು ನಡೆಯುವ ಕವ್ವಾಲಿ ಕಾರ್ಯಕ್ರಮಗಳು ಹೆಚ್ಚು ಪ್ರವಾಸಿಗರನ್ನು ಸೆಳೆಯುವಂತಹ

ನಿಟ್ಟಿನಲ್ಲಿ ಮುಖ್ಯವಾಗಿವೆ. ಇಂತಹ ಉರುಸ್‌ಗಳನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ದರ್ಗಾಗಳಲ್ಲಿ ಆಚರಣೆ ಮಾಡಲಾಗುತ್ತಿದೆ. ಇಂತಹ ದರ್ಗಾಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಬೇಕಾಗಿದೆ. ಅಲ್ಲದೆ ದರ್ಗಾಗಳನ್ನು ಸಂಪರ್ಕಿಸುವಂತಹ ರಸ್ತೆಗಳನ್ನು ಅಭಿವೃದ್ಧಿಪಡಿಸಬೇಕಾಗಿದೆ.

## 6.2 ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಸಂಪತ್ತು ಮತ್ತು ಹವಾಮಾನ ಪರಿಸ್ಥಿತಿಯ ಬಗ್ಗೆ

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಪ್ರಾಣಿ ಸಂಪತ್ತು ಮತ್ತು ಉತ್ತಮವಾದ ಪರಿಸರವನ್ನು ನೋಡಬಹುದಾಗಿದೆ. ಇಲ್ಲಿ ಮಳೆಗಾಲದಲ್ಲಿ ಹರಿಯುವಂತಹ ನದಿಗಳು, ವಿಶಿಷ್ಟವಾದ ಮೈದಾನಗಳು, ಕೆರೆಗಳು, ಬೆಟ್ಟಗಳು, ಗುಡ್ಡಗಳು, ಮರಳಿನ ರಾಶಿಗಳು, ಪ್ರಾಣಿಗಳು, ಪಕ್ಷಿಗಳು, ವನ್ಯಮೃಗಗಳು, ಪುಷ್ಪಗಳು, ಕ್ರೀಡಾ ಸ್ಥಳಗಳು ಮತ್ತು ಮನರಂಜನೆಯನ್ನು ನೀಡುವಂತಹ ಇತರ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನೀಡುವಂತಹ ಕೇಂದ್ರಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪರಿಸರ ಪ್ರವಾಸೋದ್ಯಮದ ಉತ್ಪನ್ನಗಳಾಗಿರುವುದು ಕಂಡುಬರುತ್ತದೆ. ಆನೆಗಳು, ನಕ್ಷತ್ರಗಳು, ಮೀನುಗಳು, ನವಿಲುಗಳು, ಜಿಂಕೆ, ಪಕ್ಷಿಗಳು, ಚಿಟ್ಟೆಗಳು, ಕೋಳಿಗಳು, ಧನಕರುಗಳು, ಎಮ್ಮೆಗಳು ಇನ್ನಿತರ ಬಗೆಯ ಪ್ರಾಣಿ ಪ್ರಪಂಚವನ್ನು ಜಿಲ್ಲೆಯಲ್ಲಿ ಕಂಡುಕೊಳ್ಳಲಾಗಿದೆ.

ಈ ರೀತಿಯ ಸ್ಥಳಗಳಿಗೆ ಮನರಂಜನೆಗಾಗಿ ಮತ್ತು ಮಾನಸಿಕ ನೆಮ್ಮದಿಯನ್ನು ಪಡೆಯುವ ಉದ್ದೇಶದಿಂದ ಪ್ರವಾಸಿಗರು ಭೇಟಿ ನೀಡುತ್ತಿದ್ದಾರೆ ಎಂಬುದನ್ನು ಕಂಡುಕೊಳ್ಳಲಾಗಿದೆ. ಆಕರ್ಷಣೀಯವಾದ ಬೆಟ್ಟ ಸಮೂಹಗಳು ಅಂದರೆ ಬೆಟ್ಟಶ್ರೇಣಿಗಳು ಮತ್ತು ಕಣಿವೆಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ನೋಡಬಹುದಾಗಿದೆ. ತನ್ನಲ್ಲಿನ ಪ್ರಾಕೃತಿಕ ಪರಿಸರದಿಂದಾಗಿ ಜಿಲ್ಲೆಯ ಪರಿಸರ ಪ್ರವಾಸೋದ್ಯಮ ಕ್ಷೇತ್ರವನ್ನು ಬೆಳೆಸಬಹುದಾಗಿದೆ.

ಜಿಲ್ಲೆಯ ಬೆಟ್ಟಗುಡ್ಡಗಳು ಧಾರ್ಮಿಕ ಮತ್ತು ಸಾಂಸ್ಕೃತಿಕ ಪ್ರವಾಸಿಗರ ತಾಣಗಳಷ್ಟೇ ಅಲ್ಲದೇ ಸಾಹಸ ಮತ್ತು ಚಾರಣ ಪ್ರವಾಸಿಗರಿಗೆ ಉತ್ತಮವಾದ ಅವಕಾಶಗಳನ್ನು ಕಲ್ಪಿಸಿದೆ. ಪ್ರತಿ ವಾರದ ಅಂತ್ಯಗಳಲ್ಲಿ ಬೆಂಗಳೂರು ಮತ್ತು ಇತರ ನಗರಗಳಿಂದ ಚಾರಣ ಮಾಡಲು ಮತ್ತು ಸಾಹಸಮಯವಾದ ಬೆಟ್ಟಗಳಿಗೆ ಪರ್ವತಾರೋಹಣ ಮಾಡಲು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪ್ರವಾಸ ಕೈಗೊಳ್ಳುತ್ತಿದ್ದಾರೆ. ಇಂತಹ ಸಾಹಸ ಪ್ರವಾಸೋದ್ಯಮದ ನೆಲೆಗಳನ್ನು ಹೊಂದಿರುವ ಜಿಲ್ಲೆಯಲ್ಲಿ ವ್ಯವಸ್ಥಿತವಾದ ಯೋಜನೆಗಳ ಕೊರತೆ ಕಾಡುತ್ತಿದೆ. ಚಾರಣ

ಪ್ರವಾಸೋದ್ಯಮವನ್ನು ನಿರ್ವಹಣೆ ಮಾಡುನ ನಿಟ್ಟಿನಲ್ಲಿ ಸರ್ಕಾರಗಳು ಅಷ್ಟು ಉತ್ಸಾಹದಿಂದ ಅಂದರೆ ಕ್ರೀಯಾಶೀಲವಾಗಿ ಕಾರ್ಯನಿರ್ವಹಿಸುತ್ತಿಲ್ಲ.

ನೂರಾರು ಸಂಖ್ಯೆಯಲ್ಲಿ ಚಾರಣ ಪ್ರವಾಸಿಗರು ಇಲ್ಲಿಗೆ ಭೇಟಿ ನೀಡಿದರೂ ಸಹ ಅವರಿಗೆ ಬೇಕಾಗಿರುವ ಮಾಹಿತಿ ಮತ್ತು ಮಾರ್ಗದರ್ಶನ ಹಾಗೂ ಪ್ರವಾಸಿ ಮಾಹಿತಿದಾರರ ಕೊರತೆಯು ಎದ್ದು ಕಾಣುತ್ತಿದೆ. ಸ್ವಯಂ ಆಸಕ್ತಿಯಿಂದ ಹಾಗೂ ತಮ್ಮ ಸ್ವಂತ ವ್ಯವಸ್ಥೆಯನ್ನು ಮಾಡಿಕೊಂಡು ಬರುವ ಪ್ರವಾಸಿಗರು ಸಂಖ್ಯೆಯು ಅಧಿಕವಾಗಿದೆ. ಶಿವಗಂಗೆಬೆಟ್ಟ, ಮತ್ತು ಇತರ ಬೆಟ್ಟಗುಡ್ಡಗಳು ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ಸಾಹಸ ಪ್ರವಾಸಿಗರನ್ನು ಸೆಳೆಯುತ್ತಿರುವ ಬೆಟ್ಟಗಳಲ್ಲಿ ಪ್ರಧಾನವಾಗಿವೆ. ಇಂತಹ ಸಾಹಸ ಪ್ರವಾಸೋದ್ಯಮ ಕೇಂದ್ರಗಳಿಂದಾಗಿ ಜಿಲ್ಲೆಯ ಸಾಂಕ್ಕೃತಿಕ, ಪರಿಸರ ಮತ್ತು ಐತಿಹಾಸಿಕ ಮಹತ್ವವನ್ನು ಪ್ರಸರಿಸಲು ಕಾರಣವಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಸುಸ್ಥಿರ ಪ್ರವಾಸೋದ್ಯಮವನ್ನು ಬೆಳೆಸಲು ಸಹಾಯಕಾರಿಯಾಗಿದೆ. ಇಲ್ಲಿನ ಬೆಟ್ಟಗುಡ್ಡಗಳ ಮಹತ್ವವನ್ನು ತಿಳಿಸುವುದರೊಂದಿಗೆ ಪರಿಸರದ ಬಗ್ಗೆ ಕಾಳಜಿಯನ್ನು ಸಹ ಉಂಟುಮಾಡುತ್ತಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಹಲವು ಚಾರಣ ಪ್ರವಾಸಿ ತಾಣಗಳ್ಳಿದ್ದು, ಚಾರಣ ಪ್ರವಾಸಿಗರ ತರಬೇತಿ ಕೇಂದ್ರಗಳು ಮತ್ತು ಸಂಘಗಳು ಅಸ್ಥಿತ್ವವನ್ನು ಪಡೆದುಕೊಳ್ಳುಲು ಉತ್ತಮವಾದ ಅವಕಾಶವನ್ನು ಹೊಂದಿದೆ. ಈ ನಿಟ್ಟಿನಲ್ಲಿ ಸ್ಥಳೀಯರು, ಜನಪ್ರತಿನಿಧಿಗಳು, ಸಂಘಸಂಸ್ಥೆಗಳು ಮತ್ತು ಸರ್ಕಾರಗಳು ಕ್ರಿಯಾಶೀಲವಾಗಿ ಭಾಗವಹಿಸಿ ಪ್ರೋತ್ಸಾಹ ನೀಡುವ ಅಗತ್ಯತೆ ಕಂಡುಬರುತ್ತದೆ.

ಸಾಹಸ ಪ್ರವಾಸಿಗಳನ್ನು ಮಾತ್ರ ಆಯೋಜನೆ ಮಾಡುವುದಲ್ಲದೇ ಪರಿಸರದ ಬಗ್ಗೆ ಮತ್ತು ಬೆಟ್ಟಗುಡ್ಡಗಳ ವನ್ಯಜೀವಿಗಳ ಮಹತ್ವ ಮತ್ತು ಸಂರಕ್ಷಣೆಯ ಬಗ್ಗೆ ಜಾಗೃತಿಯನ್ನು ಸಹ ಮೂಡಿಸುತ್ತಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸುಸ್ಥಿರ ಪ್ರವಾಸೋದ್ಯಮ ಬೆಳವಣಿಗೆಯಲ್ಲಿ ಬಹು ಮುಖ್ಯವಾದ ಪಾತ್ರವನ್ನು ವಹಿಸಿತ್ತದೆ. ಬೆಟ್ಟಗಳಲ್ಲಿನ ವಿಭಿನ್ನವಾದ ಪ್ರಾಣಿ–ಪಕ್ಷಿಗಳನ್ನು ಮತ್ತು ಜೀವಿಗಳನ್ನು ಗುರ್ತಿಸಿ ಅವುಗಳ ಮಹತ್ವವನ್ನು ತಿಳಿಸಿಕೊಡುತ್ತಿದೆ. ಪ್ರಾಣಿವರ್ಗ, ಸಸ್ಯವರ್ಗಗಳನ್ನು ಒಳಗೊಂಡಂತೆ ಜಿಲ್ಲೆಯ ಪ್ರಾಕೃತಿಕ ಪರಿಸರ ಸಂರಕ್ಷಣೆಯ ಜೊತೆ ಜೊತೆಗೆ ಸಾಹಸ ಪ್ರವಾಸೋದ್ಯಮವನ್ನು ಪ್ರಚುರಪಡಿಸುತ್ತಿದೆ. ಈಗಾಗಲೇ ಹಲವು ಸಾಹಸಮಯವಾದ ಚಾರಣ ಪ್ರವಾಸಗಳನ್ನು ಆಯೋಜಿಸಿದೆ. ಈ ರೀತಿಯಲ್ಲಿ ಬಹಳ ಉತ್ತಮವಾದ ಕೆಲಸವನ್ನು ಮಾಡುತ್ತಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಚಾರಣ ಪ್ರವಾಸೋದ್ಯಮದಲ್ಲಿ ತನ್ನದೇ ಆದ ಪ್ರಧಾನ ಪಾತ್ರವನ್ನು ಹೊಂದಿದೆ.

ಹಲವು ಪ್ರವಾಸಿ ಆಕರ್ಷಣೆಗಳು ಮತ್ತು ಉತ್ತಮವಾದ ಪರಿಸರವನ್ನು ಹೊಂದಿರುವ ಶಿವಗಂಗೆಯು ಸಾಹಸ ತಾಣವಾಗಿದೆ. ಈ ಬೆಟ್ಟದಿಂದ ಕೇಬಲ್ ಕಾರು ಮತ್ತು ರೊಪ್ ವೇ ವ್ಯವಸ್ಥೆಯನ್ನು ಕಲ್ಪಿಸಿದರೆ ಮತ್ತಷ್ಟು ಪ್ರವಸಿಗರನ್ನು ಆಕರ್ಷಣೆ ಮಾಡಬಹುದಾಗಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆ ಹಾಗೂ ಇತರ ನಗರಗಳಿಂದಲೂ ಪ್ರವಾಸಿಗರನ್ನು ಸೆಳೆಯಲು ಸಾಧ್ಯವಾಗುತ್ತದೆ. ಈ ಮೂಲಕ ಸ್ಥಳೀಯರಿಗೆ ಉದ್ಯೋಗ ಮತ್ತು ಆದಾಯವನ್ನು ನೀಡುವಂತಹ ಸಹಾಯಕ ಸೇವೆಗಳಿಗೆ ಬೇಡಿಕೆ ಉಂಟಾಗಿ ಆರ್ಥಿಕ ಪ್ರಗತಿಯು ಸಾಧ್ಯವಾಗುತ್ತದೆ. ಈ ನಿಟ್ಟಿನಲ್ಲಿ ಸ್ಥಳೀಯ ಜನಪ್ರತಿಧಿಗಳು ಮತ್ತು ಸಂಘಸಂಸ್ಥೆಗಳು ಯೋಜಿತ ರೀತಿಯಲ್ಲಿ ಪ್ರಯತ್ನದ ಅವಶ್ಯಕತೆಯಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಹಲವು ಸ್ಥಳಗಳಲ್ಲಿ ದೋಣಿ ವಿಹಾರ ಕೇಂದ್ರಗಳನ್ನು ಸ್ಥಾಪನೆ ಮಾಡಲು ಉತ್ತಮ ಅವಾಕಾಶಗಳಿವೆ. ಅವುಗಳಲ್ಲಿ ಪ್ರಮುಖವಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಇರುವ ದೊಡ್ಡಕೊರಟಗೆರೆ ಕೆರೆ, ದೇವರಹೊಸಹಳ್ಳಿ ಕೆರೆ, ಮಣ್ಣೆಯ ದೊಡ್ಡ ಕೆರಗಳನ್ನು ಪ್ರವಾಸಿಗರನ್ನು ಸೆಳೆಯುವಂತಹ ದೋಣಿ ವಿಹಾರದಾಮಗಳಾಗಿ ಅಭಿವೃದ್ಧಿಪಡಿಸಬಹುದಾಗಿದೆ. ಇಂತಹ ಹಲವು ಅವಕಾಶಗಳನ್ನು ಮತ್ತು ಪ್ರಾಕೃತಿಕ ಸಂಪನ್ಮೂಲಗಳನ್ನು ಬಳಸಿಕೊಂಡು ಯೋಜಿತ ರೀತಿಯಲ್ಲಿ ಜಿಲ್ಲೆಯಲ್ಲಿನ ಪ್ರವಾಸೋದ್ಯಮವನ್ನು ಇನ್ನಷ್ಟು ಬೆಳೆಸಬಹುದಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಇಂದಿನ ಆಧುನಿಕ ಕಾಲದಲ್ಲಿಯೂ ರಾಷ್ಟ್ರಮಟ್ಟದಲ್ಲಿ ಪ್ರಖ್ಯಾತಿಯನ್ನು ಪಡೆದಿರುವ ಡಾ. ಶ್ರೀ ಶ್ರೀ ಶಿವಕುಮಾರ್ ಸ್ವಾಮೀಜಿಯವರ ತಾಂತ್ರಿಕ ಮಹಾವಿದ್ಯಾಲಯ ಮತ್ತು ಸಿದ್ದಾರ್ಥ ಮೆಡಿಕಲ್ ಶಿಕ್ಷಣ ಮಹಾವಿದ್ಯಾಲಯಗಳು ವೈದ್ಯಕೀಯ ಮತ್ತು ತಾಂತ್ರಿಕ ಶಿಕ್ಷಣ ಕ್ಷೇತ್ರದಲ್ಲಿ ಹೆಸರುಗಳಿಸಿವೆ. ದೇಶಿಯ ಮತ್ತು ಅಂತರರಾಷ್ಟ್ರೀಯ ವಿದ್ಯಾರ್ಥಿಗಳನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಸೆಳೆಯುತ್ತಿರುವುದು ಕಂಡುಬರುತ್ತದೆ. ಈ ನಿಟ್ಟಿನಲ್ಲಿ ಜಿಲ್ಲೆಗೆ ಹಚ್ಚಿನ ಸಂಖ್ಯೆಯ ವಿದ್ಯಾರ್ಥಿಗಳು ಆಗಮಿಸಿ ಶೈಕ್ಷಣಿಕ ಪ್ರವಾಸೋದ್ಯಮ ಕ್ಷೇತ್ರವು ಅಭಿವೃದ್ಧಿಯಾಗಲು ಸಹಾಯಕವಾಗಿರುವುದನ್ನು ಕಾಣಬಹುದಾಗಿದೆ.

ಹಲವು ಶತಮಾನಗಳಿಂದ ಜಿಲ್ಲೆಯಲ್ಲಿ ಮುಖ್ಯವಾಗಿ ಗ್ರಾಮೀಣ ಪ್ರದೇಶದಲ್ಲಿ ನಾಟಿ ವೈದ್ಯ ಪದ್ದತಿಯು ಹೆಚ್ಚು ಪ್ರಖ್ಯಾತಿಯನ್ನು ಪಡೆದಿರುವುದು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ. ಇತಂಹ ವೈದ್ಯಕೀಯ ಸ್ಥಳಗಳಲ್ಲಿ ಬೇರೆ ಬೇರೆ ಪ್ರದೇಶಗಳಿಗೆ ಚಿಕಿತ್ಸೆಯನ್ನು ಮತ್ತು ಉಪಕ್ರಮವನ್ನು ಪಡೆಯಲು ರೋಗಿಗಳು ಬೇಟಿ ನೀಡುತ್ತಿದ್ದಾರೆ. ಇಂತಹ ಸ್ಥಳಗಳಲ್ಲಿ ಪ್ರವಾಸಗರು ತಮ್ಮ ಪ್ರವಾಸದ ಅವದಿಯಲ್ಲಿ ಹಲವು ಆರ್ಥಿಕ ಚಟುವಟಿಕೆಗಳಲ್ಲಿ ಕೈಗೊಳ್ಳುತ್ತಿದ್ದಾರೆ. ಈ

ರೀತಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವೈದ್ಯಕೀಯ ಮತ್ತು ಆರೋಗ್ಯ ಪ್ರವಾಸೋದ್ಯಮ ಕ್ಷೇತ್ರದಲ್ಲಿ ಮಹತ್ವದ ಸ್ಥಾನವನ್ನು ಪಡೆದುಕೊಂಡಿರುವುದನ್ನು ಕಾಣಬಹುದಾಗಿದೆ. ಇಂತಹ ಆಯುರ್ವೇದ ಚಿಕಿತ್ಸಾ ಕ್ರಮಗಳನ್ನು ಇಂದು ಪ್ರವಾಸೋದ್ಯಮದ ಭಾಗವಾಗಿರುವುದನ್ನು ಕಾಣಬಹುದಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕೈಗಾರಿಕೆಗಳ ಉದ್ಯಮದಲ್ಲಿ ಪ್ರಸಿದ್ಧಿಯನ್ನು ಪಡೆದಿದೆಎಲ್ ಎಮ್ ವಿಂಡ್ ಪವರ್ಸ್ ಕೈಗಾರಿಕೆಯು ಜಾಗತೀಕ ಮಟ್ಟದಲ್ಲಿ ಹೆಸರನ್ನು ಪಡೆದುಕೊಂಡಿತ್ತು. ಸರಿಸುಮಾರು ಭಾರತದ ವಾಯು ವಿದ್ಯುತ್ ಉತ್ಪಾದನೆ ಮಾಡುವುದಲ್ಲದೆ ಅಂತರಷ್ಟ್ರೀಯ ಮಟ್ಟದಲ್ಲಿ ಮಾರುಕಟ್ಟೆಯನ್ನು ಪಡೆದಿದೆ. ಸಾವಿರಾರು ಸಂಖ್ಯೆಯ ಜನರಿಗೆ ಉದ್ಯೋಗವನ್ನು ಒದಗಿಸಿತ್ತು. ಜಿಲ್ಲೆಯ ಡಾಬಸ್‌ಪೇಟ್ ಕೈಗಾರಿಕವು ಅಂದು ನಿರ್ಮಾಣ ಮಾಡಿದ ಹಲವು ಆಡಳಿತ ಮತ್ತು ಧಾರ್ಮಿಕ ಕಟ್ಟಡಗಳು ಪ್ರವಾಸೋದ್ಯಮದ ಉತ್ಪನ್ನವಾಗಿವೆ. ಈ ನಿಟ್ಟಿನಲ್ಲಿ ಡಾಬಸ್‌ಪೇಟ್ ಉತ್ತಮ ಪ್ರವಾಸಿ ತಾಣವಾಗಲು ಮತ್ತು ಆರ್ಥಿಕ ಪ್ರವಾಸೋದ್ಯಮ ಕ್ಷೇತ್ರಕ್ಕೆ ಕೈಗಾರಿಕೆ ಮತ್ತುಇತರ ಉದ್ಯಮಗಳಿಗೆ ಮಹತ್ವದ ಕೊಡುಗೆಯನ್ನು ನೀಡಿರುವುದು ಕಂಡುಬರುತ್ತಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಸಾಂಪ್ರದಾಯಿಕ ಉದ್ಯಮಗಳ ಜೊತೆಗೆ ಆಧುನಿಕ ಕೈಗಾರಿಕೆಗಳು ಸ್ಥಾಪನೆಗೊಂಡು ಕಾರ್ಯನಿರ್ವಹಿಸುತ್ತಿವೆ.

ಇದರಂತೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಹಲವು ನೂತನ ಕೈಗಾರಿಕೆಗಳಿದ್ದು ಆರ್ಥಿಕ ಪ್ರಗತಿಗೆ ಕಾರಣೀಭೂತವಾಗಿದೆ. ಅವುಗಳಲ್ಲಿ ಕಾರು ಮಾರಾಟದ ಮಾರುತಿ ಸುಜುಕಿ, ಪವನಶಕ್ತಿ ಉತ್ಪಾದನಾ ಎಲ್.ಎಮ್ ವಿಂಡ್ ಪವರ್ ಅಂತರಾಷ್ಟ್ರೀಯ ಮಟ್ಟದಲ್ಲಿ ಮಾರುಕಟ್ಟೆಯನ್ನು ಹೊಂದಿದೆ. ಪ್ರಧಾನವಾಗಿ ಮತ್ತು ನೇರವಾಗಿ ಉದ್ಯೋಗ, ಬಂಡವಾಳ ಸಂಚಯನ, ತಂತ್ರಜ್ಞನರ ಚಲನೆ, ಊಟ ಮತ್ತು ವಸತಿ ಉದ್ಯಮಗಳ ಬೆಳವಣಿಗೆ, ಸಾರಿಗೆ ಮತ್ತು ಸಂಪರ್ಕ ಕ್ಷೇತ್ರ, ಸರ್ಕಾರಕ್ಕೆ ಆದಾಯ, ಅಧ್ಯಯನ ಪ್ರವಾಸಗಳು, ತಲಾದಾಯದ ಹೆಚ್ಚಳ ಹೀಗೆ ಹಲವು ನೇರ ಪ್ರಯೋಜನಗಳು ಇದರಿಂದ ಸಾಧ್ಯವಾಗುತ್ತಿವೆ. ಹೀಗೆ ಬೃಹತ್ ಉದ್ಯಮಗಳು ಜಿಲ್ಲೆಯ ಆರ್ಥಿಕ ಪ್ರವಾಸೋದ್ಯಮ ಅಭಿವೃದ್ಧಿಯಲ್ಲಿ ಮುಖ್ಯವಾದ ಪಾತ್ರವನ್ನು ವಹಿಸುತ್ತಿರುವುದು ಕಂಡು ಬರುತ್ತದೆ.

ಬಟ್ಟೆ ಉದ್ಯಮಗಳು ಜಿಲ್ಲೆಯಲ್ಲಿ ಅಸ್ಥಿತ್ವದಲ್ಲಿದ್ದು ತಮ್ಮ ವ್ಯಾಪಾರ ಮುಖಾಂತರವಾಗಿ ಜಿಲ್ಲೆಯ ಆರ್ಥಿಕ ಪ್ರವಾಸಕ್ಕೆ ಕಲ್ಪಿಸುತ್ತಿವೆ. ಇವುಗಳಲ್ಲದೇ. ರೇಷ್ಮೆ ಉತ್ಪಾದನೆ ಮತ್ತು ರೇಷ್ಮೆ ಬಟ್ಟೆ ನೇಯ್ಗೆ ಕೈಗಾರಿಕೆಗಳು ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ಸಾವಿರಾರು ಜನರಿಗೆ ನೇರ ಮತ್ತು

ಪರೋಕ್ಷವಾಗಿ ಉದ್ಯೋಗವನ್ನು ಕಲ್ಪಿಸುತ್ತಿದ್ದು, ಬಂಡವಾಳ ಸಂಚಯನ ಮತ್ತು ಪ್ರವಾಸೋದ್ಯಮಕ್ಕೆ ಪೂರಕವಾಗಿರುವ ಉದ್ಯಮಗಳಾಗಿವೆ. ಗುಡಿ ಮತ್ತು ಸಣ್ಣ ಪ್ರಮಾಣದ ಉದ್ಯಮಗಳೂ ಸಹ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿವೆ. ಹಲವು ಶತಮಾನಗಳಿಂದ ವಿಸ್ತೃತ ಮಾರುಕಟ್ಟೆಯನ್ನು ಹೊಂದಿರುವ ಅಗರಭತ್ತಿ, ಬುಟ್ಟಿ ನೇಯ್ಗೆ ಮತ್ತು ಇತರ ಉದ್ಯಮಗಳು ಜನರು ಆರ್ಥಿಕ ಉದ್ದೇಶಕ್ಕಾಗಿ ಪ್ರಯಾಣ ಮಾಡಲು ಅವಕಾಶವನ್ನು ಮೂಡಿಸಿವೆ, ಇದರಿಂದಾಗಿ ಉತ್ಪಾದನೆ, ಮಾರಾಟ, ಮಾರುಕಟ್ಟೆ ಅಧ್ಯಯನ, ಬಂಡವಾಳ ಹೂಡಿಕೆ, ಹೀಗೆ ಹಲವು ವಿಧಗಳಲ್ಲಿ ಆರ್ಥಿಕ ಪ್ರವಾಸೋದ್ಯಮ ಅಭಿವೃದ್ಧಿಗೆ ಕಾರಣವಾಗಿವೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹೈನುಗಾರಿಕೆ ಮತ್ತು ತೋಟಗಾರಿಕೆ ಉದ್ಯಮಗಳು ಆರ್ಥಿಕ ಪ್ರವಾಸೋದ್ಯಮಕ್ಕೆ ಮಹತ್ವದ ಕೊಡುಗೆಯನ್ನು ನೀಡುತ್ತಿವೆ. ಜಿಲ್ಲೆಗೆ ಹೈನುಗಾರಿಕೆ ಮತ್ತು ತೋಟಗಾರಿಕೆ ಉತ್ಪನ್ನಗಳನ್ನು ವೀಕ್ಷಣೆ ಮಾಡಲು, ಮತ್ತು ವ್ಯಾಪಾರಕ್ಕಾಗಿ ಅಧಿಕ ಸಂಖ್ಯೆಯಲ್ಲಿ ಪ್ರವಾಸಿಗರು ಭೇಟಿ ನೀಡಲು ಕಾರವಾಗಿವೆ. ಈ ನಿಟ್ಟಿನಲ್ಲಿ ಸರ್ಕಾರಗಳು ಖಾಸಗಿ ಸಹಭಾಗಿತ್ವದಲ್ಲಿ ಮೂಲಭೂತ ಸೌಲಭ್ಯಗಳನ್ನು ಮತ್ತು ಮಾಹಿತಿ ಹಾಗೂ ಪ್ರಚಾರವನ್ನು ಮಾಡುವುದರೊಂದಿಗೆ ಇನ್ನಷ್ಟು ಜಿಲ್ಲೆಯ ಆರ್ಥಿಕ ಪ್ರವಾಸೋದ್ಯಮ ಕ್ಷೇತ್ರವನ್ನು ಅಭಿವೃದ್ಧಿಪಡಿಸಬಹುದಾಗಿದೆ.

## 6.3 ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಮೂಲಭೂತ ಸೌಕರ್ಯಗಳ ವಿಶ್ಲೇಷಣೆ

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ವಿಭಿನ್ನ ಬಗೆಯ ಪ್ರವಾಸೋದ್ಯಮ ಕ್ಷೇತ್ರಗಳನ್ನುಅಭಿವೃದ್ಧಿಪಡಿಸಲು ಸಂಪನ್ಮೂಲಗಳನ್ನು ಮತ್ತು ಅವಕಾಶವನ್ನು ಹೊಂದಿದೆ. ಇಂತಹ ಅವಕಾಶಗಳನ್ನು ಬಳಸಿಕೊಂಡು ಪ್ರವಾಸಿಗರನ್ನು ಆಕರ್ಷಣೆ ಮಾಡುವಂತಹ ಕಾರ್ಯಕ್ರಮಗಳನ್ನು ಯೋಜನೆಗಳನ್ನು ರೂಪಿಸಿ ಜಾರಿಗೆ ತರಬೇಕಾಗಿರುವ ಅನಿವಾರ್ಯತೆ ಕಂಡುಬರುತ್ತದೆ. ಜಿಲ್ಲೆಯಲ್ಲಿನ ಪ್ರವಾಸಿ ತಾಣಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಬೇಕಾಗಿದೆ. ಪ್ರವಾಸಿಗರಿಗೆ ಅವಶ್ಯಕವಾಗಿರುವ ಪ್ರವಾಸಿ ವಸತಿ ನಿಲಯಗಳನ್ನು ಮತ್ತು ಹೊಟೇಲ್‌ಗಳನ್ನು ನಿರ್ಮಾಣ ಮಾಡಲು ಪ್ರೋತ್ಸಾಹ ನೀಡಬೇಕಾಗಿದೆ. ಮುಖ್ಯ ರಸ್ತೆ ಮತ್ತು ಕೂಡು ರಸ್ತಗಳಲ್ಲಿ ಪ್ರವಾಸಿ ತಾಣಗಳ ಪಟ್ಟಿಯೊಂದಿಗೆ ಮಾರ್ಗ ಸೂಚಿಗಳನ್ನು ಒಳಗೊಂಡ ಮಾಹಿತಿ ಫಲಕಗಳನ್ನು ಅಳವಡಿಸಿದರೆ ಪ್ರವಾಸಿಗರಿಗೆ ಅನುಕೂಲವಾಗುತ್ತದೆ.

ಪತ್ರಿಕೆಗಳಲ್ಲಿ ಮತ್ತು ಸಂವಹನ ಮಾಧ್ಯಮಗಳಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಎಲ್ಲಾ ಬಗೆಯ ಪ್ರವಾಸಿ ತಾಣಗಳ ಬಗ್ಗೆ ಪರಿಚಯ ಮತ್ತು ಪ್ರಚಾರವನ್ನು ಮಾಡಿದರೆ ಹೆಚ್ಚು ಪ್ರವಾಸಿಗರನ್ನು ಜಿಲ್ಲೆಗೆ ಆಕರ್ಷಣೆ ಮಾಡುವ ಮೂಲಕ ಪ್ರವಾಸೋದ್ಯಮವನ್ನು

ಅಭಿವೃದ್ಧಿಪಡಿಸಬಹುದಾಗಿದೆ. ಜಿಲ್ಲೆ ಮಟ್ಟದಲ್ಲಿ ಪ್ರವಾಸೋದ್ಯಮ ಅಭಿವೃದ್ಧಿ ಸಮಿತಿಯು ಜಿಲ್ಲೆಯಲ್ಲಿ ಪ್ರವಾಸಿ ತಾಣಗಳ ಅಭಿವೃದ್ಧಿಯ ಹಿನ್ನಲೆಯಲ್ಲಿ ಸಮಗ್ರವಾದ ಯೋಜನೆಗಳನ್ನು ರೂಪಿಸಬೇಕಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಐತಿಹಾಸಿಕ, ಧಾರ್ಮಿಕ, ಪಾರಂಪರಿಕ, ಪರಿಸರ, ಶೈಕ್ಷಣಿಕ, ಸ್ಮಾರಕಗಳು, ಆರ್ಥಿಕ ಮತ್ತು ಮನರಂಜನಾ ಪ್ರವಾಸಿ ತಾಣಗಳನ್ನು ಸಂಪರ್ಕ ಕಲ್ಪಿಸುವಂತಹ ಪ್ರವಾಸಿ ಜಾಲಗಳನ್ನು ಅಭಿವೃದ್ಧಿ ಪಡಿಸಿದರೆ ಹೆಚ್ಚು ಪ್ರವಾಸಿಗರನ್ನು ಸೆಳೆಯಬಹುದಾಗಿದೆ.

ಮೂಲಭೂತ ಸೌಕರ್ಯಗಳಾದ ವಸತಿಗೃಹ, ಹೋಟೆಲ್, ಮಾರುಕಟ್ಟೆ, ಸಾರಿಗೆ ವ್ಯವಸ್ಥೆಯನ್ನು ನಿರ್ಮಾಣ ಮಾಡಿದರೆ ಮತ್ತಷ್ಟು ಹೆಚ್ಚಿನ ಸಂಖ್ಯೆಯಲ್ಲಿ ಪ್ರವಾಸಿಗರನ್ನು ಸೆಳೆಯಲು ಕಾರಣವಾಗುತ್ತದೆ. ಇದರೊಂದಿಗೆ ಸ್ಥಳೀಯ ಆರ್ಥಿಕ ಪ್ರಗತಿಗೆ ಪ್ರೇರಣೆ ದೊರೆಯುತ್ತದೆ. ಸ್ಥಳೀಯ ಪರಿಸರ ಸಂರಕ್ಷಣೆ ಮಾಡುವುದರೊಂದಿಗೆ ಸುಸ್ಥಿರ ಪ್ರವಾಸೋದ್ಯಮ ತಾಣವನ್ನಾಗಿ ಅಭಿವೃದ್ಧಿಪಡಿಸಬಹುದಾಗಿದೆ. ಶಿವಗಂಗೆ ಬೆಟ್ಟದ ಸುತ್ತಲಿನ ನೈಸರ್ಗಿಕ ಸಂಪತ್ತನ್ನು ಕಾಪಾಡುವುದರೊಣದಿಗೆ ಅತ್ಯುತ್ತಮ ಪ್ರವಾಸಿ ತಾಣವನ್ನಾಗಿ ನಿರ್ಮಾಣ ಮಾಡಬಹುದಾಗಿದೆ.

ಇಂತಹ ಪ್ರವಾಸಿ ಪೂರಕವಾದ ಕಾರ್ಯಕ್ರಮಗಳನ್ನು ಮತ್ತು ಯೋಜನೆಗಳನ್ನು ರೂಪಿಸಿ ಜಾರಿಗೊಳಿಸಿದರೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಸರ್ವತೋಮುಖ ಬೆಳವಣಿಗೆಗೆ ಕಾರಣೀಭೂತವಾಗುತ್ತದೆ. ಈಗಾಗಲೇ ಇಲ್ಲಿರುವ ಸಿದ್ದಲಿಂಗೇಶ್ವರ ಮತ್ತು ಮಹ್ಮಮದ್ ಖಾದರ್ ಮತ್ತು ಬಾಬಾಜಾನ್ ದರ್ಗಾಗಳು ರಾಷ್ಟ್ರ ಖ್ಯಾತಿಯನ್ನು ಪಡೆದಿದ್ದು ವರ್ಷವಿಡೀ ನೂರಾರು ಪ್ರವಾಸಿಗರು ಇಲ್ಲಿ ಭೇಟಿ ನೀಡುತ್ತಿದ್ದು, ಮೇಲಿನ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡರೆ ಮತ್ತಷ್ಟು ಪ್ರವಾಸೋದ್ಯಮವನ್ನು ಅಭಿವೃದ್ಧಿಪಡಿಸಲು ಸಹಾಯಕವಾಗುತ್ತದೆ..

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪ್ರವಾಸೋದ್ಯಮ ಕ್ಷೇತ್ರದಿಂದ ನೇರವಾಗಿ ಪ್ರಯೋಜನವನ್ನು ಪಡೆದಿರುವ ಕೆಲವು ಉದ್ಯಮಗಳು ಮತ್ತು ಅವುಗಳಲ್ಲಿ ಉದ್ಯೋಗ ನೀಡಿದ ಸಂಖ್ಯೆಯು ಈ ರೀತಿಯಲ್ಲಿವೆ. ಕೇವಲ ಪ್ರವಾಸಿಗರು ಹೆಚ್ಚಿನ ಸಂಖ್ಯೆಯಲ್ಲಿ ಭೇಟಿ ನೀಡುವಂತಹ ಸ್ಥಳಗಳನ್ನು ಮಾತ್ರ ಪರಿಗಣಿಸಿ ಮಾಡಿದ ಅಧ್ಯಯನದ ಫಲಿತಾಂಶಗಳಾಗಿವೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಹರಡಿಕೊಂಡಿರುವ ನೂರಾರು ಸಂಖ್ಯೆಯ ಪ್ರವಾಸಿ ತಾಣಗಳಲ್ಲಿ ಅಧಿಕ ಸಂಖ್ಯೆಯಲ್ಲಿ ನೇರ ಉದ್ಯೋಗವನ್ನು ನೀಡಿರುವುದು ಈ ಸಂಶೋಧನೆಯ ಕ್ಷೇತ್ರ ಕಾರ್ಯ ಸಂಧರ್ಭದಲ್ಲಿ ಕಂಡು ಬಂದಿದೆ.

## 6.4 ಅಧ್ಯಯನದ ಶೋಧನಾಂಶಗಳು

ಪ್ರಸ್ತುತ ಸಂಶೋಧನೆಯಲ್ಲಿ ಹಲವು ಉದೇಶಗಳನ್ನು ಹೊಂದಿದ್ದು, ಸಂಶೋಧನೆಯನ್ನು ಪ್ರಾರಂಭಿಸಲಾಗಿತ್ತು. ಪ್ರಸ್ತುತ ಈ ಸಂಶೋಧನಾ ಪ್ರಬಂಧವು ಆ ಉದ್ದೇಶಗಳನ್ನು ಈಡೇರಿಸುವ ನಿಟ್ಟಿನಲ್ಲಿ ಹೆಚ್ಚು ಪೂರ್ಣವಾಗಿದೆ ಎನ್ನಬಹುದು. ಆರಂಭದಲ್ಲಿನ ಸಂಶೋಧನಾ ಪ್ರಮೇಯವು ಈ ಸಂಶೋಧನೆಯಲ್ಲಿ ಪೂರ್ಣಗೊಂಡಿರುವ ಬಗ್ಗೆ ಮೇಲೆ ವಿವರಿಸಲಾಗಿದೆ. ಅಲ್ಲದೆ ಈ ಅಧ್ಯಯನದಿಂದ ಹಲವು ಶೋಧನಾಂಶಗಳನ್ನು ಮತ್ತು ಫಲಿತಾಂಶಗಳನ್ನು ಕಂಡುಕೊಳ್ಳಲು ಸಾಧ್ಯವಾಗಿದೆ. ಈಗಾಗಲೇ ಈ ಸಂಶೋಧನೆಯಲ್ಲಿ ಕಂಡುಕೊಳ್ಳಲಾದ ಅಂಶಗಳಲ್ಲಿ ಪ್ರಮುಖವಾದವುಗಳೆಂದರೆ

1. ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಪ್ರವಾಸಿಗರ ಆಗಮನದಿಂದ ಸ್ಥಳೀಯರಲ್ಲಿ ಸಾಮಾಜಿಕ ಮತ್ತು ಸಮಾನತೆಯ ಹೆಮ್ಮೆ ಮತ್ತು ಗೌರವ ಅಧಿಕವಾಗುತ್ತಿದೆ ಹಾಗೂ ಸ್ವಾಭಿಮಾನದ ಬೆಳವಣಿಗೆಯಾಗಲು ಕಾರಣವಾಗಿದೆ.
2. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಂಪರೆಯ ಬಗ್ಗೆ ಅರಿವು ಉಂಟುಮಾಡುವಂತಹ ಧಾರ್ಮಿಕ, ಐತಿಹಾಸಿಕ ಮತ್ತು ಪಾರಂಪರಿಕ ಸ್ಮಾರಕಗಳನ್ನು ಕಾಣಬಹುದಾಗಿದೆ.
3. ಜಿಲ್ಲೆಯಲ್ಲಿ, ಪ್ರವಾಸೋದ್ಯಮದಿಂದ ಸಾಂಸ್ಕೃತಿಕ ಸಮ್ಮಿಲನಕ್ಕೆ ಕಾರಣವಾಗುತ್ತದೆ.
4. ಸ್ಥಳೀಯ ವ್ಯಾಪಾರ ಮತ್ತು ಸಣ್ಣ ಉದ್ಯಮಗಳಿಗೆ ಉತ್ತೇಜನ ದೊರೆಯುತ್ತದೆ.
5. ಜಿಲ್ಲೆಯಲ್ಲಿ, ಪ್ರವಾಸೋದ್ಯಮ ಚಟುವಟಿಕೆಯಿಂದ ಸ್ಥಳೀಯ ಪ್ರವಾಸಿ ಕೇಂದ್ರಗಳಲ್ಲಿ ಜನರ ಮತ್ತು ಪ್ರವಾಸಿಗರ ನಡುವೆ ಉತ್ತಮ ಬಾಂದವ್ಯ ಬೆಳವಣಿಗೆಗೆ ಅವಕಾಶ ನೀಟುತ್ತದೆ.
6. ಪ್ರವಾಸೋದ್ಯಮದಿಂದಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿನ ಸ್ಥಳೀಯ ಮತ್ತು ಪ್ರವಾಸಿ ಕೇಂದ್ರಗಳಲ್ಲಿನ ಪ್ರಕೃತಿಯನ್ನು ಸಂರಕ್ಷಣೆ ಮಾಡಲು ಸಾಧ್ಯವಾಗುತ್ತದೆ.
7. ಪ್ರವಾಸೋದ್ಯಮದಿಂದಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿನ ಭವ್ಯ ಪರಂಪರೆಯನ್ನು ಪ್ರಚಾರಗೊಳಿಸಲು ಸಾಧ್ಯವಾಗುತ್ತದೆ.
8. ಹಲವು ವಿಭಿನ್ನ ರಾಜಮನೆತನಗಳು ಪ್ರಸಿದ್ಧ ಸ್ಥಳಗಳ ಬಗ್ಗೆ ಐತಿಹಾಸಿಕ ಪ್ರಜ್ಞೆ ಬೆಳೆಸುತ್ತಿದೆ.
9. ಸ್ಥಳೀಯ ಮತ್ತು ಅವಲಂಭಿತ ಕೈಗಾರಿಕೆಗಳ ಅಭಿವೃದ್ಧಿಗೆ ಉತ್ತೇಜನ ನೀಡುತ್ತಿದೆ.
10. ತಂತ್ರಜ್ಞಾನ, ವಿಜ್ಞಾನ ಮತ್ತು ಸಾರಿಗೆ–ಸಂಪರ್ಕ ಕ್ಷೇತ್ರಗಳ ಸಂಶೋಧನೆಗೆ ಪ್ರೋತ್ಸಾಹ ದೊರೆಯುತ್ತದೆ.

ಹೀಗಾಗಿ ಪ್ರಸ್ತುತ ಅಧ್ಯಯನ ಮಾಡಿರುವುದರಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿನ ಪಾರಂಪರಿಕ, ಐತಿಹಾಸಿಕ, ಸಾಂಸ್ಕೃತಿಕ, ಪರಿಸರ ಮತ್ತು ಮನರಂಜನೆ, ಶೈಕ್ಷಣಿಕ ಮತ್ತು ಆರೋಗ್ಯ ಹಾಗೂ ಆರ್ಥಿಕ ಪ್ರವಾಸೋದ್ಯಮ ಕ್ಷೇತ್ರಕ್ಕೆ ಕೊಡುಗೆಯನ್ನು ನೀಡುವ ಪ್ರವಾಸಿ ತಾಣಗಳ ಬಗ್ಗೆ ಮಾತ್ರ ಅಧ್ಯಯನ ಮಾಡಲಾಗಿದೆ. ಅವುಗಳು ಹೇಗೆ ಜಿಲ್ಲೆಯ ಮತ್ತು ರಾಷ್ಟ್ರೀಯ ಪ್ರವಾಸೋದ್ಯಮ ಕ್ಷೇತ್ರದೊಂದಿಗೆ, ಸಮಗ್ರ ಪ್ರಗತಿ ಹಾಗೂ ಪ್ರವಾಸೋದ್ಯಮ ಅಭಿವೃದ್ಧಿಯಲ್ಲಿ ಅನುಸರಿಸಬೇಕಾಗಿರುವ ಮಾರ್ಗಗಳನ್ನು ಕಂಡುಕೋಳ್ಳಲಾಗಿದೆ. ಇಂತಹ ಪ್ರವಾಸೋದ್ಯಮ ಬಗೆಗಳಿಂದ ಜಿಲ್ಲೆಯ ವಿಭಿನ್ನ ಕ್ಷೇತ್ರಗಳ ಮೇಲೆ ಉಂಟುಮಾಡುವ ಧನಾತ್ಮಕ ಮತ್ತು ಋಣಾತ್ಮಕ ಪರಿಣಾಮಗಳನ್ನು ಕಂಡುಕೊಳ್ಳಲಾಗಿದೆ. ಜಿಲ್ಲೆಯ ಪ್ರವಾಸೋದ್ಯಮ ಕ್ಷೇತ್ರವನ್ನು ಯೋಜಿತ ರೀತಿಯಲ್ಲಿ, ಸ್ಥಳೀಯ ಮತ್ತು ಪರಂಪರೆಯನ್ನು ಉಳಿಸಿಕೊಂಡು ಅತ್ಯಂತ ಎಚ್ಚರಿಕೆಯಿಂದ ಸುಸ್ಥಿರ ಪ್ರವಾಸೋದ್ಯಮ ಮಾರ್ಗದಲ್ಲಿ ಅಭಿವೃದ್ಧಿಪಡಿಸಬೇಕಾಗಿದೆ.

## ಕರ್ನಾಟಕ ಸರ್ಕಾರದ ಇತ್ತೀಚಿನ ಕಾರ್ಯಕ್ರಮಗಳು

ಪ್ರವಾಸೋಧ್ಯಮ ಇಲಾಖೆಯ ಕಳೆದ ವರ್ಷಗಳಲ್ಲಿ ಪ್ರವಾಸೋಧ್ಯಮ ವಲಯಕ್ಕೆ ಹೊಸ ಕಾಯಕಲ್ಪ ನಿಡುವ ಪ್ರವಾಸಿ ಕ್ಷಿತಿಜ ವಿಸ್ತರಿಸುವ ಪ್ರವಾಸೋಧ್ಯಮದ ನೂತನ ಸಾಧ್ಯತೆಗಳನ್ನು ಅವಿಷ್ಕರಿಸುವ ನಿಟ್ಟಿನಲ್ಲಿ ನಿರಂತರವಾಗಿ ಪ್ರಯತ್ನ ಮಾಡುತ್ತಿರವುದನ್ನು ಕಾಣಬಹುದು. ಅವುಗಳಲ್ಲಿ

1. ರಾಷ್ಟ್ರ ಮಟ್ಟದ ಹಾಗೂ ಅಂತರ ರಾಷ್ಟ್ರೀಯ ವಸ್ತುಪ್ರದರ್ಶನ.
2. ಬೆಂಗಳೂರು, ಮುಂಬೈ, ಹೈದರಾಬಾದ್, ಅಹಮದಾಬಾದ್ ಹಾಗೂ ಕೊಚ್ಚಿನ್ ವಿಮಾನ ನಿಲ್ದಾಣಗಳಲ್ಲಿ ಹೊರಾಂಗಣ ಪ್ರಚಾರ.
3. ಅಂತರ ರಾಷ್ಟ್ರೀಯ ಹಾಗೂ ರಾಷ್ಟ್ರೀಯ ನಿಯಮಕಾಲಿಕೆಗಳಿಲ್ಲಿ ಜಾಹೀರಾತು ಆಂದೋಲನ ಕಾರ್ಯಗಳ ಜೊಗೆಗೆ ಕರ್ನಾಟಕದ ಬಗ್ಗೆಯೂ ಈ ನಿಯತಕಾಲಿಕೆಗಳು ಹಾಗೂ ಜಾಹಿರಾತುಗಳಲ್ಲಿ ಪ್ರಚಾರಮಾಡುವ ಕಾರ್ಯ ಮಾಡಿದರೆ ಕರ್ನಾಟಕವು ಅತ್ಯುನ್ನತ ಪ್ರವಾಸಿತಾಣವಾಗಿ ಅಭಿವೃದ್ಧಿ ಹೊಂದುತ್ತದೆ.

## ಐತಿಹಾಸಿಕ ಮತ್ತು ಸಾಂಸ್ಕೃತಿಕ ಮೂಲ ಸೌಕರ್ಯಗಳು

ಭವ್ಯವಾದ ಕೋಟೆ ಕೊತ್ತಲಗಳು, ಅರಮನೆ, ಸ್ಮಾರಕಗಳು, ವಸ್ತುಸಂಗ್ರಹಾಲಯ ಹಾಗೂ ದೇವಾಲಯ ಮೊದಲಾದವುಗಳು ಪ್ರೇಕ್ಷಕರನ್ನು ಆಕರ್ಷಿಸುವ ಪ್ರಮುಖ ಐತಿಹಾಸಿಕ ಸ್ಥಳಗಳಾಗಿವೆ. ಇದು ಯಾವುದೇ ಒಂದು ಜನಾಂಗ ಅಥವಾ ದೇಶಕ್ಕೆ ಸೀಮಿತವಾಗಿರದೆ ಇಡೀ ಮನುಕುಲದ ಸಂಪತ್ತಾಗಿ ಪರಿಗಣಿಸಲ್ಪಟ್ಟಿದೆ. ಇಂತಹ ಐತಿಹಾಸಿಕ ಮತ್ತು ಸಾಂಸ್ಕೃತಿಕ ಸಂಪತ್ತನ್ನು

ಹೊಂದಿರುವ ಪ್ರದೇಶಗಳು ಐತಿಹಾಸಿಕ ಪ್ರವಾಸೋದ್ಯಮದ ಬೆಳವಣಿಗೆಗೆ ಪೂರಕವಾದ ಮೂಲಸೌಕರ್ಯಗಳನ್ನು ಅಭಿವೃದ್ಧಿಪಡಿಸುವಲ್ಲಿ ಮುಂಚೂಣಿಯಲ್ಲಿರುತ್ತದೆ.

**ಹೆದ್ದಾರಿ ಮಾರ್ಗಸೂಚನಾ ಫಲಕಗಳು**

ಸಾಮಾನ್ಯವಾಗಿ ಪ್ರವಾಸಿಗರು ಅನ್ಯರಾಜ್ಯ, ಅನ್ಯದೇಶಗಳಿಂದ ಬರುವವರು, ಅನ್ಯಭಾಷೆ ಇಲ್ಲಿಯ ಪ್ರದೇಶಗಳಿಗೆ ಸೇರಿದವರಾಗಿರುತ್ತಾರೆ. ಅವರು ಪ್ರವಾಸವನ್ನು ಹಗಲು ವೇಳೆಯಲ್ಲದೆ ಕೆಲವೊಮ್ಮೆ ರಾತ್ರಿವೇಳೆಯಲ್ಲೂ ಸಹ ಪ್ರಯಾಣಿಸುತ್ತಾರೆ. ತಾವು ತಲುಪಬೇಕಾದ ಸ್ಥಳ ಮುಂದೆ ಸಿಗಬಹುದಾದ ಉಪಹಾರ ಕೇಂದ್ರ ಆಸ್ಪತ್ರೆಗಳು, ಆಸ್ಪತ್ರೆಗಳು, ಇಂಧನ, ಮೊದಲಾದ ಮಾಹಿತಿಗಳನ್ನು ರಸ್ತೆ ಬದಿಯ ಫಲಕಗಳಲ್ಲಿ ಸೂಚಿಸಿದರೆ ಪ್ರವಾಸಿಗರ ಸಂಚಾರಕ್ಕೆ ಅನುಕೂಲವಾಗುತ್ತದೆ. ಅಂತಹ ಫಲಕಗಳು ಸ್ಥಳಿಯ ಭಾಷೆಯಲ್ಲಿ ಮಾತ್ರವಲ್ಲದೆ, ಹಿಂದಿ ಮತ್ತು ಇಂಗ್ಲೀಷ್ ಮುಂತಾದ ಭಾಷೆಗಳಲ್ಲಿ ಇರಬೇಕು. ಆದ್ದರಿಂದ ಅನ್ಯ ಭಾಷಿಕರಾದ ಪ್ರವಾಸಿಗರಿಗೆ ಅನುಕೂಲವಾಗುತ್ತದೆ ಮತ್ತು ಅವರ ಭಾಷೆಯಲ್ಲಿರುವುದರಿಂದ ಅವರಿಗೆ ಸುಲಭವಾಗಿ ಅರ್ಥವಾಗುತ್ತದೆ. ಇದರಿಂದ ಪ್ರವಾಸೋದ್ಯಮ ಉತ್ತಮ ಮಟ್ಟದಲ್ಲಿ ಮುಂದುವರೆಯುತ್ತದೆ.

* * * * * * * * * * * * * * *

## ಗ್ರಂಥಋಣ


1. ಅರುಣ. ಎಸ್.ಕೆ, 2007, *ಯಲಹಂಕ ನಾಡಪ್ರಭುಗಳ ವಾಸ್ತುಶಿಲ್ಪ,* ಶಿಲ್ಪಕಲೆ, ಪ್ರಸರಾಂಗ, ಬೆಂಗಳೂರು.
2. ಅನಿಸ್‌ಸಿರಾಜು. ಎನ್, 2011, *ಕರ್ನಾಟಕ ರಾಜ್ಯ ಗೆಜೆಟಿಯರ್,* ಬೃಂದಾವನ ಮುದ್ರಣ, ಬೆಂಗಳೂರು.
3. ಅನಂತ ರಂಗಚಾರ್. ಎನ್, 1984, *ಭಾರತೀಯ ದೇವಾಲಯಗಳು ಮತ್ತು ಸಂಸ್ಕೃತಿ,* ಸ್ವಚ್ಛಂದ ಪ್ರಕಾಶನ, ಮೈಸೂರು.
4. ಅಪರ್ಣ ಕೂ.ಸ, 1999, *ದೇವಾಲಯ ವಾಸ್ತುಶಿಲ್ಪ ಪರಿಚಯ ಪ್ರಸರಾಂಗ,* ಕನ್ನಡ ವಿಶ್ವವಿದ್ಯಾಲಯ, ಹಂಪಿ.
5. ಬಸವರಾಜ ಸಬಿರದ, 2002, *ಸಮುದಾಯ ಮತ್ತು ಸಂಸ್ಕೃತಿ,* ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
6. ಬಿಲ್ಲಿನ ನಂದ. ಜೆ, 2001, *ಪಾರಂಪರಿಕ ಶಿಲ್ಪ ಸೆನ್ನೆ – ನಾಳೆ ಸಂಸ್ಕೃತಿ ಸಾಹಿತ್ಯ* ಪ್ರತಿಷ್ಠಾನ, ಬೆಂಗಳೂರು.
7. ಬೆಂಗಳೂರು ಗ್ರಾಮಾಂತರ ಜಿಲ್ಲಾ ಅಡವಿ ಅಂಶಗಳ ನೋಟ, 2019, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಬೆಂಗಳೂರು ಉತ್ತರ ತಾಲ್ಲೂಕು.
8. ಚಂದ್ರಶೇಖರ್. ಎಸ್, 2006, *ವಸಹಾತು ಕಾಲೀನ ಕರ್ನಾಟಕ,* ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.
9. ಚಂದ್ರಶೇಖರ್ ಟಿ.ಆರ್, 2012, *ಕರ್ನಾಟಕ ಜನಗಣತಿ* – ಪ್ರಸರಾಂಗ, ಹಂಪಿ ಕನ್ನಡ ವಿಶ್ವವಿದ್ಯಾಲಯ, ಹಂಪಿ.
10. ಚಂದ್ರಶೇಖರ್. ಎನ್, 2018, *ಕರ್ನಾಟಕ ಗೆಜೆಟಿಯರ್,* ಕರ್ನಾಟಕ ಸರ್ಕಾರ ಬೆಂಗಳೂರು.
11. ಚಂದ್ರ ಪ್ರಭಾವಿ. ಎಂ, 2005, *ಸಂಶೋಧಕರು ಮತ್ತು ಕ್ಷೇತ್ರಕಾರ್ಯ* ಪ್ರಸರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.
12. ದೇವರ ಕೊಂಡರೆಡ್ಡಿ, 2008, *ಗಂಗರ ಶಿಲ್ಪಕಲೆ,* ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು.
13. ದೇವರಾಜು. ಎಂ.ಎಲ್, *ತಲಕಾಡಿನ ಗಂಗರು ಮತ್ತು ಸಮಕಾಲೀನ ರಾಜಮನೆತನಗಳು ಪರಸ್ಪರ ಸಂಬಂಧಗಳ ಒಂದು ಅಧ್ಯಯನ* ಅಪ್ರಕಟಿತ ಮಹಾಪ್ರಬಂಧ.

14. ದೇವರ ಕೊಂಡರೆಡ್ಡಿ, 1999, ಅರಸುನಾಡು, *ಪ್ರಾಚೀನ ಕರ್ನಾಟಕದ ಆಡಳಿತ ವಿಭಾಗಗಳು*, ಕನ್ನಡ ವಿಶ್ವವಿದ್ಯಾಲಯ, ಹಂಪಿ.

15. ದೇವರ ಕೊಂಡರೆಡ್ಡಿ, 1994, *ತಲಕಾಡಿನ ಗಂಗರ ದೇವಾಲಯಗಳು*, ಬೆಂಗಳೂರು ಕನ್ನಡ ವಿಶ್ವ ವಿದ್ಯಾಲಯ, ಹಂಪಿ.

16. ದೇವರ ಕೊಂಡರೆಡ್ಡಿ, 2008, *ಗಂಗರ ಶಿಲ್ಪಕಲೆ*, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು.

17. ಗೋವಿಂದಯ್ಯ. ಟಿ, 1992, *ಕರ್ನಾಟಕ ನೀರಾವರಿ ಅರ್ಥಶಾಸ್ತ್ರ*, ಸಮಾಜ ವಿಜ್ಞಾನ ಪರಿಶೋಧನಾ ಸಂಸ್ಥೆ, ಬೆಂಗಳೂರು.

18. ಗೋಪಾಲ್. ಟಿ.ಆರ್, ಗೋಪಾಲ್‌ರಾವ್ ಹೆಚ್.ಎನ್, ಕೃಷ್ಣಮೂರ್ತಿ. ವಿ.ವಿ, 2000, *ತಮಿಳುನಾಡಿನ ಕನ್ನಡ ಶಾಸನಗಳು*, ಹಂಪಿ.

19. ಗುಡ್ಡದೇಶ್ವರಪ್ಪ. ಹೆಚ್, 2010, *ಬೆಂಗಳೂರು ಜಿಲ್ಲೆಯ ಶಾಸನಗಳ ಸಂಸ್ಕೃತಿಕ ಅಧ್ಯಯನ* ಮುದ್ರಣ ಪ್ರಕಾಶನ, ಚಿತ್ರದುರ್ಗ.

20. ಗೋಪಾಲ್.ಆರ್, 2010, *ನಾಡಪ್ರಭು ಕೆಂಪೇಗೌಡರ ಜೀವನ ಮತ್ತು ಸಾಧನೆಗಳು*, ಪ್ರಾಚ್ಯ ವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಮೈಸೂರು.

21. ಗುರುರತ್ನಬಾಬು. ಡಿ, 2007, *ತಲಕಾಡಿನ ಗಂಗರಸರ ಸಾಂಸ್ಕೃತಿಕ ಪರಂಪರೆ* ಸಂಜಯ್ ಪ್ರಕಾಶನ, ಮೈಸೂರು.

22. ಹಿರೇಮಠ. ಬಿ.ಆರ್, 1986, *ಶಾಸನಗಳಲ್ಲಿ ಕರ್ನಾಟಕದ ವರ್ತಕರು* ಪ್ರಸರಾಂಗ ಕರ್ನಾಟಕ

23. ವಿಶ್ವವಿದ್ಯಾಲಯ, ಧಾರವಾಡ.

24. ಹಿರೇಮಠ. ಎಂ.ಎಸ್, 2005, *ಶಾಸನ ಪರಿಭಾಷೆ*, ವಿದ್ಯಾನಿಧಿ, ಪ್ರಕಾಶನ, ಗದಗ.

25. ಹಿರೇಮಠ. ಆರ್.ಸಿ, 1974, *ಕನ್ನಡ ಶಾಸನ* ಸಂಪದ ಪ್ರಸರಾಂಗ ಕರ್ನಾಟಕ ವಿಶ್ವವಿದ್ಯಾಲಯ.

26. ಹುಸೇನಪ್ಪ ವೆಸಿಯಾರ್, 2020, *ಭಾರತದಲ್ಲಿರುವ ರಾಜ್ಯಗಳ ವಿಶೇಷವಾಗಿ ಕರ್ನಾಟಕ*, ಸಂಪಿಗೆ ಪ್ರಕಾಶನ, ಸಿಂದನೂರು

27. ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮದಾಯಿ ದತ್ತಿಗಳ ಇಲಾಖೆ, ನಂ. R.D/77/MGT/2003 ದಿನಾಂಕ: 30/04/2003, ಬೆಂಗಳೂರು.

28. ಜಯದೇವ್. ಹೆಚ್.ಕೆ, 2000, *ಶಾಸನ ಮತ್ತು ಗದ್ಯಪ್ರಸರಾಂಗ*, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.
29. ಕನ್ನಡ ವಿಷಯ ವಿಶ್ವಕೋಶ, 2009, *ಇತಿಹಾಸ ಮತ್ತು ಪುರತತ್ವ*, ಕುವೆಂಪು ಕನ್ನಡ ಅಧ್ಯಯನ ಸಂಗ್ರಹ, ಮೈಸೂರು ವಿಶ್ವವಿದ್ಯಾಲಯ.
30. ಕಾಮತ್. ಎಸ್, 2006, *ಕರ್ನಾಟಕ ಇತಿಹಾಸದ ಹಲವು ಮುಖಗಳು*, ಕರ್ನಾಟಕ ಸರ್ಕಾರ, ಬೆಂಗಳೂರು ಮುದ್ರಣಾಲಯ, ಬೆಂಗಳೂರು
31. ಕೃಷ್ಣರಾವ್, 1964, *ಬೆಂಗಳೂರು ಕೆಂಪೇಗೌಡ*, ಬೆಂಗಳೂರು ನಗರ, ಕಾರ್ಪೋರೇಷನ್.
32. ಕೊಟ್ರೇಶ. ಎಂ, 2011, *ಬಳ್ಳಾರಿ ಜಿಲ್ಲೆಯ ಕೋಟೆಗಳು*, ಪ್ರಸರಾಂಗ ಹಂಪಿ, ಕನ್ನಡ ವಿಶ್ವವಿದ್ಯಾಲಯ.
33. ಕಾಮತ್. ಎಸ್, 1990, *ಬೆಂಗಳೂರು ಜಿಲ್ಲಾ ಗೆಜೆನಿಯರ್*, ಕರ್ನಾಟಕ ಸರ್ಕಾರ ಬೆಂಗಳೂರು.
34. ಕಾಮತ್.ಎಸ್, ಕೃಷ್ಣಯ್ಯ ಎಂ. ಹೆಚ್, 2005, *ಬೆಂಗಳೂರು ದರ್ಶನ*, ಬೆಂಗಳೂರು.
35. ಶ್ರೀ ಕಂಠಯ್ಯ 1961, *ಕೆಂಪೇಗೌಡನ ಪ್ರಶಸ್ತಿ*, ಬೆಂಗಳೂರು ಮುದ್ರಣಾಲಯ, ಬೆಂಗಳೂರು.
36. ಕಲಬುರ್ಗಿ. ಎಂ.ಎಂ, 2015, *ಕನ್ನಡ ಸಂಶೋಧನಾ ಶಾಸ್ತ್ರ*, ಸ್ವಪ್ನ ಬುಕ್ ಹೌಸ್, ಬೆಂಗಳೂರು.
37. ಕಲಬುರ್ಗಿ. ಎಂ.ಎಂ, 2015, *ಕನ್ನಡ ಸಂಶೋಧನಾ ಶಾಸ್ತ್ರ,* ಸ್ವಪ್ನ ಬುಕ್ ಹೌಸ್, ಬೆಂಗಳೂರು.
38. ಕೃಷ್ಣರಾವ್. ಎಂ.ವಿ ಮತ್ತು ಕೇಶವಭಟ್ಟ, 1970, *ಕರ್ನಾಟಕ ಇತಿಹಾಸ ದರ್ಶನ,* ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ, ಚಾಮಮರಾಜಪೇಟೆ, ಬೆಂಗಳೂರು.
39. ಕೂಟ್ಟಿ. ಎ.ಆರ್, 1987, *ಗ್ರಾಮಾಂತರ ಪ್ರದೇಶದ ಮಾರುಕಟ್ಟೆಯ ಮಹತ್ವ* ಪ್ರಸರಾಂಗ, ಕನ್ನಡ ವಿಶ್ವವಿದ್ಯಾಲಯ, ಧಾರವಾಡ.
40. *ಕರ್ನಾಟಕದ ಪರಂಪರೆ* ಸಂಪುಟ– 1, 2006, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.
41. ಕೇಶವ ನಾಯ್ಕ. ಹೆಚ್.ಪಿ, 1998, *ವಿಜಯನಗರ ಆಡಳಿತದಲ್ಲಿ ಉಳಿಗಮಾನ್ಯ ಕೆಲವೊಂದು ಅಂಶಗಳು*, ಮೈಸೂರು ವಿಶ್ವವಿದ್ಯಾಲಯ, ಮೈಸೂರು.
42. *ಕರ್ನಾಟಕ ಆರ್ಥಿಕ ಸಮೀಕ್ಷೆ,* 2018, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖಿಕ ಇಲಾಖೆ ಕರ್ನಾಟಕ ಸರ್ಕಾರ.

43. ಲಕ್ಷ್ಮೀದೇವಿ. ಎಲ್, 2000, *ಬೇಟೆ ಪರಂಪರೆ ಬೇಡರ ಸಂಸ್ಕೃತಿ*, ಕನ್ನಡ ವಿಶ್ವವಿದ್ಯಾಲಯ, ಹಂಪಿ.

44. ಲಿಂಗಯ್ಯ. ಪಿ, 2004, *ಯಲಹಂಕ ನಾಡಪ್ರಭುಗಳು*, ಜಾನಪದ ಆಕರ, ಬೆಂಗಳೂರು.

45. ಮಂಜುನಾಥ. ಎಂ.ಜಿ, 2006 *ಯಲಹಂಕ ನಾಡಪ್ರಭುಗಳ ಶಾಸನ*, ಕೆಂಪೇಗೌಡ ಅಧ್ಯಯನ ಪೀಠ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

46. ಮೂರ್ತಿಶ್ವರಯ್ಯ, 2015, *ದೇವನಹಳ್ಳಿ ತಾಲ್ಲೂಕು ಪರಿಚಯ*, ಶೃಂಗೇರಿ ಶಾರದಾ ಪ್ರಕಾಶನ,

47. ಬೆಂಗಳೂರು.

48. ಮಂಜುನಾಥ. ಎಂ.ಜಿ, 2008, *ಶಾಸನ ಪರಿಶೋಧನೆ.* ಪ್ರಸಾದ್ ಎಜೆನ್ಸಿಸ್, ಮೈಸೂರು.

49. ನಂಜುಂಡರಾವ್. ಎಂ. ಎನ್, 2000, *ಕರ್ನಾಟಕ ತೊಗಲು ಗೊಂಬೆ*, ಕರ್ನಾಟಕ ಚಿತ್ರಕಲಾ ಪರಿಷತ್, ಬೆಂಗಳೂರು.

50. ನಾಗರಾಜು. ಎಂ.ಜಿ, 1999, *ಶಾಸನಗಳ ಹಿನ್ನೆಲೆಯಲ್ಲಿ ಬೆಂಗಳೂರು ಜಿಲ್ಲೆ*, ಬೆಂಗಳೂರು.

51. ನಾಗರಾಜ್. ಎಂ.ಜಿ, 1979, *ರಾಮನಗರ ತಾಲ್ಲೂಕಿನ ಕೆಲವು ಪುರಾತನ ಪವಿತ್ರ ಕ್ಷೇತ್ರಗಳು*, ಭಾರತೀಯ ಸಂಸ್ಕೃತಿ, ವಿದ್ಯಾಪೀಠ ಸ್ಮರಣ ಸಂಚರ, ರಾಮನಗರ.

52. ನಂದಮೂರ್ತಿ. ಎಂ, 2011, *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ* ಸ್ವಪ್ನ ಬುಕ್‌ಹೌಸ್,

53. ಬೆಂಗಳೂರು.

54. ನಾಯಕ. ಹಾ ಮಾ, 1975, *ಕನ್ನಡ ಸಾಹಿತ್ಯ ಚರಿತ್ರೆ*, ಸಂಪುಟ– 2 ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿಶ್ವವಿದ್ಯಾಲಯ, ಮೈಸೂರು.

55. ನಾಗರಾಜಯ್ಯ, 2003, *ಕರ್ನಾಟಕದ ಜಾತ್ರೆಗಳು*, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

56. ಪ್ರಹ್ಲಾದ್ ರಾವ್. ಕೆ, 1983, *ಕೋಲಾರದ ಸುತ್ತಮುತ್ತಲಿನ ದೇವಾಲಯಗಳು*, ಕೋಲಾರ ಪತ್ರಿಕಾ ಪ್ರಕಾಶನ, ಕೋಲಾರ.

57. ಪ್ರವಾಸೋದ್ಯಮ ಇಲಾಖೆಯ ವರದಿ, 2013, ಕರ್ನಾಟಕ ಸರ್ಕಾರ.

58. ಶಿರೂರ್. ಬಿ.ಎ, 2008, *ಸಂಶೋಧನಾ ಸ್ವರೂಪ* ಅನ್ನಪೂರ್ಣ ಪ್ರಕಾಶನ, ಹುಬ್ಬಳ್ಳಿ.

59. ರಂಗಸ್ವಾಮಿ. ಎಸ್, 1999, *ಕರ್ನಾಟಕದ ದೇವಾಲಯಗಳು*, ಪಂಪಧ್ವನಿ ಪ್ರಕಾಶನ, ಬೆಂಗಳೂರು.

60. ರಾಧಾಕೃಷ್ಣ. ಬಿ.ಪಿ, 2003, ಕರ್ನಾಟಕದ ಖನಿಜ ಸಂಪತ್ತು, ಜಿಯೋಲಾಜಿಕಲ್ ಸರ್ವೇಆಫ್ ಇಂಡಿಯಾ, ಬೆಂಗಳೂರು.

61. *ರಾಜ್ಯ ಸಂರಕ್ಷಿತ ಸ್ಮಾರಕಗಳು ಮತ್ತು ಪುರತತ್ವ ನೆಲೆಗಳ ನಿರ್ದೇಶಿಕೆ*, 2003, ಕರ್ನಾಟಕ ರಾಜ್ಯ ಪ್ರಾಚ್ಯ ವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಬೆಂಗಳೂರು.

62. ರಾಜೇಗೌಡ .ಎ .ಕೆ, 1994, *ಕೆಂಪೇಗೌಡರ ಜೀವನ ಚರಿತ್ರೆ,* ಯಲಹಂಕ ಪ್ರಭುಗಳ ಹಿಂದೂ ಅಧ್ಯಯನ, ಮಂಡ್ಯ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಮಂಡ್ಯ.

63. ರಂಗಸ್ವಾಮಿ, 1990, *ಕರ್ನಾಟಕ ದೇವಾಲಯಗಳು,* ಹಂಸಧ್ವನಿ ಪ್ರಕಾಶನ, ಬೆಂಗಳೂರು.

64. ರಾಜಶೇಖರಪ್ಪ. ಬಿ, 2001, *ಇತಿಹಾಸ ಕಥನ*, ಸಿ.ವಿ.ಜಿ ಪಬ್ಲಿಕೇಷನ್ಸ್, ಬೆಂಗಳೂರು

65. ರಾಮೇಗೌಡ, 1994, *ಯಲಹಂಕ ಪ್ರಭುಗಳು*, ಒಂದು ಅಧ್ಯಯನ, ಬೆಂಗಳೂರು ಮುದ್ರಣಾಲಯ ಬೆಂಗಳೂರು.

66. ರಾಜೇಂದ್ರಪ್ಪ. ಎನ್ ಮತ್ತು ಸುಜಾತ, 1981, *ಮಾಗಡಿ ಪಾಳೇಗಾರರ ಆಳ್ವಿಕೆಯಲ್ಲಿ ಕೃಷಿಪದ್ಧತಿ*, ಸ್ವಾತಂತ್ರ್ಯ ಪೂರ್ವ ಕರ್ನಾಟಕದಲ್ಲಿ ಕೃಷಿ,ಮೈಸೂರು ವಿಶ್ವವಿದ್ಯಾಲಯ, ಮೈಸೂರು

67. ರಾಮೇಗೌಡ, ಚಂದ್ರಶೇಖರಯ್ಯ ಎಂ.ಜಿ, *ಬೆಂಗಳೂರು ಬಾಗಿನ* ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

68. ರಾಮಲಿಂಗೇಶ್ವರ. ಎಸ್, 2010, *ಬೆಂಗಳೂರು ಗ್ರಾಮಾಂತರ ಜಿಲ್ಲಾ ಪ್ರಾತಿನಿಧಿಕ ಕಥಾ ಸಂಕಲನ*, ಬೆಂಗಳೂರು ಗ್ರಾಮಾಂತರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

69. ರಾಮಚಂದ್ರನ್. ಸಿ.ಎನ್, 2013, *ಸಾಹಿತ್ಯ ವಿಮರ್ಶೆ ಮತ್ತು ವಸಹಾತ್ತೋತ್ತಿರ ಚಿಂತನೆ*, ಅಂಕಿತ ಪುಸ್ತಕ, ಪ್ರಕಾಶನ ಬಸವನಗುಡಿ, ಬೆಂಗಳೂರು

70. ರೆಹಮತ್ ತರೀಕೆರೆ, 2008, *ಸಾಂಸ್ಕೃತಿಕ ಅಧ್ಯಯನ* ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

71. ರಾಮಚಂದ್ರರಾವ್. ಎಸ್.ಕೆ, 1983, *ಕನ್ನಡನಾಡಿನ ಧಾರ್ಮಿಕ ಪರಂಪರೆ*, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

72. ರಂಗಸ್ವಾಮಯ್ಯ.ಜಿ.ಆರ್, 1992, *ಕರ್ನಾಟಕ ಸಂಕ್ಷಿಪ್ತ ಚರಿತ್ರೆ*, ಅನಂತ ಪ್ರಕಾಶನ, ಮೈಸೂರು.

73. ರಾಮಚಂದ್ರರಾವ್. ಎಸ್.ಕೆ, 1983, *ಕನ್ನಡ ನಾಡಿನ ಧಾರ್ಮಿಕ ಪರಂಪರೆ*, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

74. ರಾಮಚಂದ್ರರಾವ್. ಎಸ್.ಕೆ, 1975, *ಮೂರ್ತಿಶಿಲ್ಪ ನೆಲೆ ಹಿನ್ನೆಲೆ* ಪ್ರಸರಾಂಗ, ಬೆಂಗಳೂರು
75. ವಿಶ್ವವಿದ್ಯಾಲಯ, ಬೆಂಗಳೂರು.
76. ರಾಜಪ್ಪ ದಳವಾಯಿ, 1993, *ಸಂಸ್ಕೃತಿ ಕನ್ನಡ ಸಾಹಿತ್ಯ* ಅಕಾಡೆಮಿ, ಬೆಂಗಳೂರು.
77. ಶೇಕ್ ಅಲಿ, 1997, *ಕರ್ನಾಟಕದ ಚರಿತ್ರೆ ಸಂಪುಟಗಳು*,ಕನ್ನಡ ವಿಶ್ವವಿದ್ಯಾಲಯಗಳು, ಹಂಪಿ.
78. ಶೇಷಶಾಸ್ತ್ರಿ. ಆರ್, 2004, *ಕರ್ನಾಟಕ ವೀರಗಲ್ಲುಗಳು*, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
79. ಕಾಮತ್. ಎಸ್, 2014, *ಕರ್ನಾಟಕದ ಸಂಕ್ಷಿಪ್ತ ಇತಿಹಾಸ*, ಎಂ.ಸಿ.ಸಿ. ಪ್ರಕಾಶನ.
80. ಶಿವತಾರಕ್, 2001, *ಕರ್ನಾಟಕ ಪರತತ್ವ ನೆಲೆಗಳು*, ಪ್ರಸರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.
81. ಬೇಗಂ ಷರಿಸೀನಾ, 2000, *ಕರ್ನಾಟಕ ಮುಸ್ಲಿಂ ಜನಪದ*, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.
82. ರಾವ್ ಸುಂದರ್, 1983, *ಬೆಂಗಳೂರಿನ ಭವ್ಯ ಇತಿಹಾಸ*, ಬೆಂಗಳೂರು ಮುದ್ರಣಾಲಯ, ಬೆಂಗಳೂರು.
83. ರಾವ್‌ಸುಂದರ್, 1995, *ಬೆಂಗಳೂರು ಇತಿಹಾಸ* ಬೆಂಗಳೂರು ಮುದ್ರಣಾಲಯ, ಬೆಂಗಳೂರು.
84. ಸತ್ಯ ನಾರಾಯಣ. ಎ, 1996, *ಹಿಸ್ಟರಿ ಆಫ್ ಒಡೆಯರ್ಸ್ ಆಫ್ ಮೈಸೂರು*, ಪ್ರಾಚ್ಯ ವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನ, ಮೈಸೂರು.
85. ಶಿವಣ್ಣ. ಕೆ.ಎನ್, 1997, *ಕರ್ನಾಟಕ ಚರಿತ್ರೆ*, ಸಂತೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
86. ಸತ್ಯ. ಬಿ.ಎ, 1989, *ರಾಜ್ಯ ಗೆಜೆಟಿಯರ್*, ಸರ್ಕಾರ ಮುದ್ರಣ, ಬೆಂಗಳೂರು.
87. ಸುಂದರ. ಎ, 2009, *ಕನ್ನಡ ವಿಷಯ ವಿಶ್ವಕೋಶ*, ಕುವೆಂಪು ಅಧ್ಯಯನ ಕೇಂದ್ರ, ಮೈಸೂರು.
88. ಸಿದ್ದಗಂಗಯ್ಯ ಕುಂಬಾಳು, 2018, *ಶ್ರೀ.ಶಿವಗಂಗಾ ಕ್ಷೇತ್ರದ ಐತಿಹಾಸಿಕ ದಾಖಲೆಗಳು*, ಕರ್ನಾಟಕ ರಾಜ್ಯ ಪತ್ರಗಾರ ಇಲಾಖೆ, ಬೆಂಗಳೂರು
89. ಸಾಲುತ್ತೊರೆ. ಬಿ.ಎ, ಮತ್ತು ದೇಸಾಯಿ. ಪಿ.ಬಿ, 1953, *ಕನ್ನಡ ನಾಡಿನ ಚರಿತ್ರೆ*, ಬೆಂಗಳೂರು
90. ಮುದ್ರಣಾಲಯ, ಬೆಂಗಳೂರು.

91. ಶಿವರಾಮು. ಎಸ್, ಲಿಂಗರಾಜು ಲಿಂಗರಾಜು ತಂಡಸನಹಳ್ಳೀ, 2014, *ಗಂಗರು ಚರಿತ್ರೆ ಮತ್ತು ಕೊಡುಗೆಗಳು*, ಕರ್ನಾಟಕ ಸಂಘ ಎಂ.ಎಲ್ ಶ್ರೀಕಂಠೇಗೌಡ, ಸಂಶೋಧನಾ ಕೇಂದ್ರ, ಮಂಡ್ಯ.

92. ಸಿದ್ದಲಿಂಗಯ್ಯ, 2004, *ಗ್ರಾಮ ದೇವತೆಗಳು*, ಮೂಲ ಪ್ರಕಾಶನ, ಬೆಂಗಳೂರು.

93. ಶೇಷಶಾಸ್ತ್ರಿ. ಆರ್, 2005, *ಶಾಸನ ಪರಿಚಯ* ಪ್ರಸರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

94. ಶೇಷಶಾಸ್ತ್ರಿ. ಆರ್, 2004, *ಕರ್ನಾಟಕದ ವೀರಗಲ್ಲುಗಳು* ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

95. ಶಂಕರ್‌ರಾವ್. ಚ. ನ, 2003, *ಭಾರತೀಯ ಸಮಾಜ ಚಿಂತನೆ* ಜೈ ಭಾರತ್ ಪ್ರಕಾಶನ, ಮಂಗಳೂರು.

96. ಶ್ರೀಧರ್ ಆಡಿಗ, 2013, *ಕರ್ನಾಟಕ ಪ್ರೇಕ್ಷಣೀಯ ಸ್ಥಳಗಳು*, ಪ್ರಾಚೀನ ಪ್ರಕಾಶನ, ಬೆಂಗಳೂರು.

97. ತುಳಸಿ ರಾಮನಾಯಕ್, 2010, *ಬೆಂಗಳೂರಿನ ಸಂಕ್ಷಿಪ್ತ ಇತಿಹಾಸ*, ಬೆಂಗಳೂರು.

98. ತಿಪ್ಪೇರುದ್ರಸ್ವಾಮಿ. ಎಚ್, 1948, *ಕರ್ನಾಟಕ ಸಂಸ್ಕೃತಿ ಸಮೀಕ್ಷೆ*, ಗೀತ ಬುಕ್‌ಹೌಸ್, ಮೈಸೂರು.

99. ತಾರಾನಾಥ್. ಎಸ್. ಎಸ್, 1998, *ಶತಮಾನದ ಸಂಶೋಧನೆ* ಕರ್ನಾಟಕದ ಸಾಹಿತ್ಯ ಅಕಾಡೆಮಿ, ಬೆಂಗಳೂರು.

100. ವಸು. ಎಂ. ವಿ, 2001, *ಕರ್ನಾಟಕ ಅರಸು ಮನೆತನಗಳು* ಪ್ರಸರಾಂಗ, ಹಂಪಿ ಕನ್ನಡ ವಿಶ್ವವಿದ್ಯಾಲಯ.

101. ವೆಂಕಟೇಶ್ ಎಸ್, 2016, *ದೊಡ್ಡಬಳ್ಳಾಪುರ ಚಾರಿತ್ರಿಕ ಅಧ್ಯಯನ* ದೃಶ್ಯಪ್ರಕಾಶನ ದೊಡ್ಡಬಳ್ಳಾಪುರ

102. ವೀರಭದ್ರಪ್ಪ, 2018, *ಕರ್ನಾಟಕ ಪ್ರವಾಸೋದ್ಯಮದ ಇತಿಹಾಸ ಒಂದು ಅವಲೋಕನ*, ಸಂಚಿಕ ಪ್ರಕಾಶನ, ಬೆಂಗಳೂರು.

103. ಯೋಗೀಶ್ವರಪ್ಪ. ಡಿ.ಎನ್, 2009, *ಮಧ್ಯಕಾಲೀನ ಕರ್ನಾಟಕದ ಪಾಳೇಯಗಾರರು*, ಧಾತ್ರಿ ಪುಸ್ತಕ ಮಾಲೆ, ಬೆಂಗಳೂರು

104. Aiyangar, S.K,1923,‘*Some Contributions of South India to Indian Culture*’. The University of Calcutta.

105. Battacharya Bhabani,1980,'*Glimpses of Indian History*', Sterling Publishers, Bangalore.
106. Bhardwj, B.K, (ed.), '*The Karnataka Hand Book'*, B.S. Iyangar Publications, Bangalore.
107. Bhatia, A.K, 1998,'*Tourism Development, Principle and Practices*', Sterling Publishers New Delhi.
108. Bhatia, A.K,1998, '*Tourism in India – History and Development*', Sterling Publishers, New Delhi.
109. *Brief Industrial profile of Kolar District* Govt. of India MSMF Bangalore 2012.
110. *Highlights of Chikkabalapura District Industrial Development Plan* 2006-2011Govt of India, Bangalore.
111. *Highlights of Kolar District Industrial Development Plan* 2006-2011, MSME Govt. of India, Bangalore
112. *Industrial Perspective Plans of Talukus in Kolar and Chikkabalapura District* 2006 - 2011, SISI, Govt, of India.
113. *Karataka Global Investors Meet*–2010, Chikkaballapura District Profile, Govt. of Karnataka.
114. *Karnataka Global investors Meet* -2010, Kolar District profile Govt of Karnataka.
115. *Karnataka Global Investors Meet*-2010, Chikkaballapura District Sector Profiles of Industries & Horticulture, Govt. of Karnataka.
116. *Karnataka Global Investors meet*, 2012, Kolar District profile, Govt, of Karnataka.
117. *Karnataka Tourism Vision Group Recommendations* to the Govt, of Karnataka, 2014.
118. *National Rural Health Mission* Document, of 2005-2012, Govt, of India, New Delhi.
119. *Reports of Agricultural products*,2010, Kolar District, APMC,

120. *Reports of health and Family welfare Department*, Govt, of Karnataka 2014.

121. *Registration Reports of SSI & MSME Units in Districts* of Karnataka 2011, Govt. of Karnataka.

122. *Report of Eco – Tourism Feasibility at Various Locations* in Karnataka 2009, IDCK, Govt of Karnataka.

123. *Report of Evaluon of the Scheme of Financial Assistance* to States for Development of Tourist Circuits Destinations, Ministry of Tourism Govt. of India.

124. *Reports of Excise Department* from 2008 to 2012 Govt. of Karnataka

125. *Reports of Kolar Chikkaballapura* Milk Union, Kolar.

126. *Annual Reports of the Mysore Archaeological Dept*. from 1885 in 1956.

127. *Annual Reports of the Archaeological Dept*. Hyderabad, 1915-16.

128. *Archaeological Survey of India*, List of Excavation Sites in Karnataka.

129. *Archaeological Survey of India List of Monuments* in Kolar District.

130. *Department of AYUSH*, Govt. of Karnataka, Gazette Notification, 2003.

131. *India Archacology A Review Reports* from 2005-06.

132. *Karnataka Tourist information*, 2008.

133. *Karnataka Tourism Policy*-2012, Govt. of Karnataka.

134. *Karnataka Tourism Policy*-2013, Govt. of Karnataka.

135. *Karnataka Tourism Policy* 2009-14, Govt. of Karnataka.

136. *Karnataka Tourism Master Plan* 2010-20, dept, of Tourism, Govt. of Karnataka.

137. *Karnataka Tourism Draft Policy*-2014-2019, Govt. of Karnataka.

138. *Karnataka Grape Processing and Wine Policy*-2007, govt. of Karnataka.
139. *National Tourism policy* 1982 & 2002, Dept, of Tourism, Ministry of Tourism and Culture Govt. of India.
140. The *Karnataka Hindu Religious Institutions and Charitable* Endowment Act, 1997, Govt. of Karnataka.
141. The Mysore State *Ancient and Historical Monuments and Archaeological* Sites and Remains Act- 1961, 4th February, 1962.
142. The *Mysore Ancient and historical Monuments and Archaeological* sites and Remains Rules. 1965.

## ಛಾಯ ಚಿತ್ರಗಳ ಪಟ್ಟಿ

1. ಕರ್ನಾಟಕ ರಾಜ್ಯ ಛಾಯಾಚಿತ್ರ
2. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಛಾಯಾಚಿತ್ರ
3. ಮುಕ್ತನಾಥೇಶ್ವರ ದೇವಾಲಯ
4. ವೆಂಕಟರಮಣ ದೇವಾಲಯ
5. ನಿಜಗಲ್ ಬೆಟ್ಟ
6. ಹೆಗ್ಗುಂದ ಬೆಟ್ಟ
7. ಮಹಿಮಾಪುರ ರಂಗನಾಥ ಸ್ವಾಮಿ ಬೆಟ್ಟ
8. ಮಣ್ಣೆ ಸೋಮೇಶ್ವರ ದೇವಾಲಯ
9. ಶಿವಗಂಗೆ ಬೆಟ್ಟ
10. ತ್ಯಾಮಗೊಂಡ್ಲು ಚಂದ್ರಮೌಳೇಶ್ವರ ದೇವಾಲಯ
11. ದೇವನಹಳ್ಳಿ ಕೋಟೆ
12. ವೇಣುಗೋಪಲ ಸ್ವಾಮಿ ದೇವಾಲಯ
13. ಆವತಿ ಬೆಟ್ಟ
14. ಕುಂದಾಣ ಬೆಟ್ಟ
15. ದಳ್ಸಗೆರೆಯ ಮಾರಮ್ಮ ದೇವಾಲಯ
16. ನಂದಗುಡಿಯ ಪರಮೇಶ್ವರ ದೇವಾಲಯ
17. ಧರ್ಮರಾಯಸ್ವಾಮಿ ದೇವಾಲಯ
18. ಪ್ರಸನ್ನ ಪರಮೇಶ್ವರ ದೇವಾಲಯ
    ಕಾಶಿ ವಿಶ್ವೇಶ್ವರ ದೇವಾಲಯ
    ನಾಗರೇಶ್ವರ ದೇವಾಲಯ
19. ಘಾಟಿ ಸುಬ್ರಹ್ಮಣ್ಯ ದೇವಾಲಯ
20. ಹುಲ್ಕುಡಿ ಬೆಟ್ಟ

ಹುಲ್ಕುಡಿ ದುರ್ಗದ ಕೋಟೆ ಹೆಬ್ಬಾಗಿಲು

21. ಶನಿಮಹತ್ಮ ದೇವಾಲಯ ಮಧುರೆ

22. ಮಾಕಳಿ ದುರ್ಗದ ಇತಿಹಾಸದ ನಾಮ ಫಲಕ

ಮಾಕಳಿ ದುರ್ಗದ ಬೆಟ್ಟ

ಮಾಕಳಿ ದುರ್ಗದ ಕೋಟೆ

23. ಬೃಹತ್ ಪ್ರಮಾಣದ ಕೈಗಾರಿಕೆ ನೆಲಮಂಗಲ ತಾಲ್ಲೂಕು

24. ರೇಷ್ಮೆ ಗೂಡಿನ ದೃಶ್ಯ ದೊಡ್ಡಬಳ್ಳಾಪುರ ತಾಲ್ಲೂಕು

25. ಸಣ್ಣ ಪ್ರಮಾಣದ ಕೈಗಾರಿಕೆ ದೊಡ್ಡಬಳ್ಳಾಪುರ ತಾಲ್ಲೂಕು

26. ಹೈನುಗಾರಿಕೆ ಉದ್ಯಮ

27. ಪ್ರವಾಸಿ ಮಂದಿರ

28. ಸಿದ್ದರ ಬೆಟ್ಟ

29. ಹಳೆ ನಿಜಗಲ್ ಬೆಟ್ಟ

30. ಉದ್ಭವ ವಿನಾಯಕ ದೇವಾಲಯ

31. ವಿಜಯ ವಿಠಲ ದೇವಾಲಯ

32. ಕೆಂಗಲ್ ಬೆಟ್ಟ

33. ಬರದಿ ರಾಮೇಶ್ವರ ಬೆಟ್ಟ

34. ವ್ಯಧ್ಯಕೀಯ ಕಾಲೇಜು

****************

www.karnatakamaps.com

1 –




ಕರ್ನಾಟಕ ರಾಜ್ಯ ಛಾಯಚಿತ್ರ




www.karnatakamaps.com

2 – ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಛಾಯಚಿತ್ರ



3 – ಮುಕ್ತನಾಥೇಶ್ವರ ದೇವಾಲಯ ಛಾಯಚಿತ್ರ



4 – ವೆಂಕಟರಮಣ ಸ್ವಾಮಿ ದೇವಾಲಯ ಛಾಯಾಚಿತ್ರ



5 – ನಿಜಗಲ್ ಬೆಟ್ಟ ಛಾಯಚಿತ್ರ



6 – ಹೆಗ್ಗುಂದ ಬೆಟ್ಟ ಛಾಯಚಿತ್ರ



7 – ಮಹಿಮರಂಗನಾಥ ಸ್ವಾಮಿ ದೇವಾಲಯ ಛಾಯಾಚಿತ್ರ




8 – ಮಣ್ಣೆ, ಸೋಮೇಶ್ವರ ಸ್ವಾಮಿ ದೇವಸ್ಥಾನ ಛಾಯಾಚಿತ್ರ



9 – ಶಿವಗಂಗೆ ಬೆಟ್ಟ ಛಾಯಾಚಿತ್ರ




10 – ತ್ಯಾಮಗೊಂಡ್ಲುವಿನ ಚಂದ್ರಮೌಳೇಶ್ವರ ದೇವಸ್ಥಾನ ಛಾಯಾಚಿತ್ರ



11 – ದೇವನಹಳ್ಳಿ ಕೋಟೆಯ ಛಾಯಾಚಿತ್ರ



12 – ವೇಣುಗೋಪಾಲ ಸ್ವಾಮಿ ದೇವಾಲಯ ಛಾಯಾಚಿತ್ರ



13 – ಅವತಿ ಬೆಟ್ಟ ದೇವನಹಳ್ಳಿ ತಾಲ್ಲೂಕ್ ಛಾಯಾಚಿತ್ರ



14 – ಕುಂದಾಣ್ಣ ಬೆಟ್ಟ ಛಾಯಾಚಿತ್ರ



15 – ದಲಸ್ಗೆರೆಯ ಮಾರಮ್ಮ ದೇವಾಲಯ ಛಾಯಾಚಿತ್ರ



16 – ನಂದಗುಡಿ ಪಾರ್ವತಿ ಪರಮೇಶ್ವರ ದೇವಾಲಯ, ಛಾಯಾಚಿತ್ರ



17 – ಧರ್ಮರಾಯಸ್ವಾಮಿ ದೇವಾಲಯ, ಶಿವನಪುರ ಛಾಯಚಿತ್ರ



18 – ಪ್ರಸನ್ನ ಪರಮೇಶ್ವರ ದೇವಾಲಯ, ಛಾಯಚಿತ್ರ



ಕಾಶಿ ವಿಶ್ವೇಶ್ವರ ದೇವಾಲಯ



ನಾಗರೇಶ್ವರ ದೇವಾಲಯ ಸೂಲಿಬೆಲೆ



19 – ಘಾಟಿ ಸುಬ್ರಹ್ಮಣ್ಯ ದೇವಾಲಯ, ದೊಡ್ಡಬಳ್ಳಾಪುರ ಛಾಯಚಿತ್ರ



20 – ಹುಲ್ಕುಡಿ ಬೆಟ್ಟ ಛಾಯಚಿತ್ರ



ಹುಲ್ಕುಡಿ ಬೆಟ್ಟದ ಕೋಟೆಯ ಹೆಬ್ಬಾಗಿಲು



21 – ಮಧುರೆಯ ಶನಿಮಹಾತ್ಮ ದೇವಾಲಯ ಛಾಯಚಿತ್ರ




22 – ಮಾಕಳಿ ದುರ್ಗ ಇತಿಹಾಸದ ನಾಮಫಲಕ

ಛಾಯಚಿತ್ರ



ಮಾಕಳಿ ದುರ್ಗದ ಬೆಟ್ಟ ಛಾಯಾಚಿತ್ರ



ಮಾಕಳಿ ದುರ್ಗದ ಕೋಟೆಯ ಛಾಯಾಚಿತ್ರ



23 – ಬೃಹತ್ ಕೈಗಾರಿಕೆ ಪ್ರದೇಶ, ನೆಲಮಂಗಲ ತಾಲ್ಲೂಕು ಛಾಯಚಿತ್ರ



24- ರೇಷ್ಮೇ ಗೂಡಿನ ದೃಶ್ಯ ದೊಡ್ಡಬಳ್ಳಾಪುರ ತಾಲ್ಲೂಕು ಛಾಯಾಚಿತ್ರ



25 – ಸಣ್ಣ ಪ್ರಮಾಣದ ಕೈಗಾರಿಕೆ ಛಾಯಾಚಿತ್ರ



26 – ಹೈನುಗಾರಿಕೆ ಉದ್ಯಮ, ನೆಲಮಂಗಲ ತಾಲ್ಲೂಕು ಛಾಯಾಚಿತ್ರ



27 – ಪ್ರವಾಸಿ ಮಂದಿರ ದೊಡ್ಡಬಳ್ಳಾಪುರ ಛಾಯಾಚಿತ್ರ



28 – ಸಿದ್ದರ ಬೆಟ್ಟ ಛಾಯಾಚಿತ್ರ



29 – ಹಳೇ ನಿಜಗಲ್ ಬೆಟ್ಟ ಛಾಯಾಚಿತ್ರ



30 – ಉದ್ಭವ ವಿನಾಯಕ ದೇವಾಲಯ



31 – ವಿಜಯ ವಿಠಲ ದೇವಾಲಯ



32 – ಕೆಂಗಲ್ ಬೆಟ್ಟ ಛಾಯಾಚಿತ್ರ



33 – ಬರದಿರಾಮೇಶ್ವರ ಬೆಟ್ಟ ಛಾಯಾಚಿತ್ರ



34 – ಸಿದ್ದಾರ್ಥ ವೈದ್ಯಕೀಯ ಕಾಲೇಜು, ನೆಲಮಂಗಲ ಛಾಯಾಚಿತ್ರ

# ತುಮಕೂರು  ವಿಶ್ವವಿದ್ಯಾನಿಲಯ



## "ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಐತಿಹಾಸಿಕ ಪ್ರವಾಸೋದ್ಯಮದ ಒಂದು ಅಧ್ಯಯನ"

ಇತಿಹಾಸ ಮತ್ತು ಪುರಾತತ್ವ ಅಧ್ಯಯನ ಹಾಗೂ ಸಂಶೋಧನಾ ವಿಭಾಗದಲ್ಲಿ ಪಿಹೆಚ್.ಡಿ ಪದವಿಗಾಗಿ ಈ ಮಹಾಪ್ರಬಂಧವನ್ನು ತುಮಕೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಲಾಗಿದೆ.

ಸಂಶೋಧನಾರ್ಥಿ

ಸೂರ್ಯನಾರಾಯಣ. ಎನ್

ನೋಂದಣಿ ಸಂಖ್ಯೆ : 15HS011

ಸಂಶೋಧನಾ ಮಾರ್ಗದರ್ಶಕರು

ಡಾ. ಪ್ರಿಯಾ ಠಾಕೂರ್

ಸಹಾಯಕ ಪ್ರಾಧ್ಯಾಪಕರು

ಇತಿಹಾಸ ಮತ್ತು ಪುರಾತತ್ವ ಅಧ್ಯಯನ ಹಾಗೂ ಸಂಶೋಧನಾ ವಿಭಾಗ

**2021**

## ಅಧ್ಯಾಯ – 6

## ಉಪಸಂಹಾರ

ಪ್ರವಾಸ ಮತ್ತು ಪ್ರವಾಸೋದ್ಯಮವು ಪ್ರಗತಿಗೆ ಉತ್ತಮವಾದ ವಾಹಕಗಳಾಗಿವೆ. ಒಂದು ರೀತಿಯಲ್ಲಿ ಇವು ಎರಡು ಕಡೆ ಹರಿತವಾದ ಆಯುಧವಿದ್ದಂತೆ. ಇವುಗಳ ಬಳಕೆಯಲ್ಲಿ ಜಾಗರೂಕತೆ ಮತ್ತು ಜಾಗೃತಿ ಅವಶ್ಯಕವಿರುತ್ತದೆ. ಪ್ರವಾಸೋದ್ಯಮವು ಎಷ್ಟು ಅಪ್ಯಾಯಮಾನವಾಗಿರುತ್ತದೆಯೊ ಅಷ್ಟೇ ಅಪಾಯಕಾರಿಯಾಗಿಯು ಇರುತ್ತದೆ. ಎಚ್ಚರಿಕೆಯಿಂದ ಬಳಸಿದರೆ ಅದರ ಪ್ರಯೋಜನಗಳನ್ನು ಮತ್ತು ಉತ್ತಮ ಫಲಿತಾಂಶಗಳನ್ನು ಪಡೆಯಬಹುದಾಗಿದೆ. ಪ್ರವಾಸವು ಮಾನವನ ಶ್ರೇಯಸ್ಸಿಗೆ ಸಹಕಾರಿಯಾಗಿರುತ್ತದೆ. ಪ್ರವಾಸೋದ್ಯಮದ ಉತ್ತಮ ಫಲಿತಗಳು ಮಾನವನ ಏಳಿಗೆಯಲ್ಲಿ ಸಹಕಾರಿಯಾಗಿವೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯು ವಿಭಿನ್ನ ಬಗೆಯ ಪ್ರವಾಸೋದ್ಯಮಗಳಿಂದ ಉತ್ತಮವಾದ ಪ್ರಯೋಜನಗಳನ್ನು ಪಡೆಯುತ್ತಿದೆ. ಅದರೊಂದಿಗೆ ಪ್ರವಾಸೋದ್ಯಮವು ನಕರಾತ್ಮಕ ಫಲಿತಾಂಶಗಳನ್ನು ಸಹ ನೀಡಿರುವುದು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಮಾನವನ ಒಟ್ಟಾರೆ ಜೀವನ ಪ್ರಕ್ರಿಯೆ ಮೇಲೆ ತನ್ನ ಪ್ರಭಾವ ಬೀರಿರುವುದನ್ನು ಕಾಣಬಹುದಾಗಿದೆ.

ಅಧಿಕ ಸಂಖ್ಯೆಯಲ್ಲಿ ಪ್ರವಾಸಿಗರ ಆಗಮನದಿಂದ ಸಮಾಜ, ಸಂಸ್ಕೃತಿ, ಆಚಾರಗಳು, ಪದ್ದತಿಗಳು, ಸಂಪ್ರದಾಯಗಳು, ವೇಷಭೂಷಣ, ಆಹಾರ ಸೇವನೆ, ನಡವಳಿಕೆ ಮತ್ತು ಇನ್ನಿತರ ಅಂಶಗಳ ಮೇಲೆ ತನ್ನ ಪ್ರಭಾವವನ್ನು ಬೀರಿದೆ. ಮುಖ್ಯವಾಗಿ ಮತ್ತು ಪ್ರಧಾನವಾಗಿ ಕಾಣಬರುವಂತಹ ನಕರಾತ್ಮಕ ಪರಿಣಾಮದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಅರಣ್ಯ ಮತ್ತು ಪರಿಸರದಲ್ಲಿ ವ್ಯತ್ಯಾಸಗಳನ್ನು ಕಾಣಬಹುದಾಗಿದೆ. ಹವ್ಯಾಸಿ ಭೇಟಿಯಿಂದಾಗಿ ವಿರಳವಾದ ಪ್ರಾಣಿ ಸಂಪತ್ತನ್ನು ಕಳೆದುಕೊಳ್ಳುತ್ತಿದೆ. ಸಮಾಜ ಮತ್ತು ಸಂಸ್ಕೃತಿಯ ವಿಚಾರಕ್ಕೆ ಬಂದರೆ, ಬೇರೆ–ಬೇರೆ ಪ್ರದೇಶಗಳಿಂದ ಜಿಲ್ಲೆಗೆ ಆಗಮಿಸುವಂತಹ ಪ್ರವಾಸಿಗರ ವೇಷಭೂಷಣ ಮತ್ತು ಅವರ ಆಹಾರ ಪದ್ದತಿಗಳು ಸ್ಥಳೀಯವಾಗಿ ಹೆಚ್ಚು ಬದಲಾವಣೆಗೆ ಒಳಪಟ್ಟಿರುವುದು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಇಲ್ಲಿನ ಸಂಪ್ರದಾಯಿಕವಾದ ಆಹಾರ ಪದ್ಧತಿಗಳು ತನ್ನ ಮಹತ್ವವನ್ನು ಕಳೆದುಕೊಳ್ಳುತ್ತಿರುವುದು ಒಂದೆಡೆಯಾದರೆ, ಪಾಶ್ಚಿಮಾತ್ಯ ಅಥವಾ ಫಾಸ್ಟ್ ಫುಡ್ ಪರಿಕಲ್ಪನೆಗಳು ಬಹು ದೊಡ್ಡ ಪ್ರಮಾಣದಲ್ಲಿ ಆರೋಗ್ಯದ ಮೇಲೆ ಕೆಟ್ಟ ಪರಿಣಾಮಗಳನ್ನು ಉಂಟುಮಾಡುತ್ತಿರುವುದು ಹೆಚ್ಚಾಗಿ ಕಂಡುಬರುತ್ತದೆ.

ಪ್ರವಾಸಿಗರ ಮದ್ಯಪಾನ ಸೇವನೆಯ ಚಟವು ಅಥವಾ ಅವರಿಗೆ ನಾವು ನೀಡುವ ಆತಿಥ್ಯವು ಸ್ಥಳೀಯರು ನೆಮ್ಮದಿ ನಡೆಸುತ್ತಿದ್ದ ಜೀವನಕ್ಕೆ ಅಪಾಯವನ್ನು ತಂದೊಡ್ಡಿರುವುದು ಗೌಪ್ಯವಾಗಿಯೇನೊ ಉಳಿದುಕೊಂಡಿಲ್ಲ. ವೇಷಭೂಷಣ ವಿಚಾರಕ್ಕೆ ಸಂಬಂಧಿಸಿದಂತೆ ಪ್ರಾದೇಶಿಕ ವಸ್ತ್ರ ತಮ್ಮ ಮಹತ್ವವನ್ನು ಕಳೆದುಕೊಂಡು ಅರೆಬರೆ ಸಂಸ್ಕೃತಿಯ ಬಟ್ಟೆಗಳನ್ನು ಧರಿಸುವಂತಹ ಚಾಳಿಯಾಗಿ ಬೆಳವಣಿಗೆಯಾಗಿರುವುದರ ಹಿಂದೆ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಪ್ರವಾಸೋದ್ಯಮ ಕಾರಣವಾಗಿರುವುದು ಕಂಡುಬರುತ್ತದೆ. ಪ್ರವಾಸಿಗರಿಗೆ ಹಲವು ಸೇವೆಗಳನ್ನು ನೀಡಿರುವುದರ ಜೊತೆಗೆ ಆದಾಯವನ್ನು ಗಳಿಸುವಂತಹ ಅಭಿಲಾಷೆಯು ಇಲ್ಲಿನ ಜನರಲ್ಲಿ ಸಹಜವಾಗಿ ಉಂಟಾಗುತ್ತದೆ. ಇದು ಇಲ್ಲಿಗೆ ಕೊನೆಯಾಗದೆ, ದುರಾಸೆ ಮತ್ತು ಮೋಸ ಹಾಗೂ ಇತರ ಬಗೆಯ ಅನಾಚಾರಗಳನ್ನು ಉಂಟು ಮಾಡಿದೆ.

ಈ ನಿಟ್ಟಿನಲ್ಲಿ ಮುಖ್ಯವಾಗಿ ಯುವ ಜನತೆಯ ಮೇಲೆ ಹೆಚ್ಚು ಪ್ರಭಾವ ಬೀರುತ್ತಿರುವುದು ಮತ್ತು ಅದರ ಪ್ರಭಾವಕ್ಕೆ ಒಳಗಾಗುತ್ತಿರುವುದನ್ನು ಕಾಣಬಹುದಾಗಿದೆ. ಕೃಷಿ ಪ್ರಧಾನವಾಗಿದ್ದ ಬೆಂಗಳೂರು ಜಿಲ್ಲೆಯು ಆರ್ಥಿಕ ಪ್ರಗತಿಯು ನಡೆಯುತ್ತದೆ. ಬೆಂಗಳೂರು ನಗರದ ಜನರು ಗ್ರಾಮಾಂತರ ಜಿಲ್ಲೆಯ ಸುತ್ತಮುತ್ತಲಿನ ಪ್ರದೇಶದ ಕೃಷಿ ಜಮೀನುಗಳನ್ನು ಖರೀದಿಸಿ, ಇತರ ಜನರಿಗೆ ವಾಣಿಜ್ಯ ಮತ್ತು ವಸತಿ ಯೋಜನೆಗಳಯನ್ನು ನಡೆಸಲು ನೀಡಿರುವುದೇ ಇದಕ್ಕೆ ಸಾಕ್ಷಿ ಎನ್ನಬಹುದು. ಜಿಲ್ಲೆಯಲ್ಲಿ ಮೂರು ಪ್ರಮುಖವಾದ ರಾಷ್ಟ್ರೀಯ ಹೆದ್ದಾರಿಗಳಿದ್ದು, ಇವು ಹಾದು ಹೋಗುವಂತಹ ಸುತ್ತಲಿನ ಪ್ರದೇಶದಲ್ಲಿ ಭೂಮಿಯ ಬೆಲೆಯು ಗಗನಕ್ಕೇರುವುದನ್ನು ನೋಡಿದರೆ ಭೂಮಿಯ ದುರುಪಯೋಗ ಅರ್ಥವಾಗುತ್ತದೆ.

ಪ್ರವಾಸೋದ್ಯಮವು ಹೇಗೆ ಉತ್ತಮ ಸಂಸ್ಕೃತಿಯನ್ನು ಪರಿಚಯ ಮಾಡಿಕೊಟ್ಟು, ಸಾಮಾಜಿಕ ಸಾಮರಸ್ಯವನ್ನು ಬೆಳೆಸುತ್ತಿದೆಯೋ ಹಾಗೇಯೇ ಪರಂಪರಾಗತವಾದ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಮಾನವೀಯ ಮೌಲ್ಯಗಳ ಪತನಕ್ಕೆ ಕಾರಣವಾಗಿದೆ. ಎಲ್ಲವನ್ನು ವ್ಯಾವಹಾರಿಕ ದೃಷ್ಟಿಕೋನದಿಂದ ನೋಡುವಂತಹ ಭಾವನೆಗೆ ಇದಕ್ಕೆ ಸಾಕ್ಷಿ. ಉತ್ತಮವಾದ ಮಾನವೀಯ ಸಂಬಂಧಗಳು ಮತ್ತು ಮೌಲ್ಯಗಳು ತನ್ನ ಬೇರುಗಳನ್ನು ಕಳಚಿಕೊಳ್ಳುತ್ತಿರುವುದು ಕಂಡುಬರುತ್ತದೆ. ಕೊಳ್ಳು ಬಾಕು ಮತ್ತು ತಿನ್ನು ಬಾಕು ಸಂಸ್ಕೃತಿಯು ಹೆಚ್ಚಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನಗರಗಳೊಂದಿಗೆ ಹಳ್ಳಿ ಸಮುದಾಯಗಳಲ್ಲಿ ಬೆಳೆದಿರುವುದಕ್ಕೆ ಪ್ರವಾಸೋದ್ಯಮವು ಸಹ ಒಂದು ಕಾರಣವೆನ್ನಬಹುದು ಸ್ಥಳೀಯ ಉತ್ತಮ ಪರಿಸರ, ಪಾರಂಪರಿಕ ಕಟ್ಟಡಗಳ ನಾಶಕ್ಕೂ ತನ್ನ ಕೊಡುಗೆಯನ್ನು ನೀಡುತ್ತಿದೆ. ಪ್ರವಾಸಿಗರು ಇಂತಹ

ಕಾರಣಗಳಿಗೆ ಭೇಟಿ ನೀಡಿದ ಸಮಯದಲ್ಲಿ ಕಟ್ಟಡಗಳ ಮೇಲೆ ತಮ್ಮ ಸವಿ ನೆನಪನ್ನು ದಾಖಲಿಸುವಂತಹ/ಕೆತ್ತನೆ ಮಾಡುವಂತಹ ಮಹಾದಾಸೆಯಲ್ಲಿ ಅಲ್ಲಿನ ಪರಿಸರವನ್ನು ಮತ್ತು ಕಟ್ಟಡಗಳನ್ನು ನಾಶದ ಹಾದಿಯಲ್ಲಿ ದೂಡುತ್ತಿರುವುದು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಐತಿಹಾಸಿಕ ಮತ್ತು ಪಾರಂಪರಿಕ ತಾಣಗಳಲ್ಲಿ ಕಲ್ಲಿನಿಂದ ಉತ್ತಮವಾಗಿರುವ ಕಟ್ಟಡಗಳ ಮೇಲೆ ತಮ್ಮ ಹೆಸರುಗಳನ್ನು ಮತ್ತು ಸ್ಥಳಗಳನ್ನು ಕೆತ್ತನೆ ಮಾಡುವುದರಿಂದ ಕಟ್ಟಡಗಳ ಅಂದವು ಕೆಡುವುದಲ್ಲದೇ ನಾಶಕ್ಕೂ ಕಾರಣವಾಗಿದೆ. ಶಿವಗಂಗೆ, ನಿಜಗಲ್ಲು ಬೆಟ್ಟ, ಹೆಗ್ಗುಂದದ ಬೆಟ್ಟಗಳು, ದೇವಾಲಯಗಳು ಈ ರೀತಿಯ ವರ್ತನೆಗೆ ಒಳಪಟ್ಟಿರುವುದು ಅಧ್ಯಯನ ಕಾಲದಲ್ಲಿ ತಿಳಿದುಬಂದಿದೆ. ಜೀವನ ಶೈಲಿ ಮತ್ತು ನೈತಿಕ ಮೌಲ್ಯಗಳ ಅಧಃಪತನದಿಂದಾಗಿ ಲಜ್ಜೆ ರಹಿತವಾದ ಜೀವನ, ವೇಶ್ಯವಾಟಿಕೆ, ಮಧ್ಯಸೇವನೆ, ವಿವಿಧ ಬಗೆಯ ಮಾದಕ ವಸ್ತುಗಳ ಸೇವನೆಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಹರಡಿಕೊಂಡು, ತನ್ನ ಹಿಂದಿನ ಭವ್ಯ ಪರಂಪರೆಯನ್ನು ಮತ್ತು ಉನ್ನತವಾದ ಸಮಾಜದ ಬೇರುಗಳನ್ನು ಅಲುಗಾಡಿಸುತ್ತಿವೆ. ಇಂತಹ ಚಟಗಳಿಗೆ ವಿಧ್ಯಾರ್ಥಿಗಳು, ಪ್ರಾಯದ ಮತ್ತು ಮಧ್ಯ ವಯಸ್ಕ ಜನರು ಹೆಚ್ಚಾಗಿ ಪ್ರಭಾವಿತರಾಗಿರುವುದು ಕಂಡುಬರುತ್ತದೆ.

ಪ್ರವಾಸದಿಂದಾಗಿ ಜಿಲ್ಲೆಯ ಪ್ರಕೃತಿಯ ಪರಿಸರದ ಮೇಲೂ ಅಡ್ಡ ಪರಿಣಾಮಗಳನ್ನು ಉಂಟುಮಾಡಿದೆ. ದಟ್ಟವಾದ ಕಾಡುಗಳು, ಆರ್ಥಿಕ ಮತ್ತು ಸಾಮಾಜಿಕ ಬದಲಾವಣೆಗಳಿಂದಾಗಿ ಮಾನವನ ದುರಾಸೆಗೆ ಬಲಿಯಾಗಿ, ಮಳೆ ಮತ್ತು ಭೂತಾಪಮಾನ ಏರಿಕೆ ಮತ್ತು ಅಂತರ್ಜಲ ಮಟ್ಟ ಪಾತಳಕ್ಕೆ ಹೋಗಲು ಪ್ರವಾಸೋದ್ಯಮ ಒಂದಲ್ಲ ಒಂದು ರೀತಿಯಲ್ಲಿ ಕಾರಣವೆನ್ನಬಹುದು. ಪ್ರವಾಸಿಗರು ತಮ್ಮ ಭೇಟಿಯ ಕಾಲದಲ್ಲಿ ಬೇಟೆ, ವಿಷಯುಕ್ತವಾದ ಪ್ಲಾಸ್ಟಿಕ್ ಚೀಲಗಳನ್ನು ಮತ್ತು ಸೀಸಗಳನ್ನು ಎಲ್ಲೆಂದರಲ್ಲಿ ಬಿಸಾಡುವುದು, ಗಾಜಿನ ಸೀಸಗಳನ್ನು ಒಡೆಯುವುದು, ಪೊಟ್ಟಣಗಳನ್ನು ಬೀಸಾಡುವುದು, ಗಿಡಗಳನ್ನು ಮುರಿಯುವುದು, ಈ ರೀತಿಯಲ್ಲಿ ಸಸ್ಯಗಳನ್ನು ಸುತ್ತಲಿನ ಪರಿಸರವನ್ನು ಕಲುಷಿತಗೊಳಿಸುತಇರುವುದನ್ನು ಕಾಣಬಹುದಾಗಿದೆ. ಇಂತಹ ಸನ್ನಿವೇಶವು ದೇವಾಲಯಗಳು, ಬೆಟ್ಟಗಳು ಮತ್ತು ಇತರ ಪ್ರಾಕೃತಿಕ ತಾಣಗಳಲ್ಲಿ ಮುಖ್ಯವಾಗಿ ಕಂಡುಬರುತ್ತದೆ. ಇಂತಹ ಸನ್ನಿವೇಶದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪ್ರವಾಸೋದ್ಯಮದ ಬೆಳವಣಿಗೆಯು ಸಮತೋಲನ ರೀತಿಯಲ್ಲಿ ಬೆಳೆಯುವುದರ ಜೊತೆ ಜೊತೆಗೆ ತನ್ನ ಹಿಂದಿನ ಪರಂಪರೆ, ಸಂಸ್ಕೃತಿ, ಸಂಪ್ರದಾಯಗಳನ್ನು, ಕಟ್ಟಡಗಳನ್ನು ಉಳಿಸಿ, ಪ್ರವಾಸೋದ್ಯಮವನ್ನು ಬೆಳೆಸುವ ಅನಿವಾರ್ಯತೆ ಇದೆ.

ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಅಭಿವೃದ್ಧಿ ನಿಗಮವು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಶಿವಗಂಗೆ ಬೆಟ್ಟ, ಸಿದ್ದರ ಬೆಟ್ಟ, ಘಾಟಿಸುಬ್ರಮ್ಮಣ್ಯ, ದೇವನಹಳ್ಳಿ, ಹೆಗ್ಗುಂದ, ಮಧುರೆ ತಾಣಗಳಿಗೆ ಮಾತ್ರ ತನ್ನ ಪ್ಯಾಕೇಜ್ ಟೂರ್ ಗಳನ್ನು ಆಯೋಜಿಸುತ್ತಿದೆ. ಜಿಲ್ಲೆಯಲ್ಲಿ 'ವಾಲ್ ಇನ್ ಟೂರಿಸಂ' (ಸ್ವಪ್ರೇರಿತ ಪ್ರವಾಸೋದ್ಯಮ) ಎಂಬ ಪರಿಕಲ್ಪನೆಯು ಅಸ್ಥತ್ವದಲ್ಲಿರುವುದು ಕಂಡು ಬರುತ್ತದೆ. ಇದರೊಂದಿಗೆ ಇತರ ಹಲವು ಪ್ರವಾಸಿ ತಾಣಗಳಿದ್ದರೂ ಇಂತಹ ತಾಣಗಳಿಗೆ ಹೆಚ್ಚಿನ ಪ್ರವಾಸಿಗರನ್ನು ಸೆಳೆಯುವಲ್ಲಿ ಕರ್ನಾಟಕ ರಾಜ್ಯ ಪ್ರವಾಸೋದ್ಯಮ ಅಭಿವೃದ್ಧಿ ನಿಗಮವು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿನ ಪಾರಂಪರಿಕ ತಾಣಗಳಿಗೆ ತನ್ನ ಪ್ಯಾಕೇಜ್ ಟೂರ್‌ಗಳನ್ನು ಹಮ್ಮಿಕೊಳ್ಳಬೇಕೆಂಬ ಅಂಶವನ್ನು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ. ಕಾರಣ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಅಧಿಕ ಸಂಖ್ಯೆಯಲ್ಲಿ ಸ್ವಯಂ ಪ್ರೇರಣೇಯ ಪ್ರವಾಸಿಗರನ್ನು ಕಾಣಬಹುದಾಗಿದೆ.

ಇದರೊಂದಿಗೆ ಹೆಚ್ಚಿನ ಪ್ರವಾಸಿನೆಲೆಗಳಿಗೆ ಪ್ರವಾಸಿಜಾಲಗಳನ್ನು ವಿಸ್ತರಿಸಿ, ಜಿಲ್ಲಾ ಮಟ್ಟದಲ್ಲಿರುವ ಜಿಲ್ಲಾಧೀಕಾರಿಗಳ ಅಧ್ಯಕ್ಷತೆಯ ಜಿಲ್ಲಾ ಪ್ರವಾಸೋದ್ಯಮ ಅಭಿವೃದ್ಧಿ ಮಂಡಳಿಯು ಜಿಲ್ಲೆಯಲ್ಲಿರುವ ಹೆಚ್ಚಿನ ಸಂಖ್ಯೆಯ ಪ್ರವಾಸಿ ನೆಲೆಗಳನ್ನು ಗುರ್ತಿಸಿ, ಅಭಿವೃದ್ಧಿ ಪಡಿಸಬೇಕಾಗಿದೆ. ಜಿಲ್ಲೆಯಲ್ಲಿರುವ ಜಿಲ್ಲಾ ಮಟ್ಟದ ಪ್ರವಾಸೋದ್ಯಮ ಇಲಾಖೆಯ ಘಟಕದ ಅಧಿಕಾರಿಗಳ ಸಂಖ್ಯೆಯನ್ನು ಹೆಚ್ಚಿಸಿ, ಈಗಿರುವ ಪ್ರವಾಸಿ ತಾಣಗಳ ಜೊತೆಗೆ ಇತರ ಪ್ರವಾಸಿ ತಾಣಗಳಲ್ಲಿ ಮತ್ತು ಮುಖ್ಯವಾದ ಕೂಡು ರಸ್ತೆಗಳಲ್ಲಿ ಪ್ರವಾಸಿ ಮಾಹಿತಿ ಫಲಕಗಳನ್ನು ಮತ್ತು ಪ್ರಮುಖ ನಗರಗಳಲ್ಲಿ ಕಿರು ಪುಸ್ತಕಗಳನ್ನು ಮತ್ತು ಹೊತ್ತಿಗೆಗಳನ್ನು ಹಂಚುವುದು, ವಿಚಾರ ಸಂಕಿರಣಗಳು, ಪ್ರದರ್ಶನಗಳು ಮತ್ತು ಉತ್ಸವಗಳನ್ನು ನಡೆಸುವುದರ ಮೂಲಕ ಜಿಲ್ಲೆಗೆ ಹೆಚ್ಚಿನ ಸಂಖ್ಯೆಯ ಪ್ರವಾಸಿಗರನ್ನು ಸೆಳೆಯಬಹುದಾಗಿದೆ. ಇದರ ಮುಖೇನ ಜಿಲ್ಲೆಯ ಎಲ್ಲಾ ಬಗೆಯ ತಾಣಗಳನ್ನು ಸಂರಕ್ಷಣೆಯ ಜೊತೆಗೆ ಸುಸ್ಥಿರ ಪ್ರವಾಸೋದ್ಯಮವನ್ನು ಬೆಳೆಸಬಹುದಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಜಾಗತಿಕ ಮಟ್ಟದಲ್ಲಿ ಪ್ರಖ್ಯಾತಿಯನ್ನು ಪಡೆದುಕೊಂಡು ಸಾಗುತ್ತಿವೆ. ಉತ್ತಮ ಅವಕಾಶಗಳನ್ನು ಕಲ್ಪಿಸಿಕೊಟ್ಟಿದೆ. ಜಿಲ್ಲೆಯ ಸಾಮರ್ಥ್ಯವನ್ನು ಭಾರತಕ್ಕೆ ಪರಿಚಯಿಸಿದ ಕೀರ್ತಿಗೆ ನೆಲಮಂಗಲ ತಾಲ್ಲೂಕಿನ ಶಿವಗಂಗೆ ಕ್ಷೇತ್ರದ ಪಾತ್ರವಾಗಿದೆ. ಇದು ಭಾರತವಲ್ಲದೇ ಭಾರತದ ಗಡಿಯನ್ನು ದಾಟಿ ಹಲವು ದೇಶಗಳಿಗೆ ಬೆಂಗಳೂರು ಗ್ರಾಮಾಂತರದ ಮಾವು ರಫ್ತು ಮಾಡಲ್ಪಡುತ್ತಿದ್ದು ವಿದೇಶಿ ವಿನಿಮಯದೊಂದಿಗೆ ಜಿಲ್ಲೆಯ ಮತ್ತು ರಾಜ್ಯದ ಪ್ರವಾಸೋದ್ಯಮವು ಈ ಕ್ಷೇತ್ರವು ವಿಸ್ತರಣೆಗೊಳ್ಳಲು ಮಹತ್ವದ ಕೊಡುಗೆಯನ್ನು ನೀಡಿರುವುದು ಉಲ್ಲೇಖಾರ್ಹವಾಗಿದೆ.

ನೂತನ ಶಿಲಾಯುಗದ ಸಂಸ್ಕೃತಿಯಿಂದ ಇಂದಿನವರೆಗೂ ಭವ್ಯ ಇತಿಹಾಸವನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಹೊಂದಿದೆ. ಇಂತಹ ಸಂಪನ್ನವಾದ ಚಾರಿತ್ರಿಕ ಮಹತ್ವವನ್ನು ಪಡೆದಿರುವ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪ್ರವಾಸೋದ್ಯಮಕ್ಕೆ ವಿಫುಲವಾದ ಅವಕಾಶಗಳನ್ನು ಹೊಂದಿದೆ ಎಂಬುದು ಊಹೆಯಾಗುವುದಿಲ್ಲ. ರಾಷ್ಟ್ರಮಟ್ಟದಲ್ಲಿ ಅತ್ಯಂತ ವಿಶಾಲವಾದ ಪ್ರದೇಶದಲ್ಲಿ ನೂತನ ಶಿಲಾಯುಗ ಸಂಸ್ಕೃತಿಗೆ ಸೇರಿದ ನೆಲಮಂಗಲ ಎಂಬ ನೆಲೆಯನ್ನು ಹೊಂದಿರುವುದು, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹೆಮ್ಮೆಯಾಗಿದೆ. ಪ್ರಾಚೀನ ಕಾಲದಿಂದಲೂ ಒಂದಲ್ಲ ಒಂದು ಬಗೆಯ ಪ್ರವಾಸವು ಜಿಲ್ಲೆಯಲ್ಲಿ ಕಂಡುಬರುತ್ತದೆ. ಇಲ್ಲಿನ ಶಿಲಾಯುಗ ಸಂಸ್ಕೃತಿಗೆ ಸೇರಿದ ನೆಲೆಗಳೇ ಈ ಅಂಶವನ್ನು ಪುಷ್ಟೀಕರಿಸುತ್ತವೆ. ನೊಳಂಬ ಮತ್ತು ಬಾಣರಿಂದ ಪ್ರಾರಂಭವಾದ ಐತಿಹಾಸಿಕ ಸಾಮ್ರಾಜ್ಯಗಳು ಸಹ ವಿಭಿನ್ನ ಬಗೆಯ ಪ್ರವಾಸಕ್ಕೆ ಅವಕಾಶವನ್ನು ಕಲ್ಪಿಸಿದವು. ನಂತರದಲ್ಲಿ ಆಡಳಿತ ನಡೆಸಿದ ಹಲವು ರಾಜಮನೆಗಳ ಕಾಲದಲ್ಲಿ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಪ್ರವಾಸವು ಹೆಚ್ಚು ಬೆಳವಣಿಗೆಯಾಗಿರುವುದು ಕಂಡು ಬರುತ್ತದೆ. ಇದರೊಂದಿಗೆ ಜಿಲ್ಲೆಯ ಹಲವು ನೆಲೆಗಳು ರಾಮಾಯಣ ಮತ್ತು ಮಾಹಾಭಾರತದ ಕಾಲಕ್ಕೆ ಸೇರಿದ್ದವೆಂದು ಐತಿಹ್ಯಗಳು ಸ್ಥಳೀಯವಾಗಿ ಹುಟ್ಟಿಕೊಂಡಿವೆ.

ಕಲೆ, ವಾಸ್ತುಶಿಲ್ಪ, ಸಾಹಿತ್ಯ, ಕ್ರೀಡೆ, ಸಂಗೀತ, ಸಮಾಜ, ಧರ್ಮಗಳು, ಸಂಸ್ಕೃತಿ, ಆಹಾರ ಪದ್ದತಿಗಳು, ವೇಷಭೂಷಣಗಳು, ಆಚಾರ–ವಿಚಾರಗಳು ಹೀಗೆ ವಿಶ್ಟವಾದ ಅಂಶಗಳನ್ನು ಜಿಲ್ಲೆಯು ಹೊಂದಿದೆ. ಅಲ್ಲದೇ ಸ್ವಾತಂತ್ರ ಸಂಗ್ರಾಮದಲ್ಲಿ ಪ್ರಾಣವನ್ನು ಅರ್ಪಿಸಿಕೊಂಡ ಮಹಾನ್ ನಾಯಕರನ್ನು ಸಹ ಜಿಲ್ಲೆಯು ನೀಡಿದೆ. ಅಲ್ಲದೇ ಶಿಕ್ಷಣ, ಆರೋಗ್ಯ, ನ್ಯಾಯಾಂಗ ಮತ್ತು ಆಡಳಿತ ಹಾಗೂ ಇತರ ಕ್ಷೇತ್ರಗಳಲ್ಲಿ ಜಿಲ್ಲೆಯು ಪ್ರಾಮುಖ್ಯತೆಯನ್ನು ಪಡೆದಿದೆ.

ಇಂತಹ ವೈಶಷ್ಟಪೂರ್ಣವಾದ ಹಿನ್ನಲೆಯನ್ನು ಮತ್ತು ಸಮಾಜವನ್ನು ಹಾಗೂ ಸಂಸ್ಕೃತಿಯನ್ನು ಹೊಂದಿರುವ ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಹಲವು ಐತಿಹಾಸಿಕ ಮತ್ತು ಧಾರ್ಮಿಕ ಹಾಗೂ ಸಾಂಸ್ಕೃತಿಕ ಸ್ಮಾರಕಗಳನ್ನು ಒಳಗೊಂಡಿದೆ. ಇಲ್ಲಿ ಆಡಳಿತ ನಡೆಸಿದ ರಾಜಮನೆತನಗಳ ಕಾಲಕ್ಕೆ ಸೇರಿದೆ ಸ್ಮಾರಕಗಳನ್ನು ಮತ್ತು ನೆಲೆಗಳನ್ನು ಭಾರತ ಸರ್ಕಾರ ಮತ್ತು ರಾಜ್ಯ ಸರ್ಕಾರವು ಗುರ್ತಿಸಿ ಮುಂದಿನ ಪೀಳಿಗೆಗೆ ಸಂರಕ್ಷಣೆ ಮಾಡುತ್ತಿರುವುದನ್ನು ನೋಡಿದರೆ ಬೆಂಗಳೂರು ಜಿಲ್ಲೆಯ ಪಾರಂಪರಿಕ ಮಹತ್ವವು ಅರಿವಾಗುತ್ತದೆ. ಜಿಲ್ಲೆಯಲ್ಲಿ ಎಂಟು ರಾಷ್ಟ್ರೀಯ ಮತ್ತು ಹದಿನಾರು ರಾಜ್ಯ ಸಂರಕ್ಷಿತ ಸ್ಮಾರಕಗಳಿದ್ದು ಜಿಲ್ಲೆಯ ಪ್ರವಾಸೋದ್ಯಮ ಕ್ಷೇತ್ರಕ್ಕೆ ಉತ್ತಮವಾದ ಕೊಡುಗೆಯನ್ನು ನೀಡಿದೆ.

ಇವುಗಳ ಕಲೆ, ವಾಸ್ತುಶಿಲ್ಪ, ಧಾರ್ಮಿಕ ಮಹತ್ವ, ತಂತ್ರಜ್ಞಾನ ಮತ್ತು ನಿರ್ಮಾಣದ ಕುಶಲತೆ ಮತ್ತು ಪರಂಪರೆಯನ್ನು ಬಿಂಬಿಸುತ್ತಿವೆ. ಪ್ರತಿಯೊಂದು ತಾಣವು ಪ್ರವಾಸಕ್ಕೆ ಯೋಗ್ಯವಾದ ತಾಣವಾಗಿದೆ. ಇಂತಹ ಮಹತ್ವವನ್ನು ಹೊಂದಿರುವ ಈ ಸ್ಮಾರಕಗಳು ಪ್ರತಿನಿತ್ಯ ನೂರಾರು ಸಂಖ್ಯೆಯ ಪ್ರವಾಸಿಗರನ್ನು ತನ್ನಡೆಗೆ ಆಕರ್ಷಣೆ ಮಾಡುತ್ತಿರುವುದು ಕಂಡು ಬರುತ್ತದೆ. ಈ ಮೂಲಕವಾಗಿ ಜಿಲ್ಲೆಯ ಈ ಸ್ಮಾರಕಗಳ ಬಗ್ಗೆ ಅರಿವು ಮೂಡಿಸಲು ಸಹ ಸಾಧ್ಯವಾಗಿದೆ. ಅಲ್ಲದೆ ಜಿಲ್ಲೆಯ ಭವ್ಯ ಪರಂಪರೆಯ ಪ್ರತೀಕವಾದ ಸ್ಮಾರಕಗಳು ಸಂರಕ್ಷಣೆಯೊಂದಿಗೆ ಪ್ರವಾಸೋದ್ಯಮ ಕ್ಷೇತ್ರವು ಬೆಳವಣಿಗೆಯಾಗಲು ಗುರುತರವಾದ ಕೊಡುಗೆಯನ್ನು ನೀಡುತ್ತಿವೆ ಎಂದು ಹೇಳಬಹುದು. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸ್ಮಾರಕಗಳಿಗೆ ಭೇಟಿ ನೀಡುವ ಪ್ರವಾಸಿಗರಿಂದ ನಮ್ಮ ಪರಂಪರೆಯನ್ನು ತಿಳಿಸುವುದರೊಂದಿಗೆ ಜಿಲ್ಲೆಯ ಇತರ ಕ್ಷೇತ್ರಗಳು ಅಭಿವೃದ್ಧಿಯಾಗಲು ಪ್ರೇರಕ ಶಕ್ತಿಯಾಗಿದೆ. ಈ ರೀತಿಯ ಸ್ಮಾರಕಗಳು ಮತ್ತು ನೆಲೆಗಳಲ್ಲಿ ಪ್ರವಾಸಿಗರಿಗೆ ಅನುಕೂಲವಾಗುವ ಹಲವು ಮೂಲಭೂತ ಸೌಕರ್ಯಗಳನ್ನು ಕಲ್ಪಿಸುವ ಅಗತ್ಯತೆ ಇದೆ.

## 6.1 ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ದೇವಾಲಯಗಳ ಕಲೆ ಮತ್ತು ಸಂಸ್ಕೃತಿಯ ವಿಶ್ಲೇಷಣೆ

ಅಲ್ಲದೆ ಶಿವಗಂಗೆಯ ಗವಿಗಂಗಾಧರೇಶ್ವರ ದೇವಾಲಯಕ್ಕೆ ಅಧಿಕ ಸಂಖ್ಯೆಯಲ್ಲಿ ಪ್ರವಾಸಿಗರು ಭೇಟಿ ನೀಡುತ್ತಿದ್ದು, ದೇವಾಲಯದಲ್ಲಿ ವರ್ಣರಂಜಿತ ಬೆಳಕಿನ ವ್ಯವಸ್ಥೆಯನ್ನು ಮಾಡಿದರೆ ಇನ್ನಷ್ಟು ಪ್ರವಾಸಿಗರನ್ನು ಆಕರ್ಷಣೆ ಮಾಡಬಹುದಾಗಿದೆ. ಇದರಿಂದಾಗಿ ಬಹುಮುಖಿ ಉದ್ಯಮಗಳು ಅಭಿವೃದ್ಧಿಯಾಗಲು ಸಹಾಯಕವಾಗುತ್ತದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಶಿವಗಂಗೆ, ಮಣ್ಣೆ, ಘಾಟಿಸುಬ್ರಹ್ಮಣ್ಯ, ಮಧುರೆ, ದೇವನಹಳ್ಳಿ, ಹೊಸಕೋಟೆ, ನೆಲಮಂಗಲ ಈ ನೆಲೆಗಳನ್ನು ರಾಜ್ಯ ಮತ್ತು ರಾಷ್ಟ್ರೀಯ ಸ್ಮಾರಕಗಳನ್ನು ಒಳಗೊಂಡಿದೆ ತಾಲ್ಲೂಕುವಾರು ಪ್ರವಾಸಿ ಜಾಲಗಳನ್ನು ನಿರ್ಮಾಣ ಮಾಡಲು ಅವಕಾಶವಿದೆ. ಇದರೊಂದಿಗೆ ಜಿಲ್ಲೆಯ ಇತರ ಕ್ಷೇತ್ರಗಳು ಬೆಳವಣಿಗೆಯಾಗುತ್ತವೆ. ಪ್ರವಾಸಿಗರು ಹೆಚ್ಚಿನ ಸಂಖ್ಯೆಯಲ್ಲಿ ಆಕರ್ಷಣೆ ಮಾಡಲು ಸಹಾಯಕವಾಗುತ್ತದೆ. ಇಂತಹ ಕೆಲವು ಅಭಿವೃದ್ಧಿ ಕಾರ್ಯಗಳನ್ನು ಹೆಚ್ಚು ಬೆಳವಣಿಗೆಯಾಗಲು ಸಾಧ್ಯವಾಗುತ್ತದೆ.

ಬೆಂಗಳೂರು ಜಿಲ್ಲೆಯ ರಾಜ್ಯದಲ್ಲೇ ವಿಶಿಷ್ಟ ಸಂಸ್ಕೃತಿಯನ್ನು ತನ್ನಲ್ಲಿ ಹೊಂದಿದೆ. ಇದಕ್ಕೆ ಇಲ್ಲಿ ಆಡಳಿತ ನಡೆಸಿದ ಹಲವು ರಾಜಮನೆತನಗಳು ಬಹುಮುಖ್ಯವಾದ ಕಾರಣಗಳಲ್ಲಿ ಒಂದಾಗಿದೆ.

ಇದಲ್ಲದೆ ಜಿಲ್ಲೆಯು ಪೂರ್ವ ಮತ್ತು ಉತ್ತರದಲ್ಲಿ ಅನುಕ್ರಮವಾಗಿ ತಮಿಳುನಾಡು ಮತ್ತು ಆಂಧ್ರಪ್ರದೇಶದ ರಾಜ್ಯಗಳೊಂದಿಗೆ ಗಡಿಯನ್ನು ಹಂಚಿಕೊಂಡಿರುವುದು ಮತ್ತೊಂದು ಪ್ರಧಾನವಾದ ಕಾರಣವಾಗಿದೆ. ಹೀಗೆ ಉತ್ತಮ ಭೌಗೋಳಿಕ ನೆಲೆಯನ್ನು ಹೊಂದಿರುವುದರ ಜೊತೆಗೆ ತೆಲಗು ಮತ್ತು ತಮಿಳು ಸಂಸ್ಕೃತಿಗಳೊಂದಿಗೆ ತನ್ನದೆ ಆದ ಮತ್ತು ವಿಶಿಷ್ಟವಾದ ಕನ್ನಡ ಸಂಸ್ಕೃತಿಗಳ ಸಮ್ಮಿಲನವನ್ನು ಮೈಗೂಡಿಸಿಕೊಂಡಿರುವುದು ಕಾಣಬಹುದಾಗಿದೆ.

ಬೃಹತ್ ಬಾಣರಿಂದ ಸ್ವಾತಂತ್ರ್ಯಗಳಿಸುವವರೆಗೂ ಹಲವು ಕಲೆ ಮತ್ತು ವಾಸ್ತುಶಿಲ್ಪ ಸ್ಮಾರಕಗಳನ್ನು ಮತ್ತು ನೆಲೆಗಳನ್ನು ಸ್ಥಾಪಿಸಿರುವುದು ಕಾಣಬಹುದಾಗಿದೆ. ಇವೆಲ್ಲವೂ ಮುಖ್ಯವಾಗಿ ಮತ್ತು ಪ್ರಧಾನವಾಗಿ ದ್ರಾವಿಡ ಶೈಲಿಯ ರಚನೆಗಳಾಗಿರುವುದು ಜಿಲ್ಲೆಯಲ್ಲಿ ಸಾಂಸ್ಕೃತಿಕ ಪ್ರವಾಸೋದ್ಯಮ ಕ್ಷೇತ್ರಕ್ಕೆ ಉತ್ಪನ್ನಗಳಾಗಿವೆ. ಪಾರಂಪರಿಕ ಕಲೆಗಳಲ್ಲಿ ಕರಗ, ಕೋಲಾಟ, ಡೊಳ್ಳು ಕುಣಿತ, ಫಂಡರೀ ಭಜನೆ, ತೋಳು ಬೊಮ್ಮಲಾಟ, ಗಂಗಮ್ಮ ನೃತ್ಯ, ಕಂಸಾಲೆ ಪದ ಇತರ ಬಗೆಯ ಕಲಾ ಪ್ರಕಾರಗಳನ್ನು ಹೊಂದಿದ್ದು ಉತ್ಕೃಷ್ಟವಾದ ಸಂಸ್ಕೃತಿಯನ್ನು ಹೊಂದಿರುವುದರ ಪ್ರತೀಕವಾಗಿದೆ.

ಈ ಬಗೆಯ ಕಲೆಯನ್ನು ಪ್ರೋತ್ಸಾಹಿಸುವ ಕಲಾ ಕೇಂದ್ರಗಳನ್ನು ಸಹ ಬೆಂಗಳೂರು ಗ್ರಾಮಾಂತರ ಜಿಲ್ಲೆ ಹೊಂದಿದೆ. ಕಲಾಕ್ಷೇತ್ರಗಳು ಮತ್ತು ಕಲಾಕೇಂದ್ರಗಳು ಜಿಲ್ಲೆಯಲ್ಲಿದ್ದೂ ಸಾಂಸ್ಕೃತಿಕ ಪ್ರವಾಸೋದ್ಯಮ ಬೆಳವಣಿಗೆಯಾಗಲು ಕಾರಣವಾಗಿವೆ. ಇಂತಹ ಕಲೆಯನ್ನು ರೂಡಿಸಿಕೊಂಡಿರುವ ನೂರಾರು ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಪ್ರಸಿದ್ಧಿಯನ್ನು ಪಡೆದಿರುವ ಕಲಾವಿದರನ್ನು ಸಹ ಜಿಲ್ಲೆ ಹೊಂದಿದೆ. ಇಂತಹ ಕಲಾವಿದರನ್ನು ಗುರ್ತಿಸಿ ಮತ್ತು ಅವರಿಗೆ ತಮ್ಮ ಕಲೆಯನ್ನು ವೃದ್ಧಿಸಿಕೊಳ್ಳುವ ನಿಟ್ಟಿನಲ್ಲಿ ಸರ್ಕಾರ ಮತ್ತು ಸಂಘ ಸಂಸ್ಥೆಗಳು ಸ್ಪಂದಿಸುವ ಅಗತ್ಯತೆ ಇದೆ. ಈ ಮುಖಾಂತರವಾಗಿ ಜಿಲ್ಲೆಯು ತನ್ನ ಸಂಸ್ಕೃತಿಯನ್ನು ಉಳಿಸಿಕೊಳ್ಳುವುದರೊಂದಿಗೆ ಪ್ರವಾಸೋದ್ಯಮವನ್ನು ಅಭಿವೃದ್ಧಿಪಡಿಸಬಹುದಾಗಿದೆ. ಒಂದು ಯೋಜನೆಯಿಂದ ಎರಡು ಪ್ರತಿಫಲಗಳನ್ನು ಪಡೆಯಬಹುದಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಸಾವಿರಕ್ಕೂ ಅಧಿಕ ಸಂಖ್ಯೆಯ ಶಿಲ್ಪಕಲಾ ಮತ್ತು ಕಲೆ ಮತ್ತು ವಾಸ್ತುಶಿಲ್ಪ ಕೇಂದ್ರಗಳಿದ್ದು ಪ್ರವಾಸಿ ಆಕರ್ಷಣೆಗೆ ಕಾರಣವಾಗಿದೆ. ಇಲ್ಲಿನ ವೈಶಷ್ಟವೆಂದರೆ ದ್ರಾವಿಡ ಶೈಲಿಯ, ವಿಜಯನಗರ, ಮರಾಠ, ಆದಿಲ್‌ಷಾಹಿ, ಮೊಘಲ್, ಇಂಡೋ–ಸಾರ್ಸನಿಕ್, ಇಂಡೋ–ಯೂರೋಪಿಯನ್ ಶೈಲಿಯ ಕಲೆ ಮತ್ತು ವಾಸ್ತುಶಿಲ್ಪ ಕೇಂದ್ರಗಳು ಅಧಿಕವಾಗಿವೆ. ಪ್ರಾಚೀನ ಕಾಲದಿಂದಲೂ ಜಗತ್ತಿನದಾದ್ಯಂತ ಹೆಚ್ಚು ಪ್ರವಾಸಿಗರನ್ನು

ಆಕರ್ಷಣೆ ಮಾಡುತ್ತಿರುವ ಕೇಂದ್ರಗಳೇ ಈ ಸಾಂಸ್ಕೃತಿಕ ಪ್ರವಾಸಿ ನೆಲೆಗಳೆಂಬುದು ವಿಶೇಷ. ನೆಲಮಂಗಲ, ಹೊಸಕೋಟೆ, ಶಿವಗಂಗೆ, ದೇವನಹಳ್ಳಿ, ಘಾಟಿಸುಬ್ರಹ್ಮಣ್ಯ ಇನ್ನಿತರ ನೂರಾರು ನೆಲೆಗಳಲ್ಲಿ ವಾಸ್ತುಶಿಲ್ಪ ತಾಣಗಳು ಪ್ರವಾಸಿಗರನ್ನು ಸೆಳೆಯುತ್ತಿದ್ದು ಜಿಲ್ಲೆಯ ಸಂಸ್ಕೃತಿಯನ್ನು ಉಳಿಸಿ ಬೆಳೆಸುವುದರೊಂದಿಗೆ ಆರ್ಥಿಕ ಪ್ರಗತಿಯನ್ನು ಸಾಧಿಸುತ್ತಿದೆ. ಇಂತಹ ಕಲೆ ಮತ್ತು ವಾಸ್ತುಶಿಲ್ಪ ಕೇಂದ್ರಗಳನ್ನು ಅಭಿವೃದ್ಧಿಪಡಿಸಿ ಹೆಚ್ಚಿನ ಸಂಖ್ಯೆಯಲ್ಲಿ ಪ್ರವಾಸಿಗರನ್ನು ಆಕರ್ಷಣೆ ಮಾಡಬಹುದಾಗಿದೆ. ಇದರೊಂದಿಗೆ ಇಂತಹ ಕಟ್ಟಡಗಳನ್ನು ಮತ್ತು ದೇವಾಲಯಗಳನ್ನು ಸಂರಕ್ಷಣೆ ಮಾಡುವುದರೊಂದಿಗೆ ಪ್ರವಾಸೋದ್ಯಮವನ್ನು ಬೆಳೆಸಬಹುದೆಂದು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ..

ಜಿಲ್ಲೆಯಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಹಿಂದೂ ಧಾರ್ಮಿಕ ಸ್ಮಾರಕಗಳಿವೆ. ಅದ್ಭುತವಾದ ವಾಸ್ತುಶಿಲ್ಪವನ್ನು ಮತ್ತು ಐತಿಹಾಸಿಕ ಮಹತ್ವವನ್ನು ಹೊಂದಿವೆ. ಇದರೊಂದಿಗೆ ಜೈನ, ಬೌದ್ಧ ಧರ್ಮಕ್ಕೆ ಸೇರಿದ ಸ್ಮಾರಕಗಳನ್ನು ಕಂಡುಕೊಳ್ಳಲಾಗಿದೆ. ಇಂತಹ ಸ್ಮಾರಕಗಳು ಪ್ರವಾಸೋಧ್ಯಮ ತಾಣಗಳನ್ನಾಗಿ ಯೋಜನೆಗಳನ್ನು ರೂಪಿಸಿ ಅಭಿವೃದ್ಧಿಪಡಿಸುವ ಜರೂರತೆ ಇದೆ. ಹಲವು ರಾಜಮನೆತನಗಳ ಆಡಳಿತ ಕಾಲದಲ್ಲಿ ನಿರ್ಮಾಣ ಮಾಡಿರುವ ಸ್ಮಾರಕಗಳು ಪ್ರವಾಸಿ ಆಕರ್ಷಣೆಗಳಾಗಿವೆ. ಪ್ರಾಚೀನ ಕಾಲದ ದೇವಾಲಯ ಸ್ಮಾರಕಗಳಲ್ಲದೆ ನೂತನವಾಗಿ ನಿರ್ಮಾಣ ಮಾಡಿರುವ ದೇವಾಲಯಗಳು ಅಧಿಕ ಸಂಖ್ಯೆಯಲ್ಲಿ ಪ್ರವಾಸಿಗರನ್ನು ಸೆಳೆಯುವಂತಹ ಪ್ರವಾಸಿ ತಾಣಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಕಂಡುಬರುತ್ತವೆ. ಈ ನಿಟ್ಟಿನಲ್ಲಿ ಬೆಂಗಳೂರು ಜಿಲ್ಲೆಯಲ್ಲಿ ಧಾರ್ಮಿಕವಲ್ಲದ ಸ್ಮಾರಕಗಳನ್ನು ಸಂರಕ್ಷಣೆ ಮಾಡಲು ಸಹ ಸಾಧ್ಯವಾಗುತ್ತದೆ.

ಇವುಗಳಲ್ಲದೆ ಹೆಚ್ಚಿನ ಸಂಖ್ಯೆಯಲ್ಲಿ ಶಾಸನಗಳು, ವೀರಗಲ್ಲುಗಳನ್ನು ಸಹ ಬೆಂಗಳೂರು ಗ್ರಾಮಾಂತರ ಜಿಲ್ಲೆಯದಾದ್ಯಂತ ಕಂಡುಬರುತ್ತವೆ. ಇಂತಹ ಸ್ಥಳಗಳನ್ನು ವ್ಯವಸ್ಥಿತವಾಗಿ ನಿರ್ವಹಣೆ ಮಾಡುವ ಅಶ್ಯಕತ ಇದೆ. ಜಿಲ್ಲೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾರತದ ವಿವಿಧ ಭಾಗಗಳಿಂದ ಪ್ರವಾಸಿಗರನ್ನು ಆಕರ್ಷಣೆ ಮಾಡುವ ಸೂಫಿ ಸಂತರ ದರ್ಗಾಗಳು ಧಾರ್ಮಿಕ ಸಾಮರಸ್ಯವನ್ನು ಮತ್ತು ಸಾಂಸ್ಕೃತಿಕ ಸಮಾನತೆಯನ್ನು ಪ್ರತಿಪಾದಿಸುವ ತಾಣಗಳಾಗಿದ್ದು, ಜಿಲ್ಲೆಯ ಪ್ರವಾಸೋದ್ಯಮಕ್ಕೆ ಉತ್ತಮ ಕೊಡುಗೆಯನ್ನು ನೀಡುತ್ತಿವೆ. ರಾಷ್ಟ್ರೀಯ ಮಟ್ಟದಲ್ಲಿ ಪ್ರವಾಸಿಗರನ್ನು ಆಕರ್ಷಣೆ ಮಾಡುವಂತಹ ಹಲವು ದರ್ಗಾಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಕಂಡುಬರುತ್ತವೆ. ಸೂಫಿ ಸಂತರ ದರ್ಗಾಗಳಲ್ಲಿ ಆಚರಣೆ ಮಾಡುವಂತಹ ವಾರ್ಷಿಕ ಉರುಸ್ ಮತು ಅಂದು ನಡೆಯುವ ಕವ್ವಾಲಿ ಕಾರ್ಯಕ್ರಮಗಳು ಹೆಚ್ಚು ಪ್ರವಾಸಿಗರನ್ನು ಸೆಳೆಯುವಂತಹ

ನಿಟ್ಟಿನಲ್ಲಿ ಮುಖ್ಯವಾಗಿವೆ. ಇಂತಹ ಉರುಸ್‌ಗಳನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ದರ್ಗಾಗಳಲ್ಲಿ ಆಚರಣೆ ಮಾಡಲಾಗುತ್ತಿದೆ. ಇಂತಹ ದರ್ಗಾಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಬೇಕಾಗಿದೆ. ಅಲ್ಲದೆ ದರ್ಗಾಗಳನ್ನು ಸಂಪರ್ಕಿಸುವಂತಹ ರಸ್ತೆಗಳನ್ನು ಅಭಿವೃದ್ಧಿಪಡಿಸಬೇಕಾಗಿದೆ.

## 6.2 ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಸಂಪತ್ತು ಮತ್ತು ಹವಾಮಾನ ಪರಿಸ್ಥಿತಿಯ ಬಗ್ಗೆ

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಪ್ರಾಣಿ ಸಂಪತ್ತು ಮತ್ತು ಉತ್ತಮವಾದ ಪರಿಸರವನ್ನು ನೋಡಬಹುದಾಗಿದೆ. ಇಲ್ಲಿ ಮಳೆಗಾಲದಲ್ಲಿ ಹರಿಯುವಂತಹ ನದಿಗಳು, ವಿಶಿಷ್ಟವಾದ ಮೈದಾನಗಳು, ಕೆರೆಗಳು, ಬೆಟ್ಟಗಳು, ಗುಡ್ಡಗಳು, ಮರಳಿನ ರಾಶಿಗಳು, ಪ್ರಾಣಿಗಳು, ಪಕ್ಷಿಗಳು, ವನ್ಯಮೃಗಗಳು, ಪುಷ್ಪಗಳು, ಕ್ರೀಡಾ ಸ್ಥಳಗಳು ಮತ್ತು ಮನರಂಜನೆಯನ್ನು ನೀಡುವಂತಹ ಇತರ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನೀಡುವಂತಹ ಕೇಂದ್ರಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪರಿಸರ ಪ್ರವಾಸೋದ್ಯಮದ ಉತ್ಪನ್ನಗಳಾಗಿರುವುದು ಕಂಡುಬರುತ್ತದೆ. ಆನೆಗಳು, ನಕ್ಷತ್ರಗಳು, ಮೀನುಗಳು, ನವಿಲುಗಳು, ಜಿಂಕೆ, ಪಕ್ಷಿಗಳು, ಚಿಟ್ಟೆಗಳು, ಕೋಳಿಗಳು, ಧನಕರುಗಳು, ಎಮ್ಮೆಗಳು ಇನ್ನಿತರ ಬಗೆಯ ಪ್ರಾಣಿ ಪ್ರಪಂಚವನ್ನು ಜಿಲ್ಲೆಯಲ್ಲಿ ಕಂಡುಕೊಳ್ಳಲಾಗಿದೆ.

ಈ ರೀತಿಯ ಸ್ಥಳಗಳಿಗೆ ಮನರಂಜನೆಗಾಗಿ ಮತ್ತು ಮಾನಸಿಕ ನೆಮ್ಮದಿಯನ್ನು ಪಡೆಯುವ ಉದ್ದೇಶದಿಂದ ಪ್ರವಾಸಿಗರು ಭೇಟಿ ನೀಡುತ್ತಿದ್ದಾರೆ ಎಂಬುದನ್ನು ಕಂಡುಕೊಳ್ಳಲಾಗಿದೆ. ಆಕರ್ಷಣೀಯವಾದ ಬೆಟ್ಟ ಸಮೂಹಗಳು ಅಂದರೆ ಬೆಟ್ಟಶ್ರೇಣಿಗಳು ಮತ್ತು ಕಣಿವೆಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ನೋಡಬಹುದಾಗಿದೆ. ತನ್ನಲ್ಲಿನ ಪ್ರಾಕೃತಿಕ ಪರಿಸರದಿಂದಾಗಿ ಜಿಲ್ಲೆಯ ಪರಿಸರ ಪ್ರವಾಸೋದ್ಯಮ ಕ್ಷೇತ್ರವನ್ನು ಬೆಳೆಸಬಹುದಾಗಿದೆ.

ಜಿಲ್ಲೆಯ ಬೆಟ್ಟಗುಡ್ಡಗಳು ಧಾರ್ಮಿಕ ಮತ್ತು ಸಾಂಸ್ಕೃತಿಕ ಪ್ರವಾಸಿಗರ ತಾಣಗಳಷ್ಟೇ ಅಲ್ಲದೇ ಸಾಹಸ ಮತ್ತು ಚಾರಣ ಪ್ರವಾಸಿಗರಿಗೆ ಉತ್ತಮವಾದ ಅವಕಾಶಗಳನ್ನು ಕಲ್ಪಿಸಿದೆ. ಪ್ರತಿ ವಾರದ ಅಂತ್ಯಗಳಲ್ಲಿ ಬೆಂಗಳೂರು ಮತ್ತು ಇತರ ನಗರಗಳಿಂದ ಚಾರಣ ಮಾಡಲು ಮತ್ತು ಸಾಹಸಮಯವಾದ ಬೆಟ್ಟಗಳಿಗೆ ಪರ್ವತಾರೋಹಣ ಮಾಡಲು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪ್ರವಾಸ ಕೈಗೊಳ್ಳುತ್ತಿದ್ದಾರೆ. ಇಂತಹ ಸಾಹಸ ಪ್ರವಾಸೋದ್ಯಮದ ನೆಲೆಗಳನ್ನು ಹೊಂದಿರುವ ಜಿಲ್ಲೆಯಲ್ಲಿ ವ್ಯವಸ್ಥಿತವಾದ ಯೋಜನೆಗಳ ಕೊರತೆ ಕಾಡುತ್ತಿದೆ. ಚಾರಣ

ಪ್ರವಾಸೋದ್ಯಮವನ್ನು ನಿರ್ವಹಣೆ ಮಾಡುವ ನಿಟ್ಟಿನಲ್ಲಿ ಸರ್ಕಾರಗಳು ಅಷ್ಟು ಉತ್ಸಾಹದಿಂದ ಅಂದರೆ ಕ್ರೀಯಾಶೀಲವಾಗಿ ಕಾರ್ಯನಿರ್ವಹಿಸುತ್ತಿಲ್ಲ.

ನೂರಾರು ಸಂಖ್ಯೆಯಲ್ಲಿ ಚಾರಣ ಪ್ರವಾಸಿಗರು ಇಲ್ಲಿಗೆ ಭೇಟಿ ನೀಡಿದರೂ ಸಹ ಅವರಿಗೆ ಬೇಕಾಗಿರುವ ಮಾಹಿತಿ ಮತ್ತು ಮಾರ್ಗದರ್ಶನ ಹಾಗೂ ಪ್ರವಾಸಿ ಮಾಹಿತಿದಾರರ ಕೊರತೆಯು ಎದ್ದು ಕಾಣುತ್ತಿದೆ. ಸ್ವಯಂ ಆಸಕ್ತಿಯಿಂದ ಹಾಗೂ ತಮ್ಮ ಸ್ವಂತ ವ್ಯವಸ್ಥೆಯನ್ನು ಮಾಡಿಕೊಂಡು ಬರುವ ಪ್ರವಾಸಿಗರು ಸಂಖ್ಯೆಯು ಅಧಿಕವಾಗಿದೆ. ಶಿವಗಂಗೆಬೆಟ್ಟ, ಮತ್ತು ಇತರ ಬೆಟ್ಟಗುಡ್ಡಗಳು ಅತ್ಯಂತ ಹೆಚ್ಚಿನ ಸಂಖ್ಯೆಯಲ್ಲಿ ಸಾಹಸ ಪ್ರವಾಸಿಗರನ್ನು ಸೆಳೆಯುತ್ತಿರುವ ಬೆಟ್ಟಗಳಲ್ಲಿ ಪ್ರಧಾನವಾಗಿವೆ. ಇಂತಹ ಸಾಹಸ ಪ್ರವಾಸೋದ್ಯಮ ಕೇಂದ್ರಗಳಿಂದಾಗಿ ಜಿಲ್ಲೆಯ ಸಾಂಕ್ಕೃತಿಕ, ಪರಿಸರ ಮತ್ತು ಐತಿಹಾಸಿಕ ಮಹತ್ವವನ್ನು ಪ್ರಸರಿಸಲು ಕಾರಣವಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಸುಸ್ಥಿರ ಪ್ರವಾಸೋದ್ಯಮವನ್ನು ಬೆಳೆಸಲು ಸಹಾಯಕಾರಿಯಾಗಿದೆ. ಇಲ್ಲಿನ ಬೆಟ್ಟಗುಡ್ಡಗಳ ಮಹತ್ವವನ್ನು ತಿಳಿಸುವುದರೊಂದಿಗೆ ಪರಿಸರದ ಬಗ್ಗೆ ಕಾಳಜಿಯನ್ನು ಸಹ ಉಂಟುಮಾಡುತ್ತಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಹಲವು ಚಾರಣ ಪ್ರವಾಸಿ ತಾಣಗಳ್ಳಿದ್ದು, ಚಾರಣ ಪ್ರವಾಸಿಗರ ತರಬೇತಿ ಕೇಂದ್ರಗಳು ಮತ್ತು ಸಂಘಗಳು ಅಸ್ಥಿತ್ವವನ್ನು ಪಡೆದುಕೊಳ್ಳುಲು ಉತ್ತಮವಾದ ಅವಕಾಶವನ್ನು ಹೊಂದಿದೆ. ಈ ನಿಟ್ಟಿನಲ್ಲಿ ಸ್ಥಳೀಯರು, ಜನಪ್ರತಿನಿಧಿಗಳು, ಸಂಘಸಂಸ್ಥೆಗಳು ಮತ್ತು ಸರ್ಕಾರಗಳು ಕ್ರಿಯಾಶೀಲವಾಗಿ ಭಾಗವಹಿಸಿ ಪ್ರೋತ್ಸಾಹ ನೀಡುವ ಅಗತ್ಯತೆ ಕಂಡುಬರುತ್ತದೆ.

ಸಾಹಸ ಪ್ರವಾಸಿಗಳನ್ನು ಮಾತ್ರ ಆಯೋಜನೆ ಮಾಡುವುದಲ್ಲದೇ ಪರಿಸರದ ಬಗ್ಗೆ ಮತ್ತು ಬೆಟ್ಟಗುಡ್ಡಗಳ ವನ್ಯಜೀವಿಗಳ ಮಹತ್ವ ಮತ್ತು ಸಂರಕ್ಷಣೆಯ ಬಗ್ಗೆ ಜಾಗೃತಿಯನ್ನು ಸಹ ಮೂಡಿಸುತ್ತಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸುಸ್ಥಿರ ಪ್ರವಾಸೋದ್ಯಮ ಬೆಳವಣಿಗೆಯಲ್ಲಿ ಬಹು ಮುಖ್ಯವಾದ ಪಾತ್ರವನ್ನು ವಹಿಸಿತ್ತದೆ. ಬೆಟ್ಟಗಳಲ್ಲಿನ ವಿಭಿನ್ನವಾದ ಪ್ರಾಣಿ–ಪಕ್ಷಿಗಳನ್ನು ಮತ್ತು ಜೀವಿಗಳನ್ನು ಗುರ್ತಿಸಿ ಅವುಗಳ ಮಹತ್ವವನ್ನು ತಿಳಿಸಿಕೊಡುತ್ತಿದೆ. ಪ್ರಾಣಿವರ್ಗ, ಸಸ್ಯವರ್ಗಗಳನ್ನು ಒಳಗೊಂಡಂತೆ ಜಿಲ್ಲೆಯ ಪ್ರಾಕೃತಿಕ ಪರಿಸರ ಸಂರಕ್ಷಣೆಯ ಜೊತೆ ಜೊತೆಗೆ ಸಾಹಸ ಪ್ರವಾಸೋದ್ಯಮವನ್ನು ಪ್ರಚುರಪಡಿಸುತ್ತಿದೆ. ಈಗಾಗಲೇ ಹಲವು ಸಾಹಸಮಯವಾದ ಚಾರಣ ಪ್ರವಾಸಗಳನ್ನು ಆಯೋಜಿಸಿದೆ. ಈ ರೀತಿಯಲ್ಲಿ ಬಹಳ ಉತ್ತಮವಾದ ಕೆಲಸವನ್ನು ಮಾಡುತ್ತಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಚಾರಣ ಪ್ರವಾಸೋದ್ಯಮದಲ್ಲಿ ತನ್ನದೇ ಆದ ಪ್ರಧಾನ ಪಾತ್ರವನ್ನು ಹೊಂದಿದೆ.

ಹಲವು ಪ್ರವಾಸಿ ಆಕರ್ಷಣೆಗಳು ಮತ್ತು ಉತ್ತಮವಾದ ಪರಿಸರವನ್ನು ಹೊಂದಿರುವ ಶಿವಗಂಗೆಯು ಸಾಹಸ ತಾಣವಾಗಿದೆ. ಈ ಬೆಟ್ಟದಿಂದ ಕೇಬಲ್ ಕಾರು ಮತ್ತು ರೋಪ್ ವೇ ವ್ಯವಸ್ಥೆಯನ್ನು ಕಲ್ಪಿಸಿದರೆ ಮತ್ತಷ್ಟು ಪ್ರವಸಿಗರನ್ನು ಆಕರ್ಷಣೆ ಮಾಡಬಹುದಾಗಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆ ಹಾಗೂ ಇತರ ನಗರಗಳಿಂದಲೂ ಪ್ರವಾಸಿಗರನ್ನು ಸೆಳೆಯಲು ಸಾಧ್ಯವಾಗುತ್ತದೆ. ಈ ಮೂಲಕ ಸ್ಥಳೀಯರಿಗೆ ಉದ್ಯೋಗ ಮತ್ತು ಆದಾಯವನ್ನು ನೀಡುವಂತಹ ಸಹಾಯಕ ಸೇವೆಗಳಿಗೆ ಬೇಡಿಕೆ ಉಂಟಾಗಿ ಆರ್ಥಿಕ ಪ್ರಗತಿಯು ಸಾಧ್ಯವಾಗುತ್ತದೆ. ಈ ನಿಟ್ಟಿನಲ್ಲಿ ಸ್ಥಳೀಯ ಜನಪ್ರತಿಧಿಗಳು ಮತ್ತು ಸಂಘಸಂಸ್ಥೆಗಳು ಯೋಜಿತ ರೀತಿಯಲ್ಲಿ ಪ್ರಯತ್ನದ ಅವಶ್ಯಕತೆಯಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಹಲವು ಸ್ಥಳಗಳಲ್ಲಿ ದೋಣಿ ವಿಹಾರ ಕೇಂದ್ರಗಳನ್ನು ಸ್ಥಾಪನೆ ಮಾಡಲು ಉತ್ತಮ ಅವಾಕಾಶಗಳಿವೆ. ಅವುಗಳಲ್ಲಿ ಪ್ರಮುಖವಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಇರುವ ದೊಡ್ಡಕೊರಟಗೆರೆ ಕೆರೆ, ದೇವರಹೊಸಹಳ್ಳಿ ಕೆರೆ, ಮಣ್ಣೆಯ ದೊಡ್ಡ ಕೆರಗಳನ್ನು ಪ್ರವಾಸಿಗರನ್ನು ಸೆಳೆಯುವಂತಹ ದೋಣಿ ವಿಹಾರದಾಮಗಳಾಗಿ ಅಭಿವೃದ್ಧಿಪಡಿಸಬಹುದಾಗಿದೆ. ಇಂತಹ ಹಲವು ಅವಕಾಶಗಳನ್ನು ಮತ್ತು ಪ್ರಾಕೃತಿಕ ಸಂಪನ್ಮೂಲಗಳನ್ನು ಬಳಸಿಕೊಂಡು ಯೋಜಿತ ರೀತಿಯಲ್ಲಿ ಜಿಲ್ಲೆಯಲ್ಲಿನ ಪ್ರವಾಸೋದ್ಯಮವನ್ನು ಇನ್ನಷ್ಟು ಬೆಳೆಸಬಹುದಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಇಂದಿನ ಆಧುನಿಕ ಕಾಲದಲ್ಲಿಯೂ ರಾಷ್ಟ್ರಮಟ್ಟದಲ್ಲಿ ಪ್ರಖ್ಯಾತಿಯನ್ನು ಪಡೆದಿರುವ ಡಾ. ಶ್ರೀ ಶ್ರೀ ಶಿವಕುಮಾರ್ ಸ್ವಾಮೀಜಿಯವರ ತಾಂತ್ರಿಕ ಮಹಾವಿದ್ಯಾಲಯ ಮತ್ತು ಸಿದ್ದಾರ್ಥ ಮೆಡಿಕಲ್ ಶಿಕ್ಷಣ ಮಹಾವಿದ್ಯಾಲಯಗಳು ವೈದ್ಯಕೀಯ ಮತ್ತು ತಾಂತ್ರಿಕ ಶಿಕ್ಷಣ ಕ್ಷೇತ್ರದಲ್ಲಿ ಹೆಸರುಗಳಿಸಿವೆ. ದೇಶಿಯ ಮತ್ತು ಅಂತರರಾಷ್ಟ್ರೀಯ ವಿದ್ಯಾರ್ಥಿಗಳನ್ನು ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಸೆಳೆಯುತ್ತಿರುವುದು ಕಂಡುಬರುತ್ತದೆ. ಈ ನಿಟ್ಟಿನಲ್ಲಿ ಜಿಲ್ಲೆಗೆ ಹಚ್ಚಿನ ಸಂಖ್ಯೆಯ ವಿದ್ಯಾರ್ಥಿಗಳು ಆಗಮಿಸಿ ಶೈಕ್ಷಣಿಕ ಪ್ರವಾಸೋದ್ಯಮ ಕ್ಷೇತ್ರವು ಅಭಿವೃದ್ಧಿಯಾಗಲು ಸಹಾಯಕವಾಗಿರುವುದನ್ನು ಕಾಣಬಹುದಾಗಿದೆ.

ಹಲವು ಶತಮಾನಗಳಿಂದ ಜಿಲ್ಲೆಯಲ್ಲಿ ಮುಖ್ಯವಾಗಿ ಗ್ರಾಮೀಣ ಪ್ರದೇಶದಲ್ಲಿ ನಾಟಿ ವೈದ್ಯ ಪದ್ದತಿಯು ಹೆಚ್ಚು ಪ್ರಖ್ಯಾತಿಯನ್ನು ಪಡೆದಿರುವುದು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ. ಇತಂಹ ವೈದ್ಯಕೀಯ ಸ್ಥಳಗಳಲ್ಲಿ ಬೇರೆ ಬೇರೆ ಪ್ರದೇಶಗಳಿಗೆ ಚಿಕಿತ್ಸೆಯನ್ನು ಮತ್ತು ಉಪಕ್ರಮವನ್ನು ಪಡೆಯಲು ರೋಗಿಗಳು ಬೇಟಿ ನೀಡುತ್ತಿದ್ದಾರೆ. ಇಂತಹ ಸ್ಥಳಗಳಲ್ಲಿ ಪ್ರವಾಸಗರು ತಮ್ಮ ಪ್ರವಾಸದ ಅವದಿಯಲ್ಲಿ ಹಲವು ಆರ್ಥಿಕ ಚಟುವಟಿಕೆಗಳಲ್ಲಿ ಕೈಗೊಳ್ಳುತ್ತಿದ್ದಾರೆ. ಈ

ರೀತಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವೈದ್ಯಕೀಯ ಮತ್ತು ಆರೋಗ್ಯ ಪ್ರವಾಸೋದ್ಯಮ ಕ್ಷೇತ್ರದಲ್ಲಿ ಮಹತ್ವದ ಸ್ಥಾನವನ್ನು ಪಡೆದುಕೊಂಡಿರುವುದನ್ನು ಕಾಣಬಹುದಾಗಿದೆ. ಇಂತಹ ಆಯುರ್ವೇದ ಚಿಕಿತ್ಸಾ ಕ್ರಮಗಳನ್ನು ಇಂದು ಪ್ರವಾಸೋದ್ಯಮದ ಭಾಗವಾಗಿರುವುದನ್ನು ಕಾಣಬಹುದಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕೈಗಾರಿಕೆಗಳ ಉದ್ಯಮದಲ್ಲಿ ಪ್ರಸಿದ್ಧಿಯನ್ನು ಪಡೆದಿದೆಎಲ್ ಎಮ್ ವಿಂಡ್ ಪವರ್ಸ್ ಕೈಗಾರಿಕೆಯು ಜಾಗತೀಕ ಮಟ್ಟದಲ್ಲಿ ಹೆಸರನ್ನು ಪಡೆದುಕೊಂಡಿತ್ತು. ಸರಿಸುಮಾರು ಭಾರತದ ವಾಯು ವಿದ್ಯುತ್ ಉತ್ಪಾದನೆ ಮಾಡುವುದಲ್ಲದೆ ಅಂತರಷ್ಟ್ರೀಯ ಮಟ್ಟದಲ್ಲಿ ಮಾರುಕಟ್ಟೆಯನ್ನು ಪಡೆದಿದೆ. ಸಾವಿರಾರು ಸಂಖ್ಯೆಯ ಜನರಿಗೆ ಉದ್ಯೋಗವನ್ನು ಒದಗಿಸಿತ್ತು. ಜಿಲ್ಲೆಯ ಡಾಬಸ್‌ಪೇಟ್ ಕೈಗಾರಿಕವು ಅಂದು ನಿರ್ಮಾಣ ಮಾಡಿದ ಹಲವು ಆಡಳಿತ ಮತ್ತು ಧಾರ್ಮಿಕ ಕಟ್ಟಡಗಳು ಪ್ರವಾಸೋದ್ಯಮದ ಉತ್ಪನ್ನವಾಗಿವೆ. ಈ ನಿಟ್ಟಿನಲ್ಲಿ ಡಾಬಸ್‌ಪೇಟ್ ಉತ್ತಮ ಪ್ರವಾಸಿ ತಾಣವಾಗಲು ಮತ್ತು ಆರ್ಥಿಕ ಪ್ರವಾಸೋದ್ಯಮ ಕ್ಷೇತ್ರಕ್ಕೆ ಕೈಗಾರಿಕೆ ಮತ್ತುಇತರ ಉದ್ಯಮಗಳಿಗೆ ಮಹತ್ವದ ಕೊಡುಗೆಯನ್ನು ನೀಡಿರುವುದು ಕಂಡುಬರುತ್ತಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಸಾಂಪ್ರದಾಯಿಕ ಉದ್ಯಮಗಳ ಜೊತೆಗೆ ಆಧುನಿಕ ಕೈಗಾರಿಕೆಗಳು ಸ್ಥಾಪನೆಗೊಂಡು ಕಾರ್ಯನಿರ್ವಹಿಸುತ್ತಿವೆ.

ಇದರಂತೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಹಲವು ನೂತನ ಕೈಗಾರಿಕೆಗಳಿದ್ದು ಆರ್ಥಿಕ ಪ್ರಗತಿಗೆ ಕಾರಣೀಭೂತವಾಗಿದೆ. ಅವುಗಳಲ್ಲಿ ಕಾರು ಮಾರಾಟದ ಮಾರುತಿ ಸುಜುಕಿ, ಪವನಶಕ್ತಿ ಉತ್ಪಾದನಾ ಎಲ್.ಎಮ್ ವಿಂಡ್ ಪವರ್ ಅಂತರಾಷ್ಟ್ರೀಯ ಮಟ್ಟದಲ್ಲಿ ಮಾರುಕಟ್ಟೆಯನ್ನು ಹೊಂದಿದೆ. ಪ್ರಧಾನವಾಗಿ ಮತ್ತು ನೇರವಾಗಿ ಉದ್ಯೋಗ, ಬಂಡವಾಳ ಸಂಚಯನ, ತಂತ್ರಜ್ಞನರ ಚಲನೆ, ಊಟ ಮತ್ತು ವಸತಿ ಉದ್ಯಮಗಳ ಬೆಳವಣಿಗೆ, ಸಾರಿಗೆ ಮತ್ತು ಸಂಪರ್ಕ ಕ್ಷೇತ್ರ, ಸರ್ಕಾರಕ್ಕೆ ಆದಾಯ, ಅಧ್ಯಯನ ಪ್ರವಾಸಗಳು, ತಲಾದಾಯದ ಹೆಚ್ಚಳ ಹೀಗೆ ಹಲವು ನೇರ ಪ್ರಯೋಜನಗಳು ಇದರಿಂದ ಸಾಧ್ಯವಾಗುತ್ತಿವೆ. ಹೀಗೆ ಬೃಹತ್ ಉದ್ಯಮಗಳು ಜಿಲ್ಲೆಯ ಆರ್ಥಿಕ ಪ್ರವಾಸೋದ್ಯಮ ಅಭಿವೃದ್ಧಿಯಲ್ಲಿ ಮುಖ್ಯವಾದ ಪಾತ್ರವನ್ನು ವಹಿಸುತ್ತಿರುವುದು ಕಂಡು ಬರುತ್ತದೆ.

ಬಟ್ಟೆ ಉದ್ಯಮಗಳು ಜಿಲ್ಲೆಯಲ್ಲಿ ಅಸ್ಥಿತ್ವದಲ್ಲಿದ್ದು ತಮ್ಮ ವ್ಯಾಪಾರ ಮುಖಾಂತರವಾಗಿ ಜಿಲ್ಲೆಯ ಆರ್ಥಿಕ ಪ್ರವಾಸಕ್ಕೆ ಕಲ್ಪಿಸುತ್ತಿವೆ. ಇವುಗಳಲ್ಲದೇ. ರೇಷ್ಮೆ ಉತ್ಪಾದನೆ ಮತ್ತು ರೇಷ್ಮೆ ಬಟ್ಟೆ ನೇಯ್ಗೆ ಕೈಗಾರಿಕೆಗಳು ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ಸಾವಿರಾರು ಜನರಿಗೆ ನೇರ ಮತ್ತು

ಪರೋಕ್ಷವಾಗಿ ಉದ್ಯೋಗವನ್ನು ಕಲ್ಪಿಸುತ್ತಿದ್ದು, ಬಂಡವಾಳ ಸಂಚಯನ ಮತ್ತು ಪ್ರವಾಸೋದ್ಯಮಕ್ಕೆ ಪೂರಕವಾಗಿರುವ ಉದ್ಯಮಗಳಾಗಿವೆ. ಗುಡಿ ಮತ್ತು ಸಣ್ಣ ಪ್ರಮಾಣದ ಉದ್ಯಮಗಳೂ ಸಹ  ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿವೆ. ಹಲವು ಶತಮಾನಗಳಿಂದ ವಿಸ್ತೃತ ಮಾರುಕಟ್ಟೆಯನ್ನು ಹೊಂದಿರುವ ಅಗರಭತ್ತಿ, ಬುಟ್ಟಿ ನೇಯ್ಗೆ ಮತ್ತು ಇತರ ಉದ್ಯಮಗಳು ಜನರು ಆರ್ಥಿಕ ಉದ್ದೇಶಕ್ಕಾಗಿ ಪ್ರಯಾಣ ಮಾಡಲು ಅವಕಾಶವನ್ನು ಮೂಡಿಸಿವೆ, ಇದರಿಂದಾಗಿ ಉತ್ಪಾದನೆ, ಮಾರಾಟ, ಮಾರುಕಟ್ಟೆ ಅಧ್ಯಯನ, ಬಂಡವಾಳ ಹೂಡಿಕೆ, ಹೀಗೆ ಹಲವು ವಿಧಗಳಲ್ಲಿ ಆರ್ಥಿಕ ಪ್ರವಾಸೋದ್ಯಮ ಅಭಿವೃದ್ಧಿಗೆ ಕಾರಣವಾಗಿವೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹೈನುಗಾರಿಕೆ ಮತ್ತು ತೋಟಗಾರಿಕೆ ಉದ್ಯಮಗಳು ಆರ್ಥಿಕ ಪ್ರವಾಸೋದ್ಯಮಕ್ಕೆ ಮಹತ್ವದ ಕೊಡುಗೆಯನ್ನು ನೀಡುತ್ತಿವೆ. ಜಿಲ್ಲೆಗೆ ಹೈನುಗಾರಿಕೆ ಮತ್ತು ತೋಟಗಾರಿಕೆ ಉತ್ಪನ್ನಗಳನ್ನು ವೀಕ್ಷಣೆ ಮಾಡಲು, ಮತ್ತು ವ್ಯಾಪಾರಕ್ಕಾಗಿ ಅಧಿಕ ಸಂಖ್ಯೆಯಲ್ಲಿ ಪ್ರವಾಸಿಗರು ಭೇಟಿ ನೀಡಲು ಕಾರವಾಗಿವೆ. ಈ ನಿಟ್ಟಿನಲ್ಲಿ ಸರ್ಕಾರಗಳು ಖಾಸಗಿ ಸಹಭಾಗಿತ್ವದಲ್ಲಿ ಮೂಲಭೂತ ಸೌಲಭ್ಯಗಳನ್ನು ಮತ್ತು ಮಾಹಿತಿ ಹಾಗೂ ಪ್ರಚಾರವನ್ನು ಮಾಡುವುದರೊಂದಿಗೆ ಇನ್ನಷ್ಟು ಜಿಲ್ಲೆಯ ಆರ್ಥಿಕ ಪ್ರವಾಸೋದ್ಯಮ ಕ್ಷೇತ್ರವನ್ನು ಅಭಿವೃದ್ಧಿಪಡಿಸಬಹುದಾಗಿದೆ.

## 6.3 ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಮೂಲಭೂತ ಸೌಕರ್ಯಗಳ ವಿಶ್ಲೇಷಣೆ

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ವಿಭಿನ್ನ ಬಗೆಯ ಪ್ರವಾಸೋದ್ಯಮ ಕ್ಷೇತ್ರಗಳನ್ನುಅಭಿವೃದ್ಧಿಪಡಿಸಲು ಸಂಪನ್ಮೂಲಗಳನ್ನು ಮತ್ತು ಅವಕಾಶವನ್ನು ಹೊಂದಿದೆ. ಇಂತಹ ಅವಕಾಶಗಳನ್ನು ಬಳಸಿಕೊಂಡು ಪ್ರವಾಸಿಗರನ್ನು ಆಕರ್ಷಣೆ ಮಾಡುವಂತಹ ಕಾರ್ಯಕ್ರಮಗಳನ್ನು ಯೋಜನೆಗಳನ್ನು ರೂಪಿಸಿ ಜಾರಿಗೆ ತರಬೇಕಾಗಿರುವ ಅನಿವಾರ್ಯತೆ ಕಂಡುಬರುತ್ತದೆ. ಜಿಲ್ಲೆಯಲ್ಲಿನ ಪ್ರವಾಸಿ ತಾಣಗಳಲ್ಲಿ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಬೇಕಾಗಿದೆ. ಪ್ರವಾಸಿಗರಿಗೆ ಅವಶ್ಯಕವಾಗಿರುವ ಪ್ರವಾಸಿ ವಸತಿ ನಿಲಯಗಳನ್ನು ಮತ್ತು ಹೊಟೇಲ್‌ಗಳನ್ನು ನಿರ್ಮಾಣ ಮಾಡಲು ಪ್ರೋತ್ಸಾಹ ನೀಡಬೇಕಾಗಿದೆ. ಮುಖ್ಯ ರಸ್ತೆ ಮತ್ತು ಕೂಡು ರಸ್ತಗಳಲ್ಲಿ ಪ್ರವಾಸಿ ತಾಣಗಳ ಪಟ್ಟಿಯೊಂದಿಗೆ ಮಾರ್ಗ ಸೂಚಿಗಳನ್ನು ಒಳಗೊಂಡ ಮಾಹಿತಿ ಫಲಕಗಳನ್ನು ಅಳವಡಿಸಿದರೆ ಪ್ರವಾಸಿಗರಿಗೆ ಅನುಕೂಲವಾಗುತ್ತದೆ.

ಪತ್ರಿಕೆಗಳಲ್ಲಿ ಮತ್ತು ಸಂವಹನ ಮಾಧ್ಯಮಗಳಲ್ಲಿ  ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಎಲ್ಲಾ ಬಗೆಯ ಪ್ರವಾಸಿ ತಾಣಗಳ ಬಗ್ಗೆ ಪರಿಚಯ ಮತ್ತು ಪ್ರಚಾರವನ್ನು ಮಾಡಿದರೆ ಹೆಚ್ಚು ಪ್ರವಾಸಿಗರನ್ನು ಜಿಲ್ಲೆಗೆ ಆಕರ್ಷಣೆ ಮಾಡುವ ಮೂಲಕ ಪ್ರವಾಸೋದ್ಯಮವನ್ನು

ಅಭಿವೃದ್ಧಿಪಡಿಸಬಹುದಾಗಿದೆ. ಜಿಲ್ಲೆ ಮಟ್ಟದಲ್ಲಿ ಪ್ರವಾಸೋದ್ಯಮ ಅಭಿವೃದ್ಧಿ ಸಮಿತಿಯು ಜಿಲ್ಲೆಯಲ್ಲಿ ಪ್ರವಾಸಿ ತಾಣಗಳ ಅಭಿವೃದ್ಧಿಯ ಹಿನ್ನಲೆಯಲ್ಲಿ ಸಮಗ್ರವಾದ ಯೋಜನೆಗಳನ್ನು ರೂಪಿಸಬೇಕಾಗಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಐತಿಹಾಸಿಕ, ಧಾರ್ಮಿಕ, ಪಾರಂಪರಿಕ, ಪರಿಸರ, ಶೈಕ್ಷಣಿಕ, ಸ್ಮಾರಕಗಳು, ಆರ್ಥಿಕ ಮತ್ತು ಮನರಂಜನಾ ಪ್ರವಾಸಿ ತಾಣಗಳನ್ನು ಸಂಪರ್ಕ ಕಲ್ಪಿಸುವಂತಹ ಪ್ರವಾಸಿ ಜಾಲಗಳನ್ನು ಅಭಿವೃದ್ಧಿ ಪಡಿಸಿದರೆ ಹೆಚ್ಚು ಪ್ರವಾಸಿಗರನ್ನು ಸೆಳೆಯಬಹುದಾಗಿದೆ.

ಮೂಲಭೂತ ಸೌಕರ್ಯಗಳಾದ ವಸತಿಗೃಹ, ಹೋಟೆಲ್, ಮಾರುಕಟ್ಟೆ, ಸಾರಿಗೆ ವ್ಯವಸ್ಥೆಯನ್ನು ನಿರ್ಮಾಣ ಮಾಡಿದರೆ ಮತ್ತಷ್ಟು ಹೆಚ್ಚಿನ ಸಂಖ್ಯೆಯಲ್ಲಿ ಪ್ರವಾಸಿಗರನ್ನು ಸೆಳೆಯಲು ಕಾರಣವಾಗುತ್ತದೆ. ಇದರೊಂದಿಗೆ ಸ್ಥಳೀಯ ಆರ್ಥಿಕ ಪ್ರಗತಿಗೆ ಪ್ರೇರಣೆ ದೊರೆಯುತ್ತದೆ. ಸ್ಥಳೀಯ ಪರಿಸರ ಸಂರಕ್ಷಣೆ ಮಾಡುವುದರೊಂದಿಗೆ ಸುಸ್ಥಿರ ಪ್ರವಾಸೋದ್ಯಮ ತಾಣವನ್ನಾಗಿ ಅಭಿವೃದ್ಧಿಪಡಿಸಬಹುದಾಗಿದೆ. ಶಿವಗಂಗೆ ಬೆಟ್ಟದ ಸುತ್ತಲಿನ ನೈಸರ್ಗಿಕ ಸಂಪತ್ತನ್ನು ಕಾಪಾಡುವುದರೊಣದಿಗೆ ಅತ್ಯುತ್ತಮ ಪ್ರವಾಸಿ ತಾಣವನ್ನಾಗಿ ನಿರ್ಮಾಣ ಮಾಡಬಹುದಾಗಿದೆ.

ಇಂತಹ ಪ್ರವಾಸಿ ಪೂರಕವಾದ ಕಾರ್ಯಕ್ರಮಗಳನ್ನು ಮತ್ತು ಯೋಜನೆಗಳನ್ನು ರೂಪಿಸಿ ಜಾರಿಗೊಳಿಸಿದರೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಸರ್ವತೋಮುಖ ಬೆಳವಣಿಗೆಗೆ ಕಾರಣೀಭೂತವಾಗುತ್ತದೆ. ಈಗಾಗಲೇ ಇಲ್ಲಿರುವ ಸಿದ್ದಲಿಂಗೇಶ್ವರ ಮತ್ತು ಮಹ್ಮಮದ್ ಖಾದರ್ ಮತ್ತು ಬಾಬಾಜಾನ್ ದರ್ಗಾಗಳು ರಾಷ್ಟ್ರ ಖ್ಯಾತಿಯನ್ನು ಪಡೆದಿದ್ದು ವರ್ಷವಿಡೀ ನೂರಾರು ಪ್ರವಾಸಿಗರು ಇಲ್ಲಿ ಭೇಟಿ ನೀಡುತ್ತಿದ್ದು, ಮೇಲಿನ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡರೆ ಮತ್ತಷ್ಟು ಪ್ರವಾಸೋದ್ಯಮವನ್ನು ಅಭಿವೃದ್ಧಿಪಡಿಸಲು ಸಹಾಯಕವಾಗುತ್ತದೆ..

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಪ್ರವಾಸೋದ್ಯಮ ಕ್ಷೇತ್ರದಿಂದ ನೇರವಾಗಿ ಪ್ರಯೋಜನವನ್ನು ಪಡೆದಿರುವ ಕೆಲವು ಉದ್ಯಮಗಳು ಮತ್ತು ಅವುಗಳಲ್ಲಿ ಉದ್ಯೋಗ ನೀಡಿದ ಸಂಖ್ಯೆಯು ಈ ರೀತಿಯಲ್ಲಿವೆ. ಕೇವಲ ಪ್ರವಾಸಿಗರು ಹೆಚ್ಚಿನ ಸಂಖ್ಯೆಯಲ್ಲಿ ಭೇಟಿ ನೀಡುವಂತಹ ಸ್ಥಳಗಳನ್ನು ಮಾತ್ರ ಪರಿಗಣಿಸಿ ಮಾಡಿದ ಅಧ್ಯಯನದ ಫಲಿತಾಂಶಗಳಾಗಿವೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಹರಡಿಕೊಂಡಿರುವ ನೂರಾರು ಸಂಖ್ಯೆಯ ಪ್ರವಾಸಿ ತಾಣಗಳಲ್ಲಿ ಅಧಿಕ ಸಂಖ್ಯೆಯಲ್ಲಿ ನೇರ ಉದ್ಯೋಗವನ್ನು ನೀಡಿರುವುದು ಈ ಸಂಶೋಧನೆಯ ಕ್ಷೇತ್ರ ಕಾರ್ಯ ಸಂಧರ್ಭದಲ್ಲಿ ಕಂಡು ಬಂದಿದೆ.

## 6.4 ಅಧ್ಯಯನದ ಶೋಧನಾಂಶಗಳು

ಪ್ರಸ್ತುತ ಸಂಶೋಧನೆಯಲ್ಲಿ ಹಲವು ಉದೇಶಗಳನ್ನು ಹೊಂದಿದ್ದು, ಸಂಶೋಧನೆಯನ್ನು ಪ್ರಾರಂಭಿಸಲಾಗಿತ್ತು. ಪ್ರಸ್ತುತ ಈ ಸಂಶೋಧನಾ ಪ್ರಬಂಧವು ಆ ಉದ್ದೇಶಗಳನ್ನು ಈಡೇರಿಸುವ ನಿಟ್ಟಿನಲ್ಲಿ ಹೆಚ್ಚು ಪೂರ್ಣವಾಗಿದೆ ಎನ್ನಬಹುದು. ಆರಂಭದಲ್ಲಿನ ಸಂಶೋಧನಾ ಪ್ರಮೇಯವು ಈ ಸಂಶೋಧನೆಯಲ್ಲಿ ಪೂರ್ಣಗೊಂಡಿರುವ ಬಗ್ಗೆ ಮೇಲೆ ವಿವರಿಸಲಾಗಿದೆ. ಅಲ್ಲದೆ ಈ ಅಧ್ಯಯನದಿಂದ ಹಲವು ಶೋಧನಾಂಶಗಳನ್ನು ಮತ್ತು ಫಲಿತಾಂಶಗಳನ್ನು ಕಂಡುಕೊಳ್ಳಲು ಸಾಧ್ಯವಾಗಿದೆ. ಈಗಾಗಲೇ ಈ ಸಂಶೋಧನೆಯಲ್ಲಿ ಕಂಡುಕೊಳ್ಳಲಾದ ಅಂಶಗಳಲ್ಲಿ ಪ್ರಮುಖವಾದವುಗಳೆಂದರೆ

1. ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಪ್ರವಾಸಿಗರ ಆಗಮನದಿಂದ ಸ್ಥಳೀಯರಲ್ಲಿ ಸಾಮಾಜಿಕ ಮತ್ತು ಸಮಾನತೆಯ ಹೆಮ್ಮೆ ಮತ್ತು ಗೌರವ ಅಧಿಕವಾಗುತ್ತಿದೆ ಹಾಗೂ ಸ್ವಾಭಿಮಾನದ ಬೆಳವಣಿಗೆಯಾಗಲು ಕಾರಣವಾಗಿದೆ.
2. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಂಪರೆಯ ಬಗ್ಗೆ ಅರಿವು ಉಂಟುಮಾಡುವಂತಹ ಧಾರ್ಮಿಕ, ಐತಿಹಾಸಿಕ ಮತ್ತು ಪಾರಂಪರಿಕ ಸ್ಮಾರಕಗಳನ್ನು ಕಾಣಬಹುದಾಗಿದೆ.
3. ಜಿಲ್ಲೆಯಲ್ಲಿ, ಪ್ರವಾಸೋದ್ಯಮದಿಂದ ಸಾಂಸ್ಕೃತಿಕ ಸಮ್ಮಿಲನಕ್ಕೆ ಕಾರಣವಾಗುತ್ತದೆ.
4. ಸ್ಥಳೀಯ ವ್ಯಾಪಾರ ಮತ್ತು ಸಣ್ಣ ಉದ್ಯಮಗಳಿಗೆ ಉತ್ತೇಜನ ದೊರೆಯುತ್ತದೆ.
5. ಜಿಲ್ಲೆಯಲ್ಲಿ, ಪ್ರವಾಸೋದ್ಯಮ ಚಟುವಟಿಕೆಯಿಂದ ಸ್ಥಳೀಯ ಪ್ರವಾಸಿ ಕೇಂದ್ರಗಳಲ್ಲಿ ಜನರ ಮತ್ತು ಪ್ರವಾಸಿಗರ ನಡುವೆ ಉತ್ತಮ ಬಾಂದವ್ಯ ಬೆಳವಣಿಗೆಗೆ ಅವಕಾಶ ನೀಟುತ್ತದೆ.
6. ಪ್ರವಾಸೋದ್ಯಮದಿಂದಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿನ ಸ್ಥಳೀಯ ಮತ್ತು ಪ್ರವಾಸಿ ಕೇಂದ್ರಗಳಲ್ಲಿನ ಪ್ರಕೃತಿಯನ್ನು ಸಂರಕ್ಷಣೆ ಮಾಡಲು ಸಾಧ್ಯವಾಗುತ್ತದೆ.
7. ಪ್ರವಾಸೋದ್ಯಮದಿಂದಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿನ ಭವ್ಯ ಪರಂಪರೆಯನ್ನು ಪ್ರಚಾರಗೊಳಿಸಲು ಸಾಧ್ಯವಾಗುತ್ತದೆ.
8. ಹಲವು ವಿಭಿನ್ನ ರಾಜಮನೆತನಗಳು ಪ್ರಸಿದ್ಧ ಸ್ಥಳಗಳ ಬಗ್ಗೆ ಐತಿಹಾಸಿಕ ಪ್ರಜ್ಞೆ ಬೆಳೆಸುತ್ತಿದೆ.
9. ಸ್ಥಳೀಯ ಮತ್ತು ಅವಲಂಭಿತ ಕೈಗಾರಿಕೆಗಳ ಅಭಿವೃದ್ಧಿಗೆ ಉತ್ತೇಜನ ನೀಡುತ್ತಿದೆ.
10. ತಂತ್ರಜ್ಞಾನ, ವಿಜ್ಞಾನ ಮತ್ತು ಸಾರಿಗೆ–ಸಂಪರ್ಕ ಕ್ಷೇತ್ರಗಳ ಸಂಶೋಧನೆಗೆ ಪ್ರೋತ್ಸಾಹ ದೊರೆಯುತ್ತದೆ.

ಹೀಗಾಗಿ ಪ್ರಸ್ತುತ ಅಧ್ಯಯನ ಮಾಡಿರುವುದರಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿನ ಪಾರಂಪರಿಕ, ಐತಿಹಾಸಿಕ, ಸಾಂಸ್ಕೃತಿಕ, ಪರಿಸರ ಮತ್ತು ಮನರಂಜನೆ, ಶೈಕ್ಷಣಿಕ ಮತ್ತು ಆರೋಗ್ಯ ಹಾಗೂ ಆರ್ಥಿಕ ಪ್ರವಾಸೋದ್ಯಮ ಕ್ಷೇತ್ರಕ್ಕೆ ಕೊಡುಗೆಯನ್ನು ನೀಡುವ ಪ್ರವಾಸಿ ತಾಣಗಳ ಬಗ್ಗೆ ಮಾತ್ರ ಅಧ್ಯಯನ ಮಾಡಲಾಗಿದೆ. ಅವುಗಳು ಹೇಗೆ ಜಿಲ್ಲೆಯ ಮತ್ತು ರಾಷ್ಟ್ರೀಯ ಪ್ರವಾಸೋದ್ಯಮ ಕ್ಷೇತ್ರದೊಂದಿಗೆ, ಸಮಗ್ರ ಪ್ರಗತಿ ಹಾಗೂ ಪ್ರವಾಸೋದ್ಯಮ ಅಭಿವೃದ್ಧಿಯಲ್ಲಿ ಅನುಸರಿಸಬೇಕಾಗಿರುವ ಮಾರ್ಗಗಳನ್ನು ಕಂಡುಕೋಳ್ಳಲಾಗಿದೆ. ಇಂತಹ ಪ್ರವಾಸೋದ್ಯಮ ಬಗೆಗಳಿಂದ ಜಿಲ್ಲೆಯ ವಿಭಿನ್ನ ಕ್ಷೇತ್ರಗಳ ಮೇಲೆ ಉಂಟುಮಾಡುವ ಧನಾತ್ಮಕ ಮತ್ತು ಋಣಾತ್ಮಕ ಪರಿಣಾಮಗಳನ್ನು ಕಂಡುಕೊಳ್ಳಲಾಗಿದೆ. ಜಿಲ್ಲೆಯ ಪ್ರವಾಸೋದ್ಯಮ ಕ್ಷೇತ್ರವನ್ನು ಯೋಜಿತ ರೀತಿಯಲ್ಲಿ, ಸ್ಥಳೀಯ ಮತ್ತು ಪರಂಪರೆಯನ್ನು ಉಳಿಸಿಕೊಂಡು ಅತ್ಯಂತ ಎಚ್ಚರಿಕೆಯಿಂದ ಸುಸ್ಥಿರ ಪ್ರವಾಸೋದ್ಯಮ ಮಾರ್ಗದಲ್ಲಿ ಅಭಿವೃದ್ಧಿಪಡಿಸಬೇಕಾಗಿದೆ.

## ಕರ್ನಾಟಕ ಸರ್ಕಾರದ ಇತ್ತೀಚಿನ ಕಾರ್ಯಕ್ರಮಗಳು

ಪ್ರವಾಸೋಧ್ಯಮ ಇಲಾಖೆಯ ಕಳೆದ ವರ್ಷಗಳಲ್ಲಿ ಪ್ರವಾಸೋಧ್ಯಮ ವಲಯಕ್ಕೆ ಹೊಸ ಕಾಯಕಲ್ಪ ನಿಡುವ ಪ್ರವಾಸಿ ಕ್ಷಿತಿಜ ವಿಸ್ತರಿಸುವ ಪ್ರವಾಸೋಧ್ಯಮದ ನೂತನ ಸಾಧ್ಯತೆಗಳನ್ನು ಅವಿಷ್ಕರಿಸುವ ನಿಟ್ಟಿನಲ್ಲಿ ನಿರಂತರವಾಗಿ ಪ್ರಯತ್ನ ಮಾಡುತ್ತಿರವುದನ್ನು ಕಾಣಬಹುದು. ಅವುಗಳಲ್ಲಿ

1. ರಾಷ್ತ್ರ ಮಟ್ಟದ ಹಾಗೂ ಅಂತರ ರಾಷ್ಟ್ರೀಯ ವಸ್ತುಪ್ರದರ್ಶನ.
2. ಬೆಂಗಳೂರು, ಮುಂಬೈ, ಹೈದರಾಬಾದ್, ಅಹಮದಾಬಾದ್ ಹಾಗೂ ಕೊಚ್ಚಿನ್ ವಿಮಾನ ನಿಲ್ದಾಣಗಳಲ್ಲಿ ಹೊರಾಂಗಣ ಪ್ರಚಾರ.
3. ಅಂತರ ರಾಷ್ಟ್ರೀಯ ಹಾಗೂ ರಾಷ್ಟ್ರೀಯ ನಿಯಮಕಾಲಿಕೆಗಳಿಲ್ಲಿ ಜಾಹೀರಾತು ಆಂದೋಲನ ಕಾರ್ಯಗಳ ಜೊಗೆಗೆ ಕರ್ನಾಟಕದ ಬಗ್ಗೆಯೂ ಈ ನಿಯತಕಾಲಿಕೆಗಳು ಹಾಗೂ ಜಾಹಿರಾತುಗಳಲ್ಲಿ ಪ್ರಚಾರಮಾಡುವ ಕಾರ್ಯ ಮಾಡಿದರೆ ಕರ್ನಾಟಕವು ಅತ್ಯುನ್ನತ ಪ್ರವಾಸಿತಾಣವಾಗಿ ಅಭಿವೃದ್ಧಿ ಹೊಂದುತ್ತದೆ.

## ಐತಿಹಾಸಿಕ ಮತ್ತು ಸಾಂಸ್ಕೃತಿಕ ಮೂಲ ಸೌಕರ್ಯಗಳು

ಭವ್ಯವಾದ ಕೋಟೆ ಕೊತ್ತಲಗಳು, ಅರಮನೆ, ಸ್ಮಾರಕಗಳು, ವಸ್ತುಸಂಗ್ರಹಾಲಯ ಹಾಗೂ ದೇವಾಲಯ ಮೊದಲಾದವುಗಳು ಪ್ರೇಕ್ಷಕರನ್ನು ಆಕರ್ಷಿಸುವ ಪ್ರಮುಖ ಐತಿಹಾಸಿಕ ಸ್ಥಳಗಳಾಗಿವೆ. ಇದು ಯಾವುದೇ ಒಂದು ಜನಾಂಗ ಅಥವಾ ದೇಶಕ್ಕೆ ಸೀಮಿತವಾಗಿರದೆ ಇಡೀ ಮನುಕುಲದ ಸಂಪತ್ತಾಗಿ ಪರಿಗಣಿಸಲ್ಪಟ್ಟಿದೆ. ಇಂತಹ ಐತಿಹಾಸಿಕ ಮತ್ತು ಸಾಂಸ್ಕೃತಿಕ ಸಂಪತ್ತನ್ನು

ಹೊಂದಿರುವ ಪ್ರದೇಶಗಳು ಐತಿಹಾಸಿಕ ಪ್ರವಾಸೋದ್ಯಮದ ಬೆಳವಣಿಗೆಗೆ ಪೂರಕವಾದ ಮೂಲಸೌಕರ್ಯಗಳನ್ನು ಅಭಿವೃದ್ಧಿಪಡಿಸುವಲ್ಲಿ ಮುಂಚೂಣಿಯಲ್ಲಿರುತ್ತದೆ.

**ಹೆದ್ದಾರಿ ಮಾರ್ಗಸೂಚನಾ ಫಲಕಗಳು**

ಸಾಮಾನ್ಯವಾಗಿ ಪ್ರವಾಸಿಗರು ಅನ್ಯರಾಜ್ಯ, ಅನ್ಯದೇಶಗಳಿಂದ ಬರುವವರು, ಅನ್ಯಭಾಷೆ ಇಲ್ಲಿಯ ಪ್ರದೇಶಗಳಿಗೆ ಸೇರಿದವರಾಗಿರುತ್ತಾರೆ. ಅವರು ಪ್ರವಾಸವನ್ನು ಹಗಲು ವೇಳೆಯಲ್ಲದೆ ಕೆಲವೊಮ್ಮೆ ರಾತ್ರಿವೇಳೆಯಲ್ಲೂ ಸಹ ಪ್ರಯಾಣಿಸುತ್ತಾರೆ. ತಾವು ತಲುಪಬೇಕಾದ ಸ್ಥಳ ಮುಂದೆ ಸಿಗಬಹುದಾದ ಉಪಹಾರ ಕೇಂದ್ರ ಆಸ್ಪತ್ರೆಗಳು, ಆಸ್ಪತ್ರೆಗಳು, ಇಂಧನ, ಮೊದಲಾದ ಮಾಹಿತಿಗಳನ್ನು ರಸ್ತೆ ಬದಿಯ ಫಲಕಗಳಲ್ಲಿ ಸೂಚಿಸಿದರೆ ಪ್ರವಾಸಿಗರ ಸಂಚಾರಕ್ಕೆ ಅನುಕೂಲವಾಗುತ್ತದೆ. ಅಂತಹ ಫಲಕಗಳು ಸ್ಥಳಿಯ ಭಾಷೆಯಲ್ಲಿ ಮಾತ್ರವಲ್ಲದೆ, ಹಿಂದಿ ಮತ್ತು ಇಂಗ್ಲೀಷ್ ಮುಂತಾದ ಭಾಷೆಗಳಲ್ಲಿ ಇರಬೇಕು. ಆದ್ದರಿಂದ ಅನ್ಯ ಭಾಷಿಕರಾದ ಪ್ರವಾಸಿಗರಿಗೆ ಅನುಕೂಲವಾಗುತ್ತದೆ ಮತ್ತು ಅವರ ಭಾಷೆಯಲ್ಲಿರುವುದರಿಂದ ಅವರಿಗೆ ಸುಲಭವಾಗಿ ಅರ್ಥವಾಗುತ್ತದೆ. ಇದರಿಂದ ಪ್ರವಾಸೋದ್ಯಮ ಉತ್ತಮ ಮಟ್ಟದಲ್ಲಿ ಮುಂದುವರೆಯುತ್ತದೆ.

* * * * * * * * * * * * * * *